# ಆದರ್ಶ ಶಿಕ್ಷಕ ಜಿ. ಎಂ. ಹೆಗಡೆ



ಸಾಧನೆ ಬೋಧನೆಗಳನ್ನು ಅವಿರತವಾಗಿ ಮೈಗೂಡಿಸಿಕೊಂಡಿರುವ ಜಿ. ಎಂ. ಹೆಗಡೆ ಉತ್ತರ ಕನ್ನಡ ಜಿಲ್ಲೆಯ ಶಿರಸಿ ತಾಲ್ಲೂಕಿನ ತಾರಗೋಡಿನವರು. ಎಂ.ಟಿ.ವಿ. ಆಚಾರ್ಯರ ಅಂಚೆ ಕಲಾ ಶಿಕ್ಷಣದ ಮೂಲಕ ಉನ್ನತ ಕಲಾ ಶಿಕ್ಷಣ ಪಡೆದ ಇವರು ಪ್ರಾರಂಭದ ಕಲಾ ಶಿಕ್ಷಣ ಪಡೆದದ್ದು ಗದುಗಿನ ವಿಜಯ ಕಲಾಮಂದಿರದಲ್ಲಿ.

ಎಂ.ಟಿ.ವಿ.ಯವರ ಕಲಾಶೈಲಿಯನ್ನೇ ಕರಗತ ಮಾಡಿಕೊಂಡಿದ್ದು ಮಹಾಭಾರತ, ರಾಮಾಯಣ ಕಥಾ ಸನ್ನಿವೇಶಗಳಿಗೆ ವಾರ ಮತ್ತು ಮಾಸಪತ್ರಿಕೆಗಳಿಗೆ ಚಿತ್ರ ರಚಿಸಿಕೊಟ್ಟಿದ್ದಾರೆ. ತದ್ರೂಪ ಚಿತ್ರ ರಚನೆ, ಭೂದೃಶ್ಯ, ಮುಖಚಿತ್ರಗಳು ಇವರ ವೈಶಿಷ್ಟ್ಯ.

ಗಣಪತಿಯನ್ನು ಕುರಿತು ರಚಿಸಿರುವ ಚಿತ್ರಗಳಂತೂ ಹೆಗಡೆಯವರ ಅಸಾಧಾರಣ ಕಲ್ಪನೆಯ ಕೃತಿಗಳಾಗಿವೆ. ದ್ವಾದಶ ರಾಶಿ ಕುರಿತ ಗಣಪನ ಸರಣಿ ಚಿತ್ರ, ಹಿಂದೂಸ್ತಾನಿ ರಾಗಮಾಲಿಕೆ ಕುರಿತ ಗಣಪಗಳು, ಜೊತೆಗೆ ಎಲ್ಲಾ ತರಹದ ವಾದ್ಯ ನುಡಿಸುತ್ತಿರುವ ಗಣಪ, ಹೀಗೆ ನಲವತ್ತಕ್ಕೂ ಹೆಚ್ಚಿನ ಕಲಾರಚನೆ ಮಾಡಿ ನಾಡಿನಾದ್ಯಂತ ಪ್ರದರ್ಶಿಸಿದ್ದಾರೆ.

ಹೆಗಡೆಯವರ ಕೃತಿಗಳು ಒಂದೇ ಬಗೆಯ ಶೈಲಿಯವು ಎಂದು ತಿಳಿಯಬೇಕಾಗಿಲ್ಲ. ಮೂರ್ತದಿಂದ ಅಮೂರ್ತದವರೆಗೆ ಎಲ್ಲಾ ಬಗೆಯ ಶೈಲಿ ಚಿತ್ರಗಳನ್ನು ಅವರು ರಚಿಸಿದ್ದಾರೆ. ಕುಡಿತದ ಪರಿಣಾಮ, ಅನಿಲ ದುರಂತ, ಪ್ರವಾಹಗಳಂತಹ ಜ್ವಲಂತ ಸಮಸ್ಯೆಗಳನ್ನು ಚಿತ್ರಿಸಿದ್ದಾರೆ. ವಿಷಯ ಪ್ರಧಾನ ಚಿತ್ರ ರಚಿಸುವುದರತ್ತ ಅಪಾರ ಒಲವು. ನಾವು ಬರೆಯುವ ಕಲೆ ಜನಸಾಮಾನ್ಯನಿಗೆ ಮುಟ್ಟಬೇಕೆಂಬುದು ಅವರ ನಿಲುವು.

ಜಿಲ್ಲಾ ಮಟ್ಟದ ಆದರ್ಶ ಶಿಕ್ಷಕ ಪ್ರಶಸ್ತಿ (1992) ಗಳಿಸಿರುವ ಇವರು ಯಕ್ಷಗಾನ, ಛಾಯಾಗ್ರಹಣ, ಲೇಖನ ಬರೆಯುವುದು, ಹೋಮಿಯೋಪತಿ ಚಿಕಿತ್ಸೆ ಮುಂತಾದ ಹವ್ಯಾಸಗಳಲ್ಲಿ ತೊಡಗಿರುವ ಒಳ್ಳೆಯ ಸ್ನೇಹಜೀವಿ.

*ಚಿತ್ರ-ಲೇಖನ : ಎಲ್. ಶಿವಲಿಂಗಪ್ಪ*
*ಪ್ರಿನ್ಸಿಪಾಲ್, ಆಚಾರ್ಯ ಚಿತ್ರಕಲಾ ಭವನ*
*ಬಸವನಗರ, ಮಾರತಹಳ್ಳಿ ಅಂಚೆ*
*ಬೆಂಗಳೂರು - 560 037*



'ಬಿಡುಗಡೆ' (ತೈಲ ಕೃತಿ)



'ಧ್ಯಾನ' (ತೈಲ ವರ್ಣ)



'ಸಂಗೀತಗಾರ' (ತೈಲ ಕೃತಿ)



'ದುಷ್ಯಂತ - ಶಕುಂತಲೆ' (ಜಲ ವರ್ಣ)



'ನಿಸರ್ಗ' (ತೈಲ ಕೃತಿ)

# ಹೊಸತು

## ಒಳಗೇನಿದೆ.....




*ಚಿತ್ರಗಳು : ಪಿ. ಮಹಮ್ಮದ್, ಮೋನಪ್ಪ , ಬಿ. ವಿಲ್ಸನ್, ಜೆ. ಎಂ. ಬೊಮ್ನಳ್ಳಿ*
*ಶ್ರೀಹರಿ, ಸುರೇಶ್, ಎನ್. ಆರ್. ಬೊಮ್ನಳ್ಳಿ, ವಸಂತ ಹೊಸಬೆಟ್ಟು*
*ಮುಖಚಿತ್ರ : ವರ್ಣಪಾರದರ್ಶಿಕೆ - ಡಾ|| ಆರ್. ಹರ್ಷ (ಚಿತ್ರದಲ್ಲಿ ರುಚಿ)*
*ವಿನ್ಯಾಸ : ನವಕರ್ನಾಟಕ ವಿನ್ಯಾಸ*
*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

**ನ**ಮ್ಮ ದೇಶಕ್ಕೆ ಆತಂಕ ಉಂಟುಮಾಡುವ ಮಂದಿ ಎಲ್ಲೆಂದರಲ್ಲಿ ಬಾಂಬು ಎಸೆಯುವುದು, ಗುಂಡು ಹಾರಿಸುವುದು, ಹಳ್ಳಿಗಳಿಗೆ ನುಗ್ಗಿ ಜನರನ್ನು ಕೊಲ್ಲುವುದು ಮುಂತಾದ ಭೀಕರ ಕೃತ್ಯಗಳನ್ನು ಎಸಗುತ್ತಿದ್ದಾರೆ. ಜಮ್ಮು ಬಳಿ ಇತ್ತೀಚೆಗೆ ಘಟಿಸಿದ ದುರಂತ ಅಂತಹ ಒಂದು ದುಷ್ಕೃತ್ಯದ ಪರಿಣಾಮ. ಇದರಲ್ಲಿ ನೆರೆರಾಷ್ಟ್ರದ ಕೈವಾಡವಿದೆ ಎಂಬ ಭಾರತ ಸರ್ಕಾರದ ಆಪಾದನೆಗೆ ಉತ್ತರವಾಗಿ ಪಾಕಿಸ್ತಾನಿ ಸರ್ಕಾರದ ವಕ್ತಾರ ಹೇಳಿದ್ದು ಹೀಗೆ : ''ಹಾಗಿದ್ದರೆ ಗಡಿಯನ್ನು ಕಾಯುತ್ತಿರುವ ನಲವತ್ತು ಸಾವಿರ ಭಾರತೀಯ ಸೈನಿಕರು ಏನು ಮಾಡುತ್ತಿದ್ದಾರೆ ?'' ಅಂದರೆ, ಆತನ ಪ್ರಕಾರ ಇಂತಹ ಭಯೋತ್ಪಾದನಾ ಚಟುವಟಿಕೆಗಳಲ್ಲಿ ತೊಡಗಿರುವವರು ಆಂತರಿಕ ಆತಂಕಕಾರಿಗಳು. ಹೀಗೆ ಹೇಳುವುದರಿಂದ ತನ್ನ ಕೈವಾಡವೇನೂ ಇಲ್ಲವೆಂದು ಪ್ರಪಂಚವೆಲ್ಲಾ ನಂಬುತ್ತದೆಯೆಂಬ ಭ್ರಮೆ ಪಾಕಿಸ್ತಾನದ ಸರ್ಕಾರಕ್ಕಿದೆ. ಅಮೆರಿಕಾ ಸರ್ಕಾರಕ್ಕೆ ಎಲ್ಲ ವಿದ್ಯಮಾನಗಳ ಬಗೆಗೂ ಖಚಿತ ಮಾಹಿತಿ ಇದೆ. ಆದರೆ ಆ ದೇಶದ ಪ್ರತಿನಿಧಿಗಳು ದೆಹಲಿಯಲ್ಲಿ ಹೇಳುವುದೇ ಬೇರೆ, ಇಸ್ಲಾಮಾಬಾದಿನಲ್ಲಿ ಹೇಳುವುದೇ ಬೇರೆ. ಇದೇನೂ ಹೊಸ ಅನುಭವವಲ್ಲ. ಇದು ಅಮೆರಿಕಾದ ಎಲ್ಲ ಅಧ್ಯಕ್ಷರೂ ಎಲ್ಲ ದೇಶಗಳ ಸಂದರ್ಭದಲ್ಲೂ ಅನುಸರಿಸಿರುವ ನೀತಿ. ಆಯಾ ದೇಶಗಳ ಸಂಪತ್ತನ್ನು ದೋಚಲು ಎಂತಹ ರಾಜಕೀಯ ತಂತ್ರ ಅಗತ್ಯವೆಂಬುದನ್ನು ಅಮೆರಿಕಾದ ಅಧ್ಯಕ್ಷರಿಗಿಂತಲೂ ಹೆಚ್ಚಾಗಿ ಆ ದೇಶದ ಕೇಂದ್ರ ಗೂಢಚಾರ ಸಂಸ್ಥೆಗೆ ಗೊತ್ತಿರುತ್ತದೆ. ಭಾರತದ ಇಂದಿನ ನಾಯಕರು ಅದನ್ನು ತಿಳಿದಿಲ್ಲದಿದ್ದರೆ ಈಚಿನ ದಶಕಗಳ ಪ್ರಪಂಚದ ಇತಿಹಾಸದ ಪ್ರಾಥಮಿಕ ಪಾಠಗಳನ್ನೂ ಅವರು ಗ್ರಹಿಸಿಲ್ಲವೆಂದರ್ಥ. ಭಾರತೀಯ ಜನತಾ ಪಕ್ಷದ ವಕ್ತಾರರು ಅಮೆರಿಕಾ ಸಾಕಷ್ಟು ಪರಿಣಾಮಕಾರಿಯಾಗಿ ಪಾಕಿಸ್ತಾನದ ಮೇಲೆ ಒತ್ತಡ ತಂದಿಲ್ಲವೆಂದು ರೋಷದ ಮಾತನ್ನಾಡಿದ್ದಾರೆ. ಅದು ಅಮೆರಿಕಾಕ್ಕೆ ತಟ್ಟಲು ಸಾಧ್ಯವಿಲ್ಲದಂತಹ ಸನ್ನಿವೇಶವನ್ನು ಅವರ ಪಕ್ಷದ ನಾಯಕರೇ ರಚಿಸಿದ್ದಾರೆಂಬುದನ್ನು ಅವರು ಒಪ್ಪುವುದಿಲ್ಲ, ಅಷ್ಟೆ.

ಪಾಕಿಸ್ತಾನಕ್ಕೆ ಪಾಠ ಕಲಿಸುವುದಾಗಿ ಆಗಾಗ್ಗೆ ಪಾಠ ಒಪ್ಪಿಸುವ ವಾಜಪೇಯಿ ಮತ್ತು ಅವರ ಸಂಪುಟದ ಕೆಲವು ಸದಸ್ಯರು ಆಂತರಿಕ ಭದ್ರತೆಯನ್ನು ಬಿಗಿಗೊಳಿಸುವುದರ ಜೊತೆಗೆ ಅಮೆರಿಕಾದೊಡನೆ ಎಂತಹ ನಂಟು ಕ್ಷೇಮಕರ ಎಂಬುದನ್ನು ಮೊದಲು ತಿಳಿಯಬೇಕು. ಕನ್ಯಾಕುಮಾರಿಯಿಂದ ಕೆಲವೇ ನಿಮಿಷಗಳ ದೂರದಲ್ಲಿರುವ ಡೀಗೋ ಗಾರ್ಸಿಯಾ ನೆಲೆಯಿಂದ ಅಮೆರಿಕಾದ ಭಾರಿ ಯುದ್ಧ ನೌಕೆಯೊಂದು ಮೇ ಎರಡನೇ ವಾರದಲ್ಲಿ ಕೊಚ್ಚಿ ಬಂದರಿಗೆ ಬಂದಿತು. ನಾವಿಕರಿಗೆ ಕೊಚ್ಚಿಯಲ್ಲಿ ಔತಣ ಮತ್ತು ವಿಹಾರ ! ಅವರ ವಿಹಾರಗಳ ವಿವಿಧ ಸ್ವರೂಪಗಳ ಪರಿಚಯ ಬೇಕಾದರೆ ಜಪಾನಿನ ಓಕಿನೋವಾ ನೆಲೆಯ ಅನುಭವ ಸಾಕು. ಅಮೆರಿಕೆಯ ನಾವಿಕರು ಜಪಾನಿ ಮಹಿಳೆಯರ ಮೇಲೆ ನಡೆಸುವ ಅತ್ಯಾಚಾರಗಳನ್ನು ಜಾರ್ಜ್ ಫರ್ನಾಂಡೀಸ್ ಗಮನಿಸುವುದಿಲ್ಲ. ಏಕೆಂದರೆ ಅವರಿಗೆ ಇಂತಹುದೆಲ್ಲಾ ಮಾಮೂಲಿ ಘಟನೆಗಳು ! ಭಾರತದಲ್ಲಿ ಮಹಿಳೆಯರ ಮೇಲೆ ದಿನನಿತ್ಯ ಅತ್ಯಾಚಾರ ನಡೆಯುತ್ತಿರುವಾಗ ಗುಜರಾತಿನ ಅತ್ಯಾಚಾರದ ವಿಶೇಷವೇನಿದೆ ಎಂದು ಅವರು ಲೋಕಸಭೆಯಲ್ಲೇ ಹೇಳಲಿಲ್ಲವೇ ? ಅಮೆರಿಕಾದ ಭಾರಿ ಯುದ್ಧ ನೌಕೆಗಳನ್ನು ಭಾರತದ ಬಂದರುಗಳಿಗೆ ಬರಮಾಡಿಕೊಂಡರೆ ಅಮೆರಿಕಾ ಆಪ್ತ ಸ್ನೇಹಿತನಾಗಬಹುದೆಂಬ ವಾಜಪೇಯಿ ನಿರೀಕ್ಷೆ ದೇಶಕ್ಕೆ ಮಾರಕವಾಗುತ್ತಿದೆ. ಆಗ್ರಾದ ಬಳಿ ಭಾರತ ಮತ್ತು ಅಮೆರಿಕಾದ ಸೈನಿಕರು ಜಂಟಿ ಕವಾಯತ್ತು ಮಾಡಿದ್ದಾರೆ. ಏನಿದರರ್ಥ ? ಇದು ಭಾರತವನ್ನು ಬಲಗೊಳಿಸುವ ಬದಲು ನಮ್ಮನ್ನು ಅಮೆರಿಕಾದ ಅನುಯಾಯಿಯನ್ನಾಗಿಸುತ್ತಿದೆ. ರೋಕ್ಕಾ ಬರುತ್ತಾಳೆ, ರೈಸ್ ಬರುತ್ತಾಳೆ, ಪವೆಲ್ ಬರುತ್ತಾನೆ, ಬ್ಲಾಕ್‌ವಿಲ್ ಇಲ್ಲೇ ಇದ್ದಾನೆ; ಅವರೆಲ್ಲರ ಸಿಹಿ ಮಾತುಗಳನ್ನು ಕೇಳಿ, ಇನ್ನೇನು ಪಾಕಿಸ್ತಾನ ಮಣ್ಣು ಮುಕ್ಕುತ್ತದೆ ಎಂಬ ಅಭಿಪ್ರಾಯ ವಾಜಪೇಯಿ ಸರ್ಕಾರಕ್ಕೆ ಮೂಡುತ್ತದೆ. ಆದರೆ ಭಯೋತ್ಪಾದಕ ಕೃತ್ಯಗಳು ಮಾತ್ರ ನಿಲ್ಲುವುದಿಲ್ಲ. ಅವನ್ನು ತಡೆಗಟ್ಟಲು ಅಮೆರಿಕಾ ಯತ್ನಿಸುತ್ತದೆಯೆಂಬ ಭ್ರಾಂತಿ ನಮ್ಮ ದೇಶವನ್ನು ಇನ್ನೂ ದೊಡ್ಡ ಪ್ರಪಾತಕ್ಕೆ ತಳ್ಳುತ್ತದೆ.

ಕಾಶ್ಮೀರದ ಸಮಸ್ಯೆಯನ್ನು ಪರಿಹರಿಸಲು ಅಮೆರಿಕಾ ಸಹಾಯ ಮಾಡುತ್ತದೆಂಬ ವಾಜಪೇಯಿ ಲೆಕ್ಕಾಚಾರ ಅರ್ಥವಿಲ್ಲದ್ದು. ಕಾಶ್ಮೀರಕ್ಕೆ ಪರಿಹಾರವನ್ನು ನೀಡುವುದರಲ್ಲಿ ಕಾಶ್ಮೀರದ ಜನ ಮೊದಲಿಗರು; ಅವರೊಡನೆ ಸಂವಾದ ಅಗತ್ಯ, ಅವರ ನೇರ ಭಾಗವಹಿಸುವಿಕೆಯು ಭಯೋತ್ಪಾದನೆಗೆ ಉತ್ತರ. ಎಲ್ಲಿಯವರೆಗೆ ಇದನ್ನು ಗ್ರಹಿಸಿ ಕಾರ್ಯಪ್ರವೃತ್ತರಾಗುವುದಿಲ್ಲವೋ ಅಲ್ಲಿಯವರೆಗೆ ಬರ್ಬರ ಹಿಂಸಾಕೃತ್ಯಗಳನ್ನು ಎಸಗುತ್ತಿರಲು ಭಯೋತ್ಪಾದಕರಿಗೆ ಅವಕಾಶವಿರುತ್ತದೆ. ಅದನ್ನು ತಿಳಿದೂ ಮೂಕ ನಾಟಕದ ನಟನೆ ಮಾಡುವ ಅಮೆರಿಕಾ ಬಗ್ಗೆ ಭಾರತದ ಜನತೆ ಎಚ್ಚರದಿಂದಿರಬೇಕು, ಅದನ್ನು ವಾಜಪೇಯಿ ಸರ್ಕಾರಕ್ಕೆ ತಿಳಿಸಿಕೊಡಬೇಕು. ಅಬ್ದುಲ್ ಘನಿ ಲೋನೆ ಸಾರ್ವಜನಿಕ ಮೆರವಣಿಗೆಯಲ್ಲಿದ್ದಾಗ ಹತ್ಯೆಯಾದದ್ದು ನಮ್ಮನ್ನು ಬೆಚ್ಚಿಬೀಳಿಸಿ ಎಚ್ಚರಿಸಬೇಕು. ಇದೇನು ರಾಷ್ಟ್ರವಾಗುತ್ತಿದೆ ನಮ್ಮದು !

ತಿಂಗಳ ಪತ್ರಿಕೆ
ಹೊಸತು
ನೆನ್ನೆಯಿದು ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೩ ಸಂಚಿಕೆ - ೧೧ ಜೂನ್ ೨೦೦೨

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಚಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

*ಹೊಸತು ಕಚೇರಿಯ ವಿಳಾಸ*

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in
website : www.navakarnatakabooks.com

## ಸಂಪಾದಕೀಯ

# ನಮ್ಮ ಪ್ರಜಾಪ್ರಭುತ್ವ ಹೀಗಿರಬೇಕೆ ?

**ಗು**ಜರಾತಿನ ಅಮಾನವೀಯ ಹಿಂಸಾಚಾರಗಳ ಹಿನ್ನೆಲೆಯಲ್ಲಿ ಲೋಕಸಭೆಯು ಒಂದು ನಿರ್ಣಯವನ್ನು ಚರ್ಚೆಗೆತ್ತಿಕೊಂಡಾಗ ವಾಜಪೇಯಿ ಸರ್ಕಾರವು ತನ್ನ ಪ್ರಜಾಪ್ರಭುತ್ವವಾದಿ ನೆಲೆಯನ್ನು ಮಾರ್ಮಿಕವಾಗಿ ಸ್ಪಷ್ಟಗೊಳಿಸಿತು. ಪಾರ್ಲಿಮೆಂಟ್ ಅಂದರೆ 'ಸಂತೆಯ ಮಾತು' ಎಂದು ಬರ್ನಾರ್ಡ್ ಶಾ ಬಹು ಹಿಂದೆ ಹೇಳಿದ್ದುದನ್ನು ಸಾರ್ಥಕಗೊಳಿಸುವುದು ವಾಜಪೇಯಿ - ಮಹಾಜನ್ ಅನುಸರಿಸಿದ ಕ್ರಮದ ನಿಜವಾದ ಅರ್ಥ. ಲೋಕಸಭೆಯ ಚರ್ಚೆಯಲ್ಲಿ ಭಾರತೀಯ ಜನತಾ ಪಕ್ಷವು ತನ್ನ ಅಧಿಕೃತ ವಾಣಿಯಾಗಿ ಆಯ್ಕೆ ಮಾಡಿಕೊಂಡಿದ್ದು ಸಚಿವೆ ಉಮಾ ಭಾರತಿ ಎಂಬಾಕೆಯನ್ನು. ಆಕೆಯ ವಾಕ್ಪಟುತ್ವ ಎಲ್ಲರಿಗೂ ತಿಳಿದಿದೆ. ತೋಳ್ಬಲವೂ ಅಷ್ಟೆ. ಎಷ್ಟೆಂದರೂ ಮಸೀದಿ ಉರುಳಿಸಿದ ಖ್ಯಾತಿ ಆಕೆಯದಲ್ಲವೆ ? ಆದರೆ ಆಕೆಯ ಮಿದುಳಿನ ವ್ಯಾಪ್ತಿ ಅಷ್ಟೇನೂ ಅಮೋಘವಲ್ಲ. ಅಂತೆಯೇ ಆಕೆ ಇತಿಹಾಸವನ್ನು ಗ್ರಹಿಸುವ ಕ್ರಮದಲ್ಲಿ ಯಾವ ಶ್ಲಾಘನೀಯ ಅಧ್ಯಯನದ ಶಿಸ್ತೂ ಇರಲಾರದು. ಗುಜರಾತಿನ ದುರ್ಘಟನೆಗಳಿಗೆ ಸ್ವಾತಂತ್ರ್ಯ ಹೋರಾಟದ ಕಾಲದ ಖಿಲಾಫತ್ ಚಳುವಳಿಯಲ್ಲಿ ಮೂಲವನ್ನು ಕಾಣುವ ಪ್ರತಿಭೆ ಈಕೆಯದು. ಏನನ್ನು ಹೇಳುವುದು ಎಂಬುದಕ್ಕಿಂತ ಎಷ್ಟು ನಿರರ್ಗಳವಾಗಿ ಹೇಳಬಹುದು ಎಂಬುದರ ಪ್ರತೀಕ ಉಮಾ ಭಾರತಿ. ಪಾರ್ಲಿಮೆಂಟಿನ ಚರ್ಚೆಯಲ್ಲಿ ತನ್ನ ಯಾವ ಸದಸ್ಯರನ್ನು ತೊಡಗಿಸಬೇಕೆಂಬುದು ಪ್ರತಿಯೊಂದು ರಾಜಕೀಯ ಪಕ್ಷದ ಸ್ವತಂತ್ರ ಆಯ್ಕೆಯೆಂಬುದು ನಿಜ; ಆದರೆ ಆ ಆಯ್ಕೆಯಲ್ಲಿ ಆಯಾ ಪಕ್ಷದ ಆಶಯವು ವ್ಯಕ್ತವಾಗುತ್ತದೆ. ವಿಷಯಕ್ಕಿಂತಲೂ ಅಬ್ಬರಕ್ಕೆ ಮನ್ನಣೆ ನೀಡುವುದಾಗಿ ಸೂಚಿಸಬೇಕಾದರೆ ಭಾಜಪಕ್ಕೆ ಉಮಾ ಭಾರತಿಗಿಂತಲೂ ಮೇಲಾದ ಪ್ರತಿನಿಧಿ ಸಿಕ್ಕುವ ಸಾಧ್ಯತೆ ಇರಲಿಲ್ಲ. ಆ ಪಕ್ಷವು ಪ್ರಜಾಪ್ರಭುತ್ವದ ಆಕಾಂಕ್ಷೆಗಳನ್ನು ಅರ್ಥೈಸುವ ಮಾದರಿ ಈ ಆಯ್ಕೆಯಲ್ಲಿದೆ.

ಇನ್ನೊಂದು ಉಗ್ರ ನಿದರ್ಶನವನ್ನು ನೀಡಲು ಆ ಪಕ್ಷಕ್ಕೆ ಅವಕಾಶ ದೊರೆತಾಗ ಶಿವಸೇನೆಯ ಪ್ರಮುಖ ಕಾರ್ಯಕರ್ತ, ಬಾಳ ಠಾಕ್ರೆಯ ತೊಗಲುಗೊಂಬೆ, ಮನೋಹರ ಜೋಶಿಯನ್ನು ಲೋಕಸಭೆಯ ಅಧ್ಯಕ್ಷರನ್ನಾಗಿ ಮಾಡಲಾಯಿತು. ಪಾರ್ಲಿಮೆಂಟ್ ಮತ್ತು ಪ್ರಜಾಪ್ರಭುತ್ವದ ಬಗ್ಗೆ ನಿಖರವಾಗಿ ತನ್ನ ಅಸಡ್ಡೆಯನ್ನು ಪ್ರಕಟಿಸಲು ಶ್ರೀ ಜೋಶಿಯವರನ್ನು ವಾಜಪೇಯಿ ಸಮ್ಮಿಶ್ರ ಸರ್ಕಾರ ಆಯ್ಕೆ ಮಾಡಿಕೊಂಡಿದೆಯೆಂಬ ಅನುಮಾನ ಗಾಢವಾಗಿ ಮೂಡಿದರೆ ಆಶ್ಚರ್ಯವಿಲ್ಲ. ತನ್ನ ಮಿತ್ರ ಪಕ್ಷಗಳ ಅಸಹಾಯಕತೆ ಮತ್ತು ನಿಷ್ಕ್ರಿಯತೆ ಇಷ್ಟೊಂದು ಆಳವಾದದ್ದೆಂದು ಸ್ವತಃ ಭಾರತೀಯ ಜನತಾ ಪಕ್ಷಕ್ಕೂ ಗೊತ್ತಿರಲಿಲ್ಲವೇನೋ ಎನಿಸುತ್ತದೆ. ಇಲ್ಲದಿದ್ದರೆ ಜೋಶಿಯವರು ಅಧ್ಯಕ್ಷರಾಗಲು ಅಷ್ಟು ಸುಗಮ ಹಾದಿ ಹೇಗೆ ತಾನೆ ಇರಲು ಸಾಧ್ಯವಿತ್ತು !

ಉಮಾ ಭಾರತಿ ಮತ್ತು ಮನೋಹರ ಜೋಶಿಯವರ ಹಿನ್ನೆಲೆ ಮತ್ತು ವ್ಯಕ್ತಿತ್ವದ ಬಗ್ಗೆ ಟೀಕೆ ಮಾಡುವುದು ಯಾರ ಉದ್ದೇಶವೂ ಅಲ್ಲ. ಆದರೆ ಇಂಥವರು ಲೋಕಸಭೆಯಲ್ಲಿ ಆಳುವ ಪಕ್ಷಗಳ ಆಯ್ದ ಪ್ರತಿನಿಧಿಗಳಾದಾಗ ನಮ್ಮ ಪಾರ್ಲಿಮೆಂಟ್ ಪದ್ಧತಿ ಯಾವ ಹಾದಿ ಹಿಡಿಯುತ್ತಿದೆ ಎಂಬುದರ ಕಲ್ಪನೆ ಬರಬೇಕು. ಇದು ಆ ಸದಸ್ಯರ ಹಕ್ಕನ್ನು ಪ್ರಶ್ನಿಸುವ ಪ್ರಯತ್ನವಲ್ಲ; ಆದರೆ ಅಂತಹ ಪ್ರಾತಿನಿಧ್ಯದ ಹಿಂದಿರುವ ಮನೋಭಾವದ ಅರಿವು ನಮಗಿರಬೇಕೆಂಬುದರ ಸೂಚನೆ. ನಿನ್ನೆ ನಡೆದ ಪ್ರಮಾದ ನಾಳೆ ಮತ್ತೆ ಆಗಬಾರದೆಂಬ ಕಾಳಜಿ ಇದ್ದರೆ ಈ ಪ್ರತಿನಿಧಿಗಳ ಆಯ್ಕೆಯನ್ನು ಅವಲೋಕಿಸುವುದು ಅಪರಾಧವಾಗುವುದಿಲ್ಲ. ಎಪ್ಪತ್ತರ ದಶಕದಲ್ಲಿ ಗುಜರಾತ್ ಕಂಡ ಚಳುವಳಿಗಳನ್ನು ಮರೆತು ಇಂದಿನ ಬೆಂಕಿಗೆ ಕಾರಣ ಹುಡುಕಲಾದೀತೆ ? ಆಗ್ಗೆ ಮೀಸಲಾತಿಯ ಪ್ರಶ್ನೆಯು 'ನವನಿರ್ಮಾಣ' ಎಂಬ ಚಳುವಳಿಯ ಮೂಲಾಧಾರವಾಗಿತ್ತು. ಅದನ್ನು ಮಾಯಾವತಿ ಮರೆತರೂ ನಾವು ಮರೆಯಬಾರದು. ಆಮೇಲೆ ಸರ್ವಾಧಿಕಾರದ ವಿರುದ್ಧ 'ಸಂಪೂರ್ಣ ಕ್ರಾಂತಿ' ಜಾರಿಯಲ್ಲಿದ್ದಾಗ ರಾಷ್ಟ್ರೀಯ ಸ್ವಯಂಸೇವಕ ಸಂಘವನ್ನು ಕೆಲವರು ಫ್ಯಾಸಿಸ್ಟ್ ತಂಡವೆಂದು ಬಣ್ಣಿಸಿದರು. ಮಾನ್ಯ ಜಯಪ್ರಕಾಶ್ ನಾರಾಯಣ್ ಅವರು ಅದಕ್ಕೆ ಪ್ರತಿಕ್ರಿಯಿಸಿದ್ದು ಹೀಗೆ. : ''ಆರೆಸ್ಸೆಸ್ ಫ್ಯಾಸಿಸ್ಟ್ ಆದರೆ ನಾನೂ ಫ್ಯಾಸಿಸ್ಟೇ.'' ಒಂದು ಸಂಘಟನೆಯ ಪ್ರಣಾಲಿಕೆ ಮತ್ತು ಚಟುವಟಿಕೆಗಳನ್ನು ವಿಶ್ಲೇಷಿಸುವುದರ ಬದಲು ತಮ್ಮ ಘೋಷಣೆಯಿಂದ ಎಲ್ಲರ ಬಾಯಿ ಮುಚ್ಚಿಸಿದ ಜೆ. ಪಿ. ಅವರು ೨೦೦೨ರಲ್ಲಿ ಗುಜರಾತಿನಲ್ಲಿ ಏನೆಲ್ಲಾ ಘಟಿಸಬಹುದೆಂದು ತರ್ಕಿಸಿರಲಿಲ್ಲ. ತಕ್ಷಣದ ಹೋರಾಟವು ಮುಖ್ಯವಾದಾಗ ಸಹಚರರು ಯಾರೆಂಬ ಪ್ರಶ್ನೆಯು ಮುಂದಾಳುಗಳನ್ನು ಬಾಧಿಸುವುದಿಲ್ಲವೆಂದು ತೋರುತ್ತದೆ. ಅಂದು ಜೆ. ಪಿ.ಯವರು ಹೇಳಿದ್ದ ಮಾತುಗಳನ್ನು ಅವರ ಅಂದಿನ ಅನುಯಾಯಿಗಳೆಲ್ಲಾ ಇಂದು ಹೇಳಲು ಸಿದ್ಧರಿದ್ದಾರೆಯೆ ? ಇಂದಿನ ಅನುಭವವು ಅವರ ತೀರ್ಮಾನಗಳನ್ನು ರೂಪಿಸುತ್ತದೆಂದು ಭಾವಿಸಲು ಅಡ್ಡಿಯಿಲ್ಲ. ಆದರೆ ಅನುಭವವು ಹೊಸ ಪ್ರೇರಣೆಯನ್ನೇನೂ ನೀಡದಿದ್ದರೆ ?

'ಫ್ಯಾಸಿಸಂ' ಎಂಬ ಪದದ ಅರ್ಥ ಏನೇ ಇರಲಿ, ಇತರರ ಮೇಲಿನ ದುರಾಕ್ರಮಣದ ಛಾಯೆ ದಟ್ಟವಾಗಿರುವುದು ಅದರ ಲಕ್ಷಣಗಳಲ್ಲಿ ಒಂದು. ಈ ಛಾಯೆಯಿಂದ ಆವೃತರಾದವರಿಗೆ ವಾಲ್ಮೀಕಿಯ ಶ್ರೀರಾಮಚಂದ್ರನಿಗೂ ಅದ್ವಾನಿಯವರ ರಾಮಲಲ್ಲನಿಗೂ ವ್ಯತ್ಯಾಸವೇ ಗೋಚರಿಸುವುದಿಲ್ಲ. ಅಂದರೆ, ಪ್ರಜ್ಞಾಪೂರ್ವಕವಾಗಿ ಅಂತಹ ಭಾವನೆಯನ್ನು ಅವರೆಲ್ಲಾ ಮೈಗೂಡಿಸಿಕೊಂಡಿರುತ್ತಾರೆಂದಲ್ಲ. ಒಂದು ರೀತಿಯ ಭಾವುಕತೆ ಹಾಗೂ ಬೇರೆ ಮತದವರ ಬಗ್ಗೆ ಅವ್ಯಕ್ತವಾದ ಒಂದು ರೀತಿಯ ಜುಗುಪ್ಸೆ ಅವರ ಭಾವನೆಗಳನ್ನು ಕೆರಳಿಸುತ್ತವೆ. ಈ ಸಂಬಂಧವಾಗಿ ಈಚಿನ ಒಂದು ಪ್ರಸಂಗವನ್ನು ಗಮನಿಸಬಹುದು. ಭಾಷಾಶಾಸ್ತ್ರಜ್ಞರೂ ಖ್ಯಾತ ಸಂಶೋಧಕರೂ ಆದ ಡಾ|| ಚಿದಾನಂದ ಮೂರ್ತಿಯವರು ತಮ್ಮ ಎಪ್ಪತ್ತೊಂದನೆಯ ವರ್ಷಕ್ಕೆ ಕಾಲಿರಿಸಿದ ಸಂತೋಷದ ಸಂದರ್ಭದಲ್ಲಿ ಅವರನ್ನು ಯಾರೋ ಪ್ರಶ್ನಿಸಿದರು : ''ನೀವು ಈಚೀಚೆಗೆ ಆರೆಸ್ಸೆಸ್ ಕಡೆ ವಾಲುತ್ತಿದ್ದೀರಿ ಎನ್ನುತ್ತಾರೆ, ಅದಕ್ಕೆ ನಿಮ್ಮ ಪ್ರತಿಕ್ರಿಯೆ ಏನು ?'' ಒಂದು ವರದಿಯ ಪ್ರಕಾರ ಅವರ ಉತ್ತರ ಹೀಗಿತ್ತು: ''ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ ಮತ್ತು ಗಾಂಧೀಜಿ ಹಿಂದುಗಳಾದರೆ ನಾನೂ ಹಿಂದುವೇ.'' ಇದು ಪ್ರಶ್ನೆಗೆ ನೇರ ಉತ್ತರವಲ್ಲ; ಅದು ಚಮತ್ಕಾರದ ಉತ್ತರ. ಏಕೆಂದರೆ, ನರೇಂದ್ರ ಮೋದಿ ಹಾಗೂ ಅಶೋಕ ಸಿಂಘಾಲ್ ಕೂಡ ಹಿಂದುಗಳೇ ಆಗಿದ್ದಾರೆ. ಗಾಂಧೀಜಿಯ ನಂಬಿಕೆ ಮತ್ತು ಆಚರಣೆಗಳು ನರೇಂದ್ರ ಮೋದಿಯ ನಂಬಿಕೆ-ಆಚರಣೆಗಳಲ್ಲ. ಆರೆಸ್ಸೆಸ್ ಪಾಲಿಸುವ ಹಿಂದು ನಂಬಿಕೆ ಮತ್ತು ಆಚರಣೆಗಳು ನರೇಂದ್ರ ಮೋದಿಯವು, ಗಾಂಧೀಜಿಯವಲ್ಲ. ಗಾಂಧೀಜಿಯೊಡನೆ ಸಮೀಕರಿಸಿಕೊಂಡರೆ ಮೋದಿಯೊಡನೆ ಮತ್ತು ಆರೆಸ್ಸೆಸ್ ಜೊತೆ ಸಾಹಚರ್ಯ ಸಾಧುವಲ್ಲ. ಆದ್ದರಿಂದ ಪ್ರಶ್ನೆ ಬಹಳ ಸರಳವಾಗಿದೆ : ನಾವು

ದುರಾಕ್ರಮಣಶಾಲಿಗಳೋ ಅಥವಾ ಸಹನೆ-ಸಾಮರಸ್ಯಗಳ ವರ್ಧಕರೋ ?

ಅನಿರೀಕ್ಷಿತ ರೀತಿಗಳಲ್ಲಿ ಅಸಹನೆ ಪ್ರಕಟಗೊಳ್ಳುವುದಕ್ಕೆ ಅನೇಕ ನಿದರ್ಶನಗಳು ಲಭ್ಯವಿವೆ. ಇತಿಹಾಸ, ವಿಮರ್ಶೆ, ಆತ್ಮಶೋಧ, ಇತ್ಯಾದಿಗಳಲ್ಲಿ ಶ್ರದ್ಧೆ ಇಲ್ಲದಿದ್ದಾಗ ಅನ್ಯಾಕ್ರಮಣಶೀಲತೆಗೆ ಬಲಿಯಾಗುತ್ತೇವೆ. ಭಾರತೀಯ ಸಂಸ್ಕೃತಿಯ ಅವಹೇಳನವಾಗಿದೆ ಯೆಂದು ವಿಶ್ವಹಿಂದುಪರಿಷತ್ತು ಪುಸ್ತಕಗಳನ್ನೋ ಕಲಾವಿದರ ಚಿತ್ರಗಳನ್ನೋ ಬಹಿಷ್ಕರಿಸುತ್ತದೆ; ಮುರಳಿ ಮನೋಹರ ಜೋಶಿಯವರು ಇತಿಹಾಸದ ಘನವಾದ ಪುಸ್ತಕಗಳನ್ನು ತಿದ್ದಿ ಬರೆಸುತ್ತಾರೆ; ಕರ್ನಾಟಕ ಸರ್ಕಾರವು ರಾಜಕಾರಣಕ್ಕಾಗಿ 'ಧರ್ಮಕಾರಣ'ವನ್ನು ಬಹಿಷ್ಕರಿಸುತ್ತದೆ ಮತ್ತು ಶ್ರೇಷ್ಠ ನ್ಯಾಯಾಲಯವು ಅದರ ಬಗ್ಗೆ ವಿಚಾರಣೆ ನಡೆಸಲು ಹತ್ತು ವರ್ಷ ತೆಗೆದುಕೊಳ್ಳುತ್ತದೆ; ಯಾರೋ ಸ್ವಾಮಿಗಳು 'ಮಹಾಚೈತ್ರ'ವನ್ನು ಬಹಿಷ್ಕರಿಸಲು ಅವರ ಶಿಷ್ಯರನ್ನು ಹುರಿದುಂಬಿಸುತ್ತಾರೆ; ಯಾವುದೋ ವಿಶ್ವವಿದ್ಯಾಲಯದ ಪಠ್ಯಪುಸ್ತಕವನ್ನು ಬಹಿಷ್ಕರಿಸುವಂತೆ ಇನ್ನಾವುದೋ ಗುಂಪು ಪ್ರಚೋದನೆ ನೀಡುತ್ತದೆ; ಕರ್ನಾಟಕ ಚಲನಚಿತ್ರ ಮಂಡಲಿಯು ತನ್ನದೇ ಆದ ಚಲನಚಿತ್ರದ ಇತಿಹಾಸದ ಪುಸ್ತಕಗಳಿಗೆ  ಬಹಿಷ್ಕಾರ ಘೋಷಿಸುತ್ತದೆ. ಹೀಗೆ ಅನೇಕ ಉದಾಹರಣೆಗಳನ್ನು ನೀಡಬಹುದು, ಆದರೆ ಅದರ ಅಗತ್ಯವಿಲ್ಲ. ಈ ಎಲ್ಲ ಸಂದರ್ಭಗಳಲ್ಲೂ ನ್ಯಾಯ-ಅನ್ಯಾಯದ ವಿವೇಚನೆಯೇ ಆಧಾರವೆಂದು ಹೇಳಲಾಗುತ್ತದೆ. ಆದರೂ ದಾಖಲೆಗಳು, ವಿಶ್ಲೇಷಣೆ, ಪರಾಮರ್ಶೆ ಮುಂತಾದುವು ಅರ್ಥ ಕಳೆದುಕೊಂಡು ಸಮೂಹದ ಅಥವಾ ವೈಯಕ್ತಿಕ ಅಹಮಿಕೆಗೆ ಆದ್ಯತೆ ದೊರೆತುಬಿಡುವ ಸಂಭವ ಇಲ್ಲವೆನ್ನಲಾಗದು. ಇಲ್ಲೆಲ್ಲಾ ಪ್ರಜಾಪ್ರಭುತ್ವ ಕ್ರಮಕ್ಕೆ ಧಕ್ಕೆ ಉಂಟಾಗುತ್ತದೆ. ಭಾರತೀಯ ಜನತಾ ಪಕ್ಷವು ಪ್ರಜಾಪ್ರಭುತ್ವ ಪದ್ಧತಿಯ ಬಗ್ಗೆ ಇಟ್ಟುಕೊಂಡಿರುವ ನಿಲುವನ್ನು ಆ ಪಕ್ಷದ ಕಾರ್ಯವಿಧಾನದಿಂದ ಮಾತ್ರವೇ ಅಳೆಯಬೇಕು. ಹಾಗೆ ಮಾಡಿದಾಗ ಪ್ರಜಾಪ್ರಭುತ್ವವನ್ನು ಬೆಳೆಸುವುದರ ಬದಲು ಅನ್ಯಾಕ್ರಮಣಶೀಲತೆಯನ್ನು ಇಂದಿನ ಭಾಜಪ ಮತ್ತು ಮಿತ್ರಪಕ್ಷಗಳು ಬೆಳೆಸುತ್ತಿವೆ ಎಂಬ ಅಭಿಪ್ರಾಯ ಮೂಡುತ್ತದೆ. ಈ ಸನ್ನಿವೇಶವನ್ನು ಮಾರ್ಪಡಿಸಿ ಜನಹಿತವನ್ನು ಗುರಿಯಾಗುಳ್ಳ ಪ್ರಜಾಪ್ರಭುತ್ವದ ಪೋಷಣೆ ಮಾಡುವುದು ನಮ್ಮ ಕರ್ತವ್ಯವಾಗಬೇಕು.

## ಸ್ನೇಹವಾಹಿನಿ

**ನ**ಮ್ಮ ದೇಶ ಕೋಮುವಾದದ ದಳ್ಳುರಿಯಲ್ಲಿ ಬೇಯುತ್ತಿದೆ. ಒರಿಸ್ಸಾದಲ್ಲಿ ಫಾದರ್ ಗ್ರಹಾಂ ಸ್ಟೇನ್ಸ್ ಮತ್ತು ಅವರ ಮಕ್ಕಳ ಸಜೀವ ದಹನ, ಪಾರ್ಲಿಮೆಂಟ್ ಮತ್ತು ಕಾಶ್ಮೀರ್, ಒರಿಸ್ಸಾ ವಿಧಾನಸಭೆಗಳ ಮೇಲೆ ದಾಳಿ, ಗೋಧ್ರಾ ರೈಲು ದಹನ, ಅದಕ್ಕೆ ಪ್ರತೀಕಾರದ ಹೆಸರಿನಲ್ಲಿ ಗುಜರಾತ್ ರಾಜ್ಯಾದ್ಯಂತ ಅಮಾಯಕರ ನರಮೇಧ ಇವೆಲ್ಲ ಮಾನವ ಜಗತ್ತನ್ನೇ ತಲ್ಲಣಗೊಳಿಸಿವೆ. ಗುಜರಾತ್‌ನಲ್ಲಿ ಇತ್ತೀಚಿನವರೆಗೂ ಬರುತ್ತಿರುವ ವರದಿಗಳು ಬರ್ಬರತೆಯ ಸುದ್ದಿಗಳನ್ನೇ ತರುತ್ತಿವೆ. ಮಕ್ಕಳ ದಹನ, ಮಹಿಳೆಯರ ಮಾನಭಂಗ, ಆಸ್ತಿಪಾಸ್ತಿ ಲೂಟಿ, ಇಡೀ ರಾಜ್ಯ ವ್ಯವಸ್ಥೆ ಗಲಭೆಗೆ ಪ್ರಚೋದಿಸುತ್ತಿರುವ ರೀತಿ ಇವೆಲ್ಲ ಮನುಷ್ಯ ತಲುಪಿದ ಪಾಶವೀ ಸ್ಥಿತಿಯನ್ನು ತೋರಿಸುತ್ತವೆ. ಇಡೀ ಗುಜರಾತ್ ರಾಜ್ಯದಲ್ಲಿ ಜನರ ಮನಸ್ಸುಗಳನ್ನು ಮತೀಯ ಮತ್ಸರದಿಂದ ಒಡೆದು ಹಾಕುವ ಪ್ರಯತ್ನದಲ್ಲಿ ಅಲ್ಲಿನ ಮತಾಂಧರು ನಿರತರಾಗಿದ್ದಾರೆ ಮತ್ತು ಆ ಭಾವನೆಗಳನ್ನು ದೇಶದ ಇತರ ರಾಜ್ಯಗಳಿಗೂ ಹರಡಲು ಕಾತರರಾಗಿದ್ದಾರೆ. ಭಾರತದ ಬಹುಮುಖಿ ಸಂಸ್ಕೃತಿಯ ಅಂತರ್‌ಜಲ ಅಪಾಯದಲ್ಲಿದೆ. ಈ ಅಪಾಯದ ಕುರಿತು ದೇಶದ ಪ್ರತಿ ವ್ಯಕ್ತಿ, ಪ್ರತಿ ಸಂಘಟನೆ ಹಾಗೂ ಎಲ್ಲ ಜಾತ್ಯತೀತ ರಾಜಕೀಯ ಪಕ್ಷಗಳು ತಮ್ಮ ನಡುವಿನ ಭಿನ್ನತೆಯನ್ನು ಮರೆತು ದೇಶದ ಜನತೆಯ ಸಹಬಾಳ್ವೆಯ ಸಂಸ್ಕೃತಿಯನ್ನು ಉಳಿಸಬೇಕಿದೆ. ಗುಜರಾತದಲ್ಲಿ ಹತ್ತಿದ ಕೋಮುದಳ್ಳುರಿಯನ್ನು ನಂದಿಸುವುದಲ್ಲದೇ ಅದು ಇತರ ರಾಜ್ಯಗಳಿಗೆ ಹಬ್ಬದಂತೆ ನೋಡಿಕೊಳ್ಳಬೇಕಿದೆ. ಖಂಡಿತ ನಮ್ಮ  ಜನತೆ ಕೊಲೆ ಮತ್ತು ಹಿಂಸೆಯನ್ನು ಬೆಂಬಲಿಸಲಾರರು. ಯಾವ ಧರ್ಮವೂ ಕೊಲೆ, ಹಿಂಸೆಯನ್ನು ಸಮರ್ಥಿಸುವುದಿಲ್ಲ. ಅಂಥ ಧಾರ್ಮಿಕ ಹಿನ್ನೆಲೆಯ ನಮ್ಮ ಜನ ಬಹುಧರ್ಮ ಹಾಗೂ ಬಹುಸಂಸ್ಕೃತಿಯ ಬದುಕಿನಲ್ಲಿ ಕೊಡುಕೊಳ್ಳುವಿಕೆಯ ವಿಧಾನದಿಂದಲೇ ಬದುಕಿದ್ದಾರೆ. ಸಾವಿರಾರು ಜನ ಸಂತರು, ಶರಣರು, ಸೂಫಿಸಂತರು, ವಿವಿಧ ಧರ್ಮಗುರುಗಳು, ಕೋಟಿ ಕೋಟಿ ಜನ ಸೇರಿ ಎಲ್ಲ ಧರ್ಮಗಳ ಮಾನವೀಯ ಅಂಶಗಳ ಸತ್ವವನ್ನು ಹೀರಿಕೊಂಡು ವಿಶ್ವವೇ ಹೆಮ್ಮೆ ಪಡುವಂತಹ ಭಾರತೀಯ ಸಂಸ್ಕೃತಿಯನ್ನು ಕಟ್ಟಲಾಗಿದೆ. ಈ ದೇಶ ನೂರಾರು ಬಣ್ಣದ ಹೂಗಳ ಒಂದು ಸುಗಂಧ ಮಾಲೆ. ಇಂಥ ಸುಂದರ ದೇಶದ ಸಹಜೀವನಕ್ಕೆ ಕಿಚ್ಚು ಹಚ್ಚಲು ಮತಾಂಧ ಶಕ್ತಿಗಳು ಯತ್ನಿಸುತ್ತಿವೆ. ತಮ್ಮ ಧರ್ಮವನ್ನು ಪ್ರೀತಿಸುತ್ತಲೇ ಇನ್ನೊಂದು ಧರ್ಮವನ್ನು ಗೌರವಿಸುತ್ತ ಬಂದ ನಮ್ಮ ಜನತೆಯ ಮನಸ್ಸಿನಲ್ಲಿ ಕಹಿ ಹಿಂಡುವ ಪ್ರಯತ್ನ ಮಾಡುತ್ತಿವೆ. ಬಹುಧರ್ಮ, ಬಹುಭಾಷೆ ಹಾಗೂ ವಿಭಿನ್ನ ಸಂಸ್ಕೃತಿಯ ಭಾರತೀಯತೆಯ ಬೇರನ್ನೇ ಕತ್ತರಿಸಿ ಹಾಕುವ ಕುಕೃತ್ಯಕ್ಕೆ ಕೈ ಹಾಕಿದ್ದಾರೆ. ಇಂಥ ಸಂದರ್ಭದಲ್ಲಿ ಈ ದೇಶದ ಎಲ್ಲ ಧರ್ಮ, ಎಲ್ಲ ಭಾಷೆ ಹಾಗೂ ಎಲ್ಲ ಸಂಸ್ಕೃತಿಯ ಜನ ಎಚ್ಚೆತ್ತುಕೊಳ್ಳಬೇಕಿದೆ. ಕೇವಲ ಪ್ರತಿಕ್ರಿಯೆಗೆ ಬದಲಾಗಿ ಪರ್ಯಾಯ ಕ್ರಿಯೆಗೆ ಇಳಿಯಬೇಕಿದೆ.

ಇಂದು ನಮ್ಮ ದೇಶದ ಜನತೆಗೆ ಬೇಕಾಗಿರುವುದು ಅನ್ನ, ವಸತಿ, ಉದ್ಯೋಗ ಮತ್ತು ಸಾಮಾಜಿಕ ಶಾಂತಿ. ಆದರೆ ಜಾಗತೀಕರಣದ ಹೆಸರಿನಲ್ಲಿ ಆಧುನಿಕ ತಂತ್ರಜ್ಞಾನವನ್ನು ಸುಲಿಗೆ, ಶೋಷಣೆಯ ಆಯುಧವನ್ನಾಗಿ ಬಳಸಲಾಗುತ್ತಿದೆ. ದೇಶದ ಔದ್ಯೋಗಿಕ, ಆರ್ಥಿಕ ರಂಗವನ್ನು ಸಾಮ್ರಾಜ್ಯಶಾಹಿ ದೇಶಗಳ, ಬಹುರಾಷ್ಟ್ರೀಯ ಕಂಪನಿಗಳ ಹಿತಾಸಕ್ತಿಗನುಗುಣವಾಗಿ ಬದಲಾಯಿಸಲಾಗುತ್ತಿದೆ. ಪರಿಣಾಮವಾಗಿ ನಿರುದ್ಯೋಗ, ಬೆಲೆ ಏರಿಕೆ ಹೆಚ್ಚಿದೆ. ದೇಶದ ಕೈಗಾರಿಕೆಗಳು ಮುಚ್ಚುತ್ತಿವೆ ಮತ್ತು ಪರಾವಲಂಬಿಗಳಾಗಿ, ಪಡೆದ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಿದ್ದೇವೆ. ಇಂಥ ಸಂದರ್ಭದಲ್ಲಿ ಜನತೆ ಸ್ವಾತಂತ್ರ್ಯ, ಸ್ವಾಭಿಮಾನಕ್ಕಾಗಿ ಹೋರಾಡಬೇಕಿದೆ. ಆದರೆ ಅವರ ಗಮನ ಬೇರೆಡೆ ಸೆಳೆಯಲು, ರಾಜಕೀಯ ಲಾಭ ಪಡೆಯಲು ಈ ದೇಶದಲ್ಲಿ ಮತೀಯ ಭಾವನೆಗಳನ್ನು ಕೆರಳಿಸಿ ಸಂಘರ್ಷಮಯ ವಾತಾವರಣ ನಿರ್ಮಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಸ್ವಾವಲಂಬನೆಗಾಗಿ ನಿರಂತರ ಹೋರಾಟ ನಡೆಸಬೇಕಿದೆ. ಈ ಕುರಿತು ಜನ ಜಾಗೃತಿಗಿಳಿಯುವುದು ನಮ್ಮೆಲ್ಲರ ಇಂದಿನ ಬಹು ದೊಡ್ಡ ಜವಾಬ್ದಾರಿ.

**- ಡಾ॥ ಸಿದ್ದನಗೌಡ ಪಾಟೀಲ**

*(ಭಾರತ ಕಮ್ಯುನಿಸ್ಟ್ ಪಕ್ಷ ಹಾಗೂ ಸಾಮೂಹಿಕ ಸಂಘಟನೆಗಳು ಸೇರಿ ಸೌಹಾರ್ದ ಮತ್ತು ಸ್ವಾವಲಂಬನೆಗಾಗಿ ನಡೆಸುವ ಜಾಥಾ ಸಂದರ್ಭದ ಕರಪತ್ರದಿಂದ)*

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ : ೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ : ೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೪೨೪೩೦೨




ಏಪ್ರಿಲ್ ತಿಂಗಳಲ್ಲಿ ಮೂಡಿ ಬಂದ 'ಅಂತ್ಯಕ್ರಿಯೆ' ಯಲ್ಲಿ ಮನುಷ್ಯ ಜೀವನದ ಕವಚಗಳನ್ನು ಸೂಕ್ಷ್ಮವಾಗಿ ಬಿಚ್ಚಿ ಗೋಪಾಲಪ್ಪನ ಸಾನಿ - ಸಾಪತ್ನಿ, ಕೊನೆಯಲ್ಲಿ ಸ್ವಾವಲಂಬನೆಯ ಪ್ರತೀಕದ ಜೊತೆಗೆ ಕೆಲವು ಭಾವನಾತ್ಮಕ ಹಾಗೂ ಮನಸ್ಸಿನಂತರಾಳದಲ್ಲಿರದ ಪ್ರೀತಿ, ಕರ್ತವ್ಯಕ್ಕೆ ಜೋತು ಬೀಳುವ ಸನ್ನಿವೇಶಗಳನ್ನು ಕ್ಷಿತಿಜಾ ಬೀದರ್‌ರವರು ಬಿಂಬಿಸಿರುವುದು ಆತ್ಮಕ್ರಿಯೆಗೂ ನಾಟುವಂತಾಯಿತು.

*ನಾಗಲಮಡಿಕೆ* — *ಆ. ನಾ. ಚಂದ್ರಶೇಖರ್*

ನಾ. ದಿವಾಕರರ 'ಕಾರ್ಮಿಕರ ದಿನಾಚರಣೆ' ಮೇ ದಿನದ ಇತಿಹಾಸದ ದ್ಯೋತಕವಾಗಿ ಮೂಡಿಬಂದಿದೆ.

ಸ್ವಾಮಿ ರಾಮಕೃಷ್ಣಾರ್ಪಣಾನಂದರ 'ಮೂಢನಂಬಿಕೆಗಳು.. ಮಾರಕ' ಗೊಡ್ಡು ಸಂಪ್ರದಾಯ ಮತ್ತು ಮಾರಕವಾದ ನಂಬಿಕೆಗಳನ್ನು ಪ್ರತಿಬಿಂಬಿಸುವುದರಲ್ಲಿ ಯಶಸ್ವಿಯಾಗಿದೆ. 'ಮಾಧ್ಯಮ ಬಳಕೆಯ ಹಲವು ಮುಖಗಳು' ಎಂಬಲ್ಲಿ ಡಾ॥ ನಿರಂಜನ ವಾನಳ್ಳಿಯವರು ಪ್ರಸ್ತುತವನ್ನು ಸೊಗಸಾಗಿ ನಿರೂಪಿಸಿದ್ದಾರೆ.

ಒಟ್ಟಾರೆ ಹೊಸ ಹೊಸ ಮಾದರಿ ಲೇಖನಗಳನ್ನು ಹೊತ್ತ 'ಹೊಸತು'ವಿನ ಒಂದೊಂದು ಸಂಚಿಕೆಯೂ ಸಂಗ್ರಹಣಾರ್ಹ.

*ಬೆಂಗಳೂರು* — *ನೆ.ಲ.ರಾಂ.*

ಮೇ ತಿಂಗಳ ಕಾರ್ಮಿಕರ ಮುಖಪುಟ ಚಿತ್ರ, ಅರ್ಥಗರ್ಭಿತ. ಕಾರಂತರ ನಾಟಕ, ರಂಗಭೂಮಿಯ ಕುರಿತಾದ ಮಾತುಗಳು ಅರಿವು ಮೂಡಿಸಿದವು. ಬೀದಿ ನಾಟಕಗಳ ಮೂಲಕ ಜಾಗತೀಕರಣದ ವಿರುದ್ಧ ಹೋರಾಡುವ ಸಂಕಲ್ಪ ಸಮುದಾಯ, ಬಂಡಾಯ ಸಂಘಟನೆ, ಬಿ.ಜೆ.ವಿ.ಎಸ್. ಗೆಳೆಯರು ತ್ವರಿತವಾಗಿ ಮಾಡಬೇಕಾಗಿದೆ.

ಗರ್ಭಿಣಿಯರ ಹೊಟ್ಟೆ ಸೀಳಿ, ಕಂದಮ್ಮಗಳನ್ನು ಕೊಲ್ಲುವ, ಹೆಣ್ಣು ಮಕ್ಕಳ ಮೇಲೆ ಸಾಮೂಹಿಕವಾಗಿ ಅತ್ಯಾಚಾರ ನಡೆಸಿ, ಕೊಲ್ಲುವ ಮತಾಂಧರ ನರಮೇಧ ವಿರುದ್ಧ ದೇಶದ ಜನರಲ್ಲಿ ಮಾನವೀಯ ಮೌಲ್ಯ ಮತ್ತು ಮನುಷ್ಯ ಮನುಷ್ಯನನ್ನು ಪ್ರೀತಿಸುವ ಪರಿಸರ ನಿರ್ಮಾಣಕ್ಕಾಗಿ ರಂಗಭೂಮಿ ಶ್ರಮಿಸಬೇಕಾಗಿದೆ.

*ಹೂವಿನ ಹಡಗಲಿ* — *ಸುರೇಶ ಅಂಗಡಿ*

ನನಗೆ ಹೊಸದಾಗಿ ತಲುಪಿದ ಏಪ್ರಿಲ್ ತಿಂಗಳ ಹೊಸತು ಪತ್ರಿಕೆ ಮೌಲ್ಯಯುತ ಲೇಖನಗಳನ್ನು ಹೊತ್ತು ಬಂದಿದೆ. ಸಂಪಾದಕೀಯದಲ್ಲಿ ನರೇಂದ್ರ ಮೋದಿಯ ಬೇಜವಾಬ್ದಾರಿತನದಿಂದ ಇಡೀ ಗುಜರಾತ್ ಕೋಮು ದಳ್ಳುರಿಗೆ ಆಹುತಿಯಾಯಿತು. ೩ ಸಣ್ಣ ಕತೆಗಳು, ಕನ್ನಡ ಸಾಹಿತ್ಯದ ಶಂ.ಬಾ.ಜೋಶಿ ವಿಚಾರಧಾರೆ, ಕವಿ ಕುಶಾಲಪ್ಪ ಗೌಡರ ಸಾಧನೆ, ಶರಣ ಸಾಹಿತ್ಯ ದೇಕಬ್ಬೆ ಶಾಸನ, ಇಂತಹವುಗಳಿಂದ ಸಂಶೋಧಕರಿಗೆ ಸಹಾಯವಾಗುತ್ತದೆ. ಪ್ರಸ್ತುತ ವಿಜ್ಞಾನದ ಮುನ್ನಡೆಯಲ್ಲಿ ಭಿನ್ನ ರೀತಿಯ ವಾಹನದ ಇಂಧನ ಶೋಧನೆ, ಉಕ್ಕಿನ ಕತೆ, ಹಳ್ಳಿಯ ಖಗೋಳ ವಿಜ್ಞಾನಿಯ ಸಾಧನೆ. ಇಂತಹ ಲೇಖನ ಹೊತ್ತು ಬಂದ ಹೊಸತು, ಇದೇ ರೀತಿಯಲ್ಲಿ ಮುಂದುವರೆದರೆ ಸಹೃದಯರನ್ನು ಆಕರ್ಷಿಸುವಲ್ಲಿ ಸಫಲವಾಗುತ್ತದೆ.




*ದೊಡ್ಡ ಎಣ್ಣೇಗೆರೆ* — *ಸಿ. ರಂಗಪ್ಪ*

ಹೊಸತಾದ ಲೇಖನಗಳೊಂದಿಗೆ ವೈಚಾರಿಕತೆಗೆ ಸ್ಪಂದಿಸುವ ಲೇಖನಗಳು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಿ ಮನಸ್ಸಿಗೆ ಮುದ ನೀಡುತ್ತಿರುವಿರಿ. 'ಅಂತ್ಯಕ್ರಿಯೆ' ಕಥೆಯಲ್ಲಿ ಈಗಿನ ನವಪೀಳಿಗೆ ಮದುವೆಯಾದ ಹೊಸತು ಜೀವನ ಸಾಗಿಸುವಾಗ ಮನೆಯಲ್ಲಿರುವ ವೃದ್ಧ ತಂದೆ-ತಾಯಿಯನ್ನು ನಿರ್ಲಕ್ಷ್ಯ ಮನೋಭಾವದಿಂದ ಕಾಣುವ ಮಗ-ಸೊಸೆಯ ಜೀವನಶೈಲಿ ಸಾಮಾನ್ಯವಾಗಿಬಿಟ್ಟಿದೆ. ಕಥೆ ಓದಿ ಮನಸ್ಸಿಗೆ ಘಾಸಿಯಾದಂತಾಯಿತು.

ಸಂಪಾದಕೀಯ ಲೇಖನ ಈಗಿನ ಸಮಸ್ಯೆಯನ್ನು ಚೆನ್ನಾಗಿ ನಿರೂಪಿಸಿದೆ.

*ಭಾನಾಪುರ* — *ಶಂಕರ್ ಕೆ. ಪತ್ತಾರ*

ಕಾರ್ಮಿಕರ ನೋವು-ನಲಿವುಗಳನ್ನು ಪ್ರತಿಬಿಂಬಿಸಿದ ಮುಖಪುಟ ಲೇಖನ (ನಾ. ದಿವಾಕರ) ಅರ್ಥಪೂರ್ಣ ಹಾಗೂ ಪ್ರಸ್ತುತವಾಗಿದೆ. ಹೀಗೆ ಸಾಮಾನ್ಯರಿಗೂ ಸ್ಪಂದಿಸುವ, ಪ್ರತಿಯೊಬ್ಬರೂ ಈ ಸಮಾಜದ ಒಳಿತು-ಕೆಡಕುಗಳ ಬಗ್ಗೆ ಚಿಂತಿಸುವ ಮನೋಭಾವ ಬೆಳೆಸುವಲ್ಲಿ ಹೊಸತಿನ ಪಾತ್ರ ಮಹತ್ವಪೂರ್ಣವಾಗಿರಲಿ.

ಸಮಾಜಕ್ಕೊಂದು, ಓದುಗರಿಗೊಂದು ಚಿಂತನ ದೀಪ್ತಿಯಾಗಿ ಪತ್ರಿಕೆ ಬೆಳೆಯಲಿ ಎಂದು ಹಾರೈಸುತ್ತೇನೆ. ಹೀಗೆ ಅರ್ಥಪೂರ್ಣ ಲೇಖನಗಳು, ಕಥೆಗಳು, ಕಾವ್ಯಧಾರೆ ಮುಂತಾದ ಅಂಕಣಗಳು, ಮಾಹಿತಿಗಳು ಸದಾ ಪ್ರಕಟವಾಗುತ್ತಿರಲಿ. ಸಮಾಜದ ದಿಕ್ಸೂಚಿಯಾಗಿ ಕನ್ನಡಿಗರ ಮನೆ ಮಾತಾಗಲಿ ಎಂದು 'ಹೊಸತು'ವಿಗೆ ಶುಭಾಶಯಗಳು.

*ಶಂಕರಘಟ್ಟ* — *ರಾಜೇಂದ್ರ ಟಿ.*

### ಕೃಷಿ ಪತ್ರಿಕೋದ್ಯಮ ಪ್ರಶಸ್ತಿಗೆ ಆಹ್ವಾನ

ಧಾರವಾಡದ ಪರ್ಯಾಯ ಕೃಷಿ ಮಾಧ್ಯಮ ಕೇಂದ್ರ, ಎರಡನೇ ವರ್ಷದ ರಾಜ್ಯಮಟ್ಟದ ಕೃಷಿ ಪತ್ರಿಕೋದ್ಯಮ ಪ್ರಶಸ್ತಿಗೆ ಪ್ರವೇಶಗಳನ್ನು ಆಹ್ವಾನಿಸಿದೆ. ಎರಡು ವಿಭಾಗಗಳಲ್ಲಿ ಪ್ರಶಸ್ತಿ ನೀಡಲಾಗುತ್ತಿದೆ. ಮೊದಲನೆಯದು ಕೃಷಿಕರೇ ಬರೆದ ಲೇಖನಗಳು ಹಾಗೂ ಎರಡನೆಯದು ಮುಕ್ತ ವಿಭಾಗವಾಗಿದ್ದು ಇದರಲ್ಲಿ ಕೃಷಿಕರೇತರ ಎಲ್ಲರೂ ಭಾಗವಹಿಸಬಹುದಾಗಿದೆ.

ಆಸಕ್ತರು ಸೆಪ್ಟೆಂಬರ್ ೨೦೦೧ರಿಂದ ಆಗಸ್ಟ್ ೨೦೦೨ರ ನಡುವೆ ಯಾವುದೇ ಪತ್ರಿಕೆ ಅಥವಾ ನಿಯತಕಾಲಿಕದಲ್ಲಿ ಪ್ರಕಟಗೊಂಡ ಕೃಷಿಕಪರ ಬರಹವನ್ನು ಕಳುಹಿಸಿಕೊಡಲು ಕೋರಲಾಗಿದೆ. ಒಬ್ಬರು ಗರಿಷ್ಠ ಎರಡು ಲೇಖನಗಳನ್ನು ಕಳುಹಿಸಬಹುದು. ಮೇಲಿನ ಯಾವ ವಿಭಾಗಕ್ಕೆ ಪ್ರವೇಶ ಕಳುಹಿಸುತ್ತಿದ್ದೀರಿ ಎಂಬುದನ್ನು ಸ್ಪಷ್ಟವಾಗಿ ನಮೂದಿಸಿ, ಪೂರ್ಣ ವಿಳಾಸ ಹಾಗೂ ಉದ್ಯೋಗದ ವಿವರ ಬರೆಯುವುದು ಅಗತ್ಯ. ಪ್ರವೇಶದೊಂದಿಗೆ ಐದು ರೂಪಾಯಿ ಸ್ಟಾಂಪ್ ಹಚ್ಚಿದ ಸ್ವ-ವಿಳಾಸ ಬರೆದ ಉದ್ದನೆಯ ಲಕೋಟೆ ಲಗತ್ತಿಸಲು ಕೋರಿಕೆ. ಪ್ರವೇಶ ಸ್ವೀಕರಿಸಲು ಸೆಪ್ಟೆಂಬರ್ ೫, ೨೦೦೨ ಕೊನೆಯ ದಿನಾಂಕ. ಲೇಖನಗಳನ್ನು ಕಳುಹಿಸಬೇಕಾದ ವಿಳಾಸ :

**ಅನಿತಾ ಪೈಲೂರು, ಪರ್ಯಾಯ ಕೃಷಿ ಮಾಧ್ಯಮ ಕೇಂದ್ರ, ಕೃಷ್ಣಾಲಯ, ೧೩ನೇ ಮುಖ್ಯರಸ್ತೆ, ೪ನೇ ಅಡ್ಡ ರಸ್ತೆ, ನಾರಾಯಣಪುರ, ಧಾರವಾಡ - ೫೮೦ ೦೦೮**

## ಜೂನ್ 2 ರ ಕೋಮು ಸಾಮರಸ್ಯ ಸಮಾವೇಶದಲ್ಲಿ ಭಾಗವಹಿಸಿ

ಕೋಮು ಸಾಮರಸ್ಯವನ್ನು ಉಳಿಸಿ ಬೆಳೆಸುವ ಹಂಬಲವುಳ್ಳ ಜನಸ್ತೋಮಕ್ಕೆ ಇದೊಂದು ಆಹ್ವಾನ.

ಇದೇ ಜೂನ್ ೨ ರಂದು ಭಾನುವಾರ ಬೆಂಗಳೂರು ಮಲ್ಲೇಶ್ವರಂ ಮೈದಾನದಲ್ಲಿ ಬೆಳಿಗ್ಗೆ ೧೦ ಗಂಟೆಯಿಂದ ಸಂಜೆಯವರೆಗೆ ಕೋಮು ಸಾಮರಸ್ಯ ಸಮಾವೇಶವನ್ನು ಏರ್ಪಡಿಸಲಾಗಿದೆ. ಸಚಿವ ಕೆ. ಎಚ್. ರಂಗನಾಥ್ ಅವರ ಅಧ್ಯಕ್ಷತೆಯಲ್ಲಿ ನ್ಯಾಯಮೂರ್ತಿ ಶ್ರೀ ಎ. ಜೆ. ಸದಾಶಿವ ಅವರು ಬೆಳಿಗ್ಗೆ ೧೦ ಗಂಟೆಗೆ ಉದ್ಘಾಟನೆ ಮಾಡುತ್ತಾರೆ. ಇಡೀ ದಿನದ ಕಾರ್ಯಕ್ರಮದಲ್ಲಿ ವಿಚಾರ ಸಂಕಿರಣ, ಸುದ್ದಿಮಾಧ್ಯಮದ ಪಾತ್ರ, ವಿವೇಚನೆ, ಸಂವಾದ, ಕಲಾ ಚಿತ್ರ ರಚನೆ, ಸಾರ್ವಜನಿಕ ಘೋಷಣೆ, ಬೀದಿ ನಾಟಕ ಮುಂತಾದ ಹಲವು ಸ್ವಾಗಸ್ಯಕರ ವಿಷಯಗಳು ಅಡಕವಾಗಿವೆ. ನಾಡಿನ ಹಿರಿಯ ಸಾಹಿತಿಗಳು, ಕವಿಗಳು, ಕಲಾವಿದರು, ರಾಜಕಾರಣಿಗಳು, ಚಿಂತಕರು ಮುಂತಾಗಿ ಸೃಜನಶೀಲರು ಬೆಂಬಲಿಸಿ ಭಾಗವಹಿಸುತ್ತಿದ್ದಾರೆ. ಅವರಲ್ಲಿ ಡಾ॥ ಕೆ. ಮರುಳಸಿದ್ದಪ್ಪ, ಪ್ರೊ॥ ರಾಜೇಂದ್ರ ಚೆನ್ನಿ, ಪ್ರೊ॥ ಕೆ. ರಾಮದಾಸ್, ಪ್ರೊ॥ ಜಿ. ಕೆ. ಗೋವಿಂದರಾವ್, ಕೋ. ಚೆನ್ನಬಸಪ್ಪ, ಸನತ್‌ಕುಮಾರ ಬೆಳಗಲಿ, ನೂಪುರ್ ಬಸು, ಅಮ್ಮು ಜೋಸೆಫ್, ಜಿ. ಎನ್. ಮೋಹನ್, ನಾಗಮೋಹನದಾಸ್, ಡಾ॥ ಜಿ. ರಾಮಕೃಷ್ಣ, ಪ್ರೊ॥ ಬಿ. ಕೆ. ಚಂದ್ರಶೇಖರ್, ಡಾ॥ ಎಸ್. ಚಟರ್ಜಿ, ಅಬ್ದುಲ್ ರೆಹಮಾನ್ ಪಾಶಾ, ಎಂ. ಎ. ಅತಾಉಲ್ಲಾ, ಎಸ್. ಜಿ. ವಾಸುದೇವ್ ಮುಂತಾದವರೆಲ್ಲ ಸೇರಲಿದ್ದಾರೆ. ಸಂಜೆಯ ಸಾರ್ವಜನಿಕ ಸಭೆಯನ್ನು ಉದ್ದೇಶಿಸಿ ಕರ್ನಾಟಕದ ವಿವಿಧ ರಾಜಕೀಯ ಪಕ್ಷಗಳ ನೇತಾರರು ಭಾಷಣ ಮಾಡಲಿದ್ದಾರೆ. ಸಮಸ್ತ ಪ್ರಗತಿಶೀಲರನ್ನು ಒಮ್ಮೆ ಒಂದೆಡೆ ಸೇರಿಸಿ, ಕೋಮುವಾದಿ ಶಕ್ತಿಗಳಿಗೆ ಎಚ್ಚರಿಕೆ ನೀಡುವ ಉದ್ದೇಶವುಳ್ಳ ಈ ಸಭೆಯಲ್ಲಿ ಅಪಾರ ಸಂಖ್ಯೆಯಲ್ಲಿ ಜನಸಮೂಹ ಸೇರಿ, ಇದನ್ನು ಒಂದು ಸಾಮಾಜಿಕ ಹಬ್ಬವೆಂಬಂತೆ ಆಚರಿಸಿದಾಗಲೇ ಈ ಪ್ರಯತ್ನದ ಸಾಫಲ್ಯ.

ಸಕುಟುಂಬ ಸಪರಿವಾರ ಸಮೇತರಾಗಿ ಬನ್ನಿ ! ಭಾಗವಹಿಸಿ. ನಿಮ್ಮ ನಿಲುವನ್ನು ಕೆಚ್ಚೆದೆಯಿಂದ ಘೋಷಿಸಿ ! ಕೋಮು ಸೌಹಾರ್ದಕ್ಕೆ ಪ್ರಬಲ ಚಾಲನೆ ನೀಡಿ ! ಇದು ನಿಮ್ಮದೇ ಕಾರ್ಯಕ್ರಮ. ಇದರ ಗೆಲುವು ನಿಮ್ಮದು.

**ಕಾರ್ಯದರ್ಶಿಗಳು**

# ದಾಸಸಾಹಿತ್ಯ : ಕೋಮು ಸೌಹಾರ್ದತೆ

> ಪ್ರತಿ ಮನುಷ್ಯನೂ ಒಳ್ಳೆಯ ವ್ಯಕ್ತಿತ್ವವನ್ನು ಅಳವಡಿಸಿಕೊಂಡು ಬದುಕಬೇಕು. ಬದುಕಿನಲ್ಲಿ ಅವನಿಗೆ ಪ್ರಾಣದಷ್ಟೇ ಮಾನ ಮುಖ್ಯ. ಹಾಗೆಯೇ ಮಾನವೀಯತೆ ಮುಖ್ಯ. ಸಮಾಜದಲ್ಲಿನ ಎಲ್ಲರನ್ನೂ ಪ್ರೀತಿ ವಿಶ್ವಾಸದಿಂದ ಕಾಣುವ ಹಿರಿಯ ಭಾವ ಅವನಿಗೆ ಬೇಕು. ಯಾವ ಸಮಾಜದಲ್ಲಿ ಮಾನವೀಯತೆ ಅಡಗಿರುತ್ತದೆಯೋ ಅಲ್ಲಿ ಸೌಹಾರ್ದತೆಯ ನದಿ ಹರಿಯುತ್ತಿರುತ್ತದೆ ಎನ್ನುವುದನ್ನು ಹೇಳಲೇಬೇಕು.

**ಕ**ನ್ನಡ ನಾಡಿನ ಭಕ್ತಿ ಪರಂಪರೆಯಲ್ಲಿ ಹರಿದಾಸರ ಸೇವೆ ಅನುಪಮವಾದುದು. ಹರಿದಾಸರು ವಚನಕಾರರಿಂದ ಪ್ರೇರಣೆ, ಪ್ರಭಾವಗಳನ್ನು ಪಡೆದುಕೊಂಡು ಸಾಹಿತ್ಯ ರಚನೆಗೆ ತೊಡಗಿದ್ದುದಲ್ಲದೆ ಜನಸಾಮಾನ್ಯರಿಗೆ ನೇರವಾಗಿ ವಿಚಾರಗಳನ್ನು ಮುಟ್ಟಿಸಲು ಅವರು ಕೀರ್ತನೆಗಳ ಮೊರೆ ಹೋದರು. ವಚನಕಾರರಂತೆ ಇವರ ಉದ್ದೇಶ ಧರ್ಮ ಪ್ರಚಾರವನ್ನು ಮಾಡುವುದರ ಜೊತೆಗೆ ಸಮಾಜ ಪರಿವರ್ತನೆ ಮಾಡುವುದೇ ಆಗಿತ್ತು. ಸಮಾಜದಲ್ಲಿನ ಮೇಲು ಕೀಳು ಭಾವನೆಗಳನ್ನು ಕಿತ್ತುಹಾಕಿ ನಾವೆಲ್ಲರೂ ಒಂದೇ ಎನ್ನುವ ವಿಶಾಲ ಮನೋಭಾವನೆಯನ್ನು ಸಾರಿದವರು ಇವರು. ಜನಸಮುದಾಯದ ಮನ ಮನದಲ್ಲಿ ಭಕ್ತಿಯ ಜ್ಯೋತಿಯನ್ನು ಹಚ್ಚುತ್ತಾ ಸಹಬಾಳ್ವೆಗೆ, ಧರ್ಮಸಹಿಷ್ಣುತೆಗೆ, ಸಾಮರಸ್ಯದ ಬದುಕಿಗೆ, ಸಮಾಜ ಬದಲಾವಣೆಗೆ ನಾಂದಿ ಹಾಡಲು ಪ್ರಯತ್ನಿಸಿದ್ದು ಹರಿದಾಸರ ವಿಶೇಷ ಗುಣವಾಗಿದೆ. ಹೀಗಾಗಿ ವಚನ ಸಾಹಿತ್ಯದಂತೆ ದಾಸಸಾಹಿತ್ಯವೂ ಜನಮಾನಸದಲ್ಲಿ ಇಂದಿಗೂ ಹಸಿರಾಗಿದೆ.

ಹರಿದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಅನೇಕ ದಾಸರು ಕೀರ್ತನೆ, ಉಗಾಭೋಗ, ಸುಳಾದಿಗಳಂತಹ ಬೇರೆ ಬೇರೆ ರೂಪಗಳಲ್ಲಿ ಸಾಹಿತ್ಯವನ್ನು ರಚಿಸುತ್ತಾ ಹರಿಯ ಹಿರಿಮೆಯನ್ನು ಕೊಂಡಾಡಿದ್ದಾರೆ. ದಾಸ ವಾಙ್ಮಯದಲ್ಲಿ ಬರುವ ಬಹುಪಾಲು ಹರಿದಾಸರು ಆತ್ಮನಿವೇದನೆ, ಸಮಾಜ ವಿಮರ್ಶೆ, ನೀತಿ ಬೋಧನೆ, ಹರಿಸ್ಮರಣೆಯನ್ನು ಮಾಡಿದುದೇ ಹೆಚ್ಚು. ಬೆರಳೆಣಿಕೆಯಷ್ಟು ದಾಸರು ಕೋಮುಸೌಹಾರ್ದತೆಯ ಬಗೆಗೂ ದನಿ ಎತ್ತಿದ್ದುದನ್ನು ನೋಡಿದರೆ ಸಮಾಜದ ಬಗೆಗಿನ ಅವರ ಕಳಕಳಿ, ಸಮಾನತೆಗಾಗಿ ಮಿಡಿಯುವ ಅವರ ದೃಷ್ಟಿಕೋನ ಉನ್ನತವಾದುದಾಗಿತ್ತು. ಅವರ ಅಂದಿನ ಆಲೋಚನೆಗಳು ಮತ್ತು ವ್ಯಕ್ತಪಡಿಸಿದ ವಿಚಾರಗಳು ಇಂದಿಗೂ ಪ್ರಸ್ತುತವಾಗಿದ್ದು, ಕತ್ತಲ ಬದುಕಿಗೆ ದಾರಿ ದೀಪವಾಗುವಂತಿವೆ ಎನ್ನುವುದೇ ಹೆಮ್ಮೆಯ ಸಂಗತಿ.

ಪುರಂದರದಾಸರು ದಾಸ ಶ್ರೇಷ್ಠರೆನಿಸಿಕೊಂಡವರು. ಶೀನಪ್ಪನಾಗಿದ್ದ ಪುರಂದರದಾಸರು ಮೊದಲು ಜಿಪುಣರಾಗಿದ್ದರೆಂದು ತಿಳಿದುಬರುತ್ತದೆ. ಹೆಂಡತಿಯ ಸಹಾಯ ಪಡೆದು ಆಧ್ಯಾತ್ಮಿಕ ವ್ಯಕ್ತಿಯಾಗಿ ಬೆಳೆದು ವ್ಯಕ್ತಿತ್ವದಲ್ಲಿ ಬದಲಾವಣೆ ಕಂಡುಕೊಂಡ ಇವರ ವ್ಯಕ್ತಿತ್ವ ನಿಜಕ್ಕೂ ಸೋಜಿಗವನ್ನುಂಟುಮಾಡುವಂತಹುದು. ಸಂಸಾರದಲ್ಲಿದ್ದುಕೊಂಡೇ ಭಕ್ತಿಯ ಮೂಲಕ ಮನಸ್ಸಿನ ಶೋಧಕ್ಕೆ ಕೈಹಾಕಿ ಸಮಾಜದ ಅಂದಿನ ಸ್ಥಿತಿಗತಿಗಳ ಬಗೆಗೆ, ಜನಸಮುದಾಯದ ನೀಚಗುಣಗಳ ಬಗೆಗೆ, ಸಾಮಾಜಿಕ ಅಸಮಾನತೆಯ ಬಗೆಗೆ ಜಾತಿ-ಜಾತಿಗಳಲ್ಲೇ ಕಚ್ಚಾಡುವ ವಿಚಿತ್ರ ಜನರ ಬಗೆಗೆ ನಿರ್ಭಿಡೆಯಿಂದ ಮಾತನಾಡಿದ್ದಾರೆ.

"ಹೊಲೆಯ ಊರ ಹೊರಗಿಹನೆ ಊರೊಳಗಿಲ್ಲವೆ ?" ಎಂದು ಪ್ರಶ್ನಿಸುವುದರ ಮೂಲಕ ನಿಜವಾದ ಹೊಲೆಯ ಯಾರು ಎಂಬುದನ್ನು,

*ಇದ್ದು ಧನ ದಾನ ಧರ್ಮವ ಮಾಡದವ ಹೊಲೆಯ ।*
*ಕದ್ದು ತನ್ನೊಡಲ ಹೊರೆವಾತನೇ ಹೊಲೆಯ*
*ಬದ್ಧವಹ ನಡೆನುಡಿಗಳಿಲ್ಲದಿದ್ದವ ।*
*ಮುದ್ದಿಕ್ಕಿ ಕೊಲುವವನೆ ಮರುಳು ಹೊಲೆಯ ॥*

ಎನ್ನುತ್ತಾರೆ. ಇಲ್ಲಿ ಇನ್ನೊಬ್ಬರಿಗೆ ದಾನ ಧರ್ಮವನ್ನು ಮಾಡದೆ ಇರುವವನು, ಕದ್ದು ತಿನ್ನುವವನು, ಹೇಳಿದಂತೆ ನಡೆಯದೇ ಇರುವವನು, ವಿಷ ಕೊಟ್ಟು ಸಾಯಿಸುವವನು ಇವರೇ ನಿಜವಾದ ಹೊಲೆಯರೆಂದು ಸ್ಪಷ್ಟವಾಗಿ ಹೇಳುತ್ತಾರೆ. ಒಂದೆಡೆ "ದುರ್ಜನರ ಸಂಗ ಜಾಲಿ ಮರದಂತೆ" ಎಂದು ಹೇಳುವ ಪುರಂದರದಾಸರು ಇನ್ನೊಂದೆಡೆ "ಆವ ಕುಲವಾದರೇನು, ಆವನಾದರೇನು ಎಲ್ಲರೂ ನಮ್ಮವರೆ" ಎಂದು ಹೇಳುವುದರ ಮೂಲಕ ವಿಶಾಲ ಮನೋಭಾವನೆಯನ್ನು, ಭ್ರಾತೃತ್ವವನ್ನು ಜನಮನದಲ್ಲಿ ತುಂಬಲು ಯತ್ನಿಸಿದ್ದಾರೆ.

*"ಮಾನವ ಜನ್ಮ ದೊಡ್ಡದು ಇದ*
*ಹಾನಿ ಮಾಡಲಿಬೇಡಿ ಹುಚ್ಚಪ್ಪಗಳಿರಾ"*

ಎಂದು ಮಾನವ ಬದುಕಿನ ಸಾರ್ಥಕತೆಯ ಕುರಿತು ಸಂದೇಶ ಕೊಡುತ್ತಾರೆ. ಸಮಾಜದಲ್ಲಿ ಆ ಜಾತಿ ಈ ಜಾತಿ ಎಂದು ಕಚ್ಚಾಡುವವರಿಗೆ, ನೀತಿ ಪಾಠವನ್ನು ಹೇಳುವುದರೊಂದಿಗೆ ಶಾಂತಿ-ಸೌಹಾರ್ದತೆಯನ್ನು ಸಾರಲು ಪ್ರಯತ್ನಿಸಿದ್ದು ಪುರಂದರದಾಸರ ವೈಶಿಷ್ಟ್ಯವಾಗಿದೆ. ನಿಜವಾದ ಮನುಷ್ಯ ಮಾನವೀಯತೆಯಿಂದ ಬದುಕಿ ಅರ್ಥಪೂರ್ಣ ಬದುಕು ಸಾಗಿಸಲು ದಾಸರ ಇಂತಹ ಒಂದೇ ಒಂದು ಮಾತು ಸಾಕು. ಬದುಕಿಗೆ ಸಂಬಂಧಿಸಿದ ಇಂತಹ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುವ ಪುರಂದರದಾಸರ ಅನೇಕ ಕೀರ್ತನೆಗಳು ಇಂದಿಗೂ ಮುಖ್ಯವೆನಿಸುತ್ತವೆ. "ದಾಸರೆಂದರೆ ಪುರಂದರದಾಸರಯ್ಯ" ಎಂದು ತನ್ನ ಗುರುವಿನಿಂದಲೇ ಹೊಗಳಿಕೆಗೆ ಪಾತ್ರರಾಗಿದ್ದ ಪುರಂದರದಾಸರು ದಾಸ ಸಾಹಿತ್ಯದಲ್ಲೊಬ್ಬ ಹಿರಿಯ ಭಕ್ತಿ ಕವಿಯಾಗಿ ಇಂದಿಗೂ ತಮ್ಮ ಕೀರ್ತನೆಗಳ ಮೂಲಕ ಅಜರಾಮರರಾಗಿ ಉಳಿದಿದ್ದಾರೆ.

ಪುರಂದರದಾಸರ ಸಮಕಾಲೀನ ಕವಿಯಾಗಿದ್ದ ಕನಕದಾಸರು ದಾಸ ಸಾಹಿತ್ಯದಲ್ಲಿ ಇನ್ನೊಂದು ಅಪರೂಪದ ನಕ್ಷತ್ರವೆಂದೇ ಹೇಳಬೇಕು. ಅವರು ಕಲಿ ಮತ್ತು ಕವಿಯಾಗಿದ್ದರು. ಹಿಂದುಳಿದ ಜಾತಿಯಲ್ಲಿ ಹುಟ್ಟಿ ಮಾಧ್ವ ಮತವನ್ನು ಸ್ವೀಕರಿಸಿದ ಅವರ ಬದುಕು ಒಂದು ರೀತಿಯಲ್ಲಿ ಕೋಮುಸೌಹಾರ್ದತೆಗೆ ಕೊಂಡಿಯಾದುದಾಗಿತ್ತು. ಕೀರ್ತನೆಗಳಲ್ಲಿ ಉಳಿದವರಂತೆ ಭಕ್ತಿಯ ಅನನ್ಯತೆಯನ್ನು ಹೇಳುವುದರ ಜೊತೆಗೆ ಅಂತರಂಗದ ನಿವೇದನೆಯನ್ನು, ಸಮಾಜ ವಿಡಂಬನೆಯನ್ನು ಮುಚ್ಚುಮರೆಯಿಲ್ಲದೆ ಹೇಳುವ ಅವರ ನುಡಿ ಬೆಡಗಿನ ಮಹತ್ವ ಅಪರೂಪವಾದುದು.

ಕುಲದ ಬಗ್ಗೆ ಪುರಂದರರು ಮಾತನಾಡಿದಂತೆ ಕನಕದಾಸರು ಕೂಡ "ಆವ ಕುಲವಾದರೇನು, ಆವನಾದರೇನು ಆತ್ಮಭಾವವರಿತ ಮೇಲೆ" ಎಂದರೆ, ಇನ್ನೊಂದೆಡೆ,

*ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ*
*ಕುಲದ ನೆಲೆಯನೇನಾದರೂ ಬಲ್ಲಿರಾ ॥ಪ॥*
*ಜಲವೇ ಸಕಲ ಕುಲಕೆ ತಾಯಲ್ಲವೆ ?*
*ಜಲದ ಕುಲವನೇನಾದರೂ ಬಲ್ಲಿರ ?*
*ಜಲಜ ಬೊಬ್ಬುಳಿಯಂತೆ ಸ್ಥಿರವಲ್ಲವೀ ದೇಹ*
*ನೆಲೆಯನರಿತು ನೀ ನೆನೆಕಂಡ್ಯ ಮನುಜ ॥*

ಎಂದು ಸಹಜವಾದ ಧಾಟಿಯಲ್ಲಿ ಪ್ರಶ್ನಿಸುತ್ತಾರೆ.

ಅವರೇ ಇನ್ನೊಂದೆಡೆ -

*ಕುಲ ಕುಲ ಕುಲವೆನ್ನುತಿಹರು*
*ಕುಲವ್ಯಾವುದು ಸತ್ಯ ಸುಖವುಳ್ಳ ಜನರಿಗೆ ॥ಪ॥*
*ಕೆಸರೊಳು ತಾವರೆ ಪುಟ್ಟಲು ಆದ ತಂದು*
*ಬಿಸಜನಾಭನಿಗರ್ಪಿಸಲಿಲ್ಲವೆ ?*
*ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು*
*ವಸುಧೆಯೊಳಗೆ ಭೂಸುರರುಣ್ಣಲಿಲ್ಲವೆ ?*

ಎಂದು ಹೇಳುತ್ತಾ ಕೊನೆಗೆ ಕನಕದಾಸರು ಸರ್ವಜ್ಞರು ಹೇಳಿದಂತೆ ದೇವರೊಲಿದಾತನೆ ಕುಲಜನೆನ್ನುತ್ತಾರೆ. ಹೀಗೆ ಅನೇಕ ಪ್ರತಿಮೆ, ದೃಷ್ಟಾಂತಗಳನ್ನು ಕಟ್ಟಿಕೊಡುವುದರ ಮೂಲಕ ನಿಜವಾದ ಕುಲದ ಬಗೆಗೆ ಅರಿವು ಮೂಡಿಸುವ ಇಂತಹ ನುಡಿಗಳನ್ನು ನೋಡಿದಾಗ ಕನಕದಾಸರು ನಮಗಿಲ್ಲಿ ಒಬ್ಬ ದಾರ್ಶನಿಕರಂತೆ, ಸಂತರಂತೆ ಕಂಡುಬರುತ್ತಾರೆ. ನಮ್ಮದು ಜಾತ್ಯತೀತ ರಾಷ್ಟ್ರವೆಂದು ಹೇಳಿಕೊಂಡು ಸಭ್ಯತೆಯ ಸೋಗು ಹಾಕಿಕೊಂಡು ಕೋಮುಗಲಭೆಗಳನ್ನು ಸೃಷ್ಟಿಸುವ ಇಂದಿನ ಸಮಾಜಕ್ಕೆ ಕನಕದಾಸರ ಇಂತಹ ಅನೇಕ ಮೌಲಿಕ ವಿಚಾರಗಳು ಬಾಣದಂತೆ ನಾಟುವ, ಚಾಟಿ ಏಟನ್ನು ಕೊಡುವ ಶಕ್ತಿಯನ್ನು ಹೊಂದಿವೆ. ಇಡೀ ಮನುಕುಲವನ್ನು ದೃಷ್ಟಿಯಲ್ಲಿಟ್ಟುಕೊಂಡು ಸೌಹಾರ್ದ ಸಂದೇಶವನ್ನು ಕೊಟ್ಟ ಕನಕದಾಸರು ಇಂತಹ ಕೀರ್ತನೆಗಳ ಮೂಲಕ ಇನ್ನಷ್ಟು ಹತ್ತಿರವಾಗುತ್ತಾರೆ.

'ನಾನು-ನೀನು' ಎಂದು ಕಚ್ಚಾಡುವ ಜನರಿಗೆ ಕನಕದಾಸರ ಸರಳ ಮತ್ತು ಸ್ಪಷ್ಟವಾದ ಉತ್ತರವೆಂದರೆ,

ದಸ್ತಗೀರ ಸಾಬ್ ದಿನ್ನಿ

*ನಾನು-ನೀನು ಎನ್ನದಿರೋ ಹೀನಮಾನವ ।*
*ಜ್ಞಾನದಿಂದ ನಿನ್ನ ನೀನೆ ತಿಳಿದುನೋಡಲೋ ಪ್ರಾಣಿ ॥ಪ॥*

ಇಂತಹ ವಿವೇಕವನ್ನು ಅರುಹುತ್ತಾ ಆತ್ಮಾವಲೋಕನಕ್ಕೆ ಹಚ್ಚುತ್ತಾರೆ. ಇನ್ನೊಂದು ಕೀರ್ತನೆಯಲ್ಲಿ ''ಸತ್ಯವಂತರ ಸಂಗವಿರಲು ತೀರ್ಥವೇತಕೆ ?'' ಎಂದು ಪ್ರಶ್ನಿಸುತ್ತಾರೆ.

ಮಾನವೀಯತೆಯನ್ನು ಮಿಡಿಯುವ ಇಂತಹ ಅನೇಕ ರಚನೆಗಳು ಜಡ್ಡುಗಟ್ಟಿದ ಇಂದಿನ ಸಾಮಾಜಿಕ ವ್ಯವಸ್ಥೆಗೆ, ಅನೀತಿಯ ಬದುಕಿಗೆ, ಸಂಜೀವಿನಿಯಾಗಬಲ್ಲವು ಎಂದರೆ ಅತಿಶಯೋಕ್ತಿಯ ಮಾತೇನಲ್ಲ.







ಹರಿದಾಸ ಸಾಹಿತ್ಯಕ್ಕೆ ರಾಯಚೂರು ಜಿಲ್ಲೆ ತೊಟ್ಟಿಲು – ತವರೂರಾಗಿದೆ. ಈ ನೆಲದಲ್ಲಿ ಅನೇಕ ದಾಸರು ಹುಟ್ಟಿ ಬಾಳಿ ಬೆಳಗಿ ತಮ್ಮ ಸಾಹಿತ್ಯದ ಮೂಲಕ ಭೂಪಟದಲ್ಲಿ ವಿಶಿಷ್ಟ ಸ್ಥಾನ ಪಡೆದುಕೊಂಡವರೆಂದರೆ, ವಿಜಯದಾಸರು, ಗೋಪಾಲದಾಸರು, ಪ್ರಾಣೇಶದಾಸರು, ರಾಮದಾಸರು, ಶ್ಯಾಮಸುಂದರ ದಾಸರು ಮುಂತಾದವರು. ಅವರಲ್ಲಿ ಜಗನ್ನಾಥದಾಸರು ಒಬ್ಬರು.

ದಾಸಕೂಟದ ಪರಂಪರೆಯನ್ನು ಉಜ್ವಲವಾಗಿ ಬೆಳಗಿಸಿದ ಜಗನ್ನಾಥದಾಸರ ಮೊದಲ ಹೆಸರು ಶ್ರೀನಿವಾಸಾಚಾರ್ಯ. ಸಂಸ್ಕೃತ ಸಾಹಿತ್ಯದಲ್ಲಿ ಆಸಕ್ತಿ ಮತ್ತು ಪಾಂಡಿತ್ಯವಿದ್ದುದರಿಂದ ಇವರು ಕನ್ನಡವನ್ನು ಹೀಯಾಳಿಸುತ್ತಿದ್ದರು. ನಂತರ ವಿಜಯದಾಸ, ಗೋಪಾಲ ದಾಸರ ಅನುಗ್ರಹದಿಂದ ಪರಿವರ್ತನೆ ಹೊಂದಿ ದಾಸಸಾಹಿತ್ಯ ರಚಿಸಲು ತೊಡಗಿದರು. ಉಳಿದವರಂತೆ ಇವರು ಕೂಡ ಕೀರ್ತನೆಗಳಲ್ಲಿ ಹರಿಗುರು ಸ್ತುತಿ, ಆಧ್ಯಾತ್ಮಿಕ ವಿಷಯಗಳನ್ನು ಹೇಳಿದ್ದೇ ಹೆಚ್ಚು, ಅಲ್ಲಲ್ಲಿ ವಿಶ್ವ ಮಾನವತ್ವದ ಸಂದೇಶವನ್ನು ನೀಡುವುದರ ಮೂಲಕ ತಮ್ಮ ಸೌಹಾರ್ದತಾ ಗುಣವನ್ನು ಹೀಗೆ ವ್ಯಕ್ತಪಡಿಸಿದ್ದಾರೆ.

*ಆವ ಕುಲದವನಾದೊಡೆ ನೀ*
*ನಾವ ದೇಶದುಳಿದ್ದೊಡೆ ನೀ*
*ನಾವ ಕರ್ಮವ ಮಾಡಲೇ ನಿನ್ನಾವ ಕಾಲದಲಿ ।*
*ಶ್ರೀವರನ ಸರ್ವತ್ರದಲಿ ಸಂ*
*ಭಾವಿಸುತ ಪೂಜಿಸುತ್ತ ಮೋದಿಪ*
*ಕೋವಿದರಿಗುಂಟೇನೋ ಭಯ ದುಃಖಾದಿ ದ್ವಂದ್ವಗಳು ।*

ಜಗನ್ನಾಥದಾಸರ ಗುರುವಾಗಿದ್ದ ಗೋಪಾಲದಾಸರ ಮೊದಲ ಹೆಸರು ಭಾಗಣ್ಣ. ಇವರು ಮುಂದೆ ಗೋಪಾಲದಾಸರಾಗಿ ದಾಸಸಾಹಿತ್ಯಕ್ಕೆ ನೀಡಿದ ಕೊಡುಗೆ ಅಮೋಘವಾದುದು. ಅವರು ತಮ್ಮ ಕೀರ್ತನೆಯೊಂದರಲ್ಲಿ

*''ಪರ ಉಪಕಾರ ಇರಬೇಕು ಪ್ರತಿಕ್ಷಣ*
*ಪರರು ತನ್ನವರು ಸಮರೆಂದು ತಿಳಿಯಬೇಕು''*

ಎಂದು ಹೇಳುತ್ತಾರೆ. ಇಡೀ ಕೀರ್ತನೆಯ ತುಂಬ ಹೇಳಬಹುದಾದ ವಿಷಯವೊಂದನ್ನು ಒಂದೆರಡು ಸಾಲುಗಳಲ್ಲೇ ಹೇಳಿದ ಗೋಪಾಲದಾಸರು ಮಾನವ ಮಾನವರೆಲ್ಲ ಒಂದೆಂದು ತಿಳಿಯುವ, ಸೌಹಾರ್ದತಾ ಭಾವದಿಂದ ಬದುಕುವ, ವಿಚಾರವನ್ನು ಕಟ್ಟಿಕೊಡುತ್ತಾರೆ. ಹಾಗೆಯೇ ''ಮನುಜ ಜನ್ಮ ಮಹಾಸುಕೃತದ ಫಲ'' ಎಂದು ಎಚ್ಚರಿಸಿದ್ದಾರೆ.

ಇನ್ನೊಬ್ಬ ಮಹತ್ವದ ಕೀರ್ತನಕಾರರೆಂದರೆ ರಾಮದಾಸರು. ಇಸ್ಲಾಂ ಧರ್ಮದ ಪಿಂಜಾರ ಮನೆತನದಲ್ಲಿ ಜನಿಸಿದ ಬಡೇ ಸಾಹೇಬರು ಲೌಕಿಕ ಬದುಕಿನ ಅನೇಕ ಕಷ್ಟನಷ್ಟಗಳಿಗೆ ಸಿಲುಕಿ ನಲುಗಿದಾಗ ಹಂಪೆಯಲ್ಲಿ ರಾಮಾವಧೂತರ ದರುಶನ ಪಡೆದುಕೊಂಡು ಅದರಿಂದಲೇ 'ಶ್ರೀರಾಮ' ಅಂಕಿತ ಸ್ವೀಕರಿಸಿ ರಾಮದಾಸರಾಗಿ ಸುಮಾರು ಎಂಟು ನೂರಕ್ಕೂ ಹೆಚ್ಚು ಕೀರ್ತನೆಗಳನ್ನು ಬರೆದು ದಾಸಸಾಹಿತ್ಯಕ್ಕೆ ವಿಶಿಷ್ಟ ಕಾಣಿಕೆ ನೀಡಿದುದು ಮಹತ್ವದ ಸಂಗತಿ. ಮುಸ್ಲಿಂ ಧರ್ಮದಲ್ಲಿ ಹುಟ್ಟಿ ಹರಿಪ್ರೇರಣೆ ಪಡೆದು, ಮಾಧ್ವ ಮತಕ್ಕೆ ಸೇರಿ ರಾಮದಾಸರಾಗಿ ಪರಿವರ್ತನೆ ಹೊಂದಿ ಬಾಳಿ ಬೆಳಕಾಗಿ ಹೋದ ಈ ಕೀರ್ತನಕಾರರ ತೆರೆದಿಟ್ಟ ಬದುಕು ಕೋಮುಸೌಹಾರ್ದತೆಗೆ ಒಳ್ಳೆಯ ಉದ್ಧಾಹರಣೆಯಾಗಿದೆ.

ರಾಮದಾಸರು ಉಳಿದ ಹರಿದಾಸರಂತೆಯೇ ಜಾತಿ, ಕುಲಗಳ ಬಗೆಗೆ ತಮ್ಮ ಕೀರ್ತನೆಗಳ ಮೂಲಕ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ. ಅವರ ಪ್ರಕಾರ ಜಾತಿ ಎನ್ನುವುದು ಹುಟ್ಟಿನಿಂದ ನಿರ್ಧಾರವಾಗುವಂತಹುದಲ್ಲ, ಅವರವರ ಕರ್ಮಾಚರಣೆಗಳ ಪ್ರಕಾರ ಬರುವಂತಹುದು. ಹೊಲೆಯನೆಂದರೆ ಬೇರಾರೂ ಅಲ್ಲ. ಅನೀತಿಯಿಂದ ಬದುಕನ್ನು ಸಾಗಿಸುವವ, ಚಾಡಿ ಹೇಳುವವ, ಪರಸ್ತ್ರೀ ವ್ಯಾಮೋಹಿಯಾದವ, ಗೋಣು ಮುರಿದು ಮೋಸವೆಸಗಿ ಬದುಕುವವನೇ ನಿಜವಾದ ಹೊಲೆಯ ಎಂದು ಹೇಳುತ್ತಾರೆ.

ರಾಮದಾಸರಿಗೆ ನಿಮ್ಮದು ಯಾವ ಕುಲ ಎಂದಾಗ ಅವರ ಉತ್ತರ ಸದಾ ಸಿದ್ಧ. ''ಒಳಹೊರಗೊಂದಾಗಿ ನಳಿನನಾಭನ ಪ್ರೇಮ ಗಳಿಸುವ ಕುಲ ನಂದು'', ''ಅಲ್ಲ ಅಲ್ಲ ಎಂಬ ಜನರ ಬಳಿಯಲ್ಲಿ ನಿಲ್ಲದಂಥ ಕುಲ ನಂದು'' ಎನ್ನುವುದರೊಂದಿಗೆ ''ತಾಮಸವನು ತ್ಯಜಿಸಿ ದಾಸರ ಪ್ರೇಮವನ್ನು ಬಯಸಿ ಭೂಮಿಯೊಳು ಶ್ರೀರಾಮ ರಹೀಮನೆಂದು ನೇಮಿಸಿಕೊಂಡ ನಿಸ್ಸೀಮ ಕುಲ ನಂದು'' ಎನ್ನುವ ಸಮನ್ವಯ ದೃಷ್ಟಿ ರಾಮದಾಸರದಾಗಿತ್ತು.

ಪ್ರತಿ ಮನುಷ್ಯನೂ ಒಳ್ಳೆಯ ವ್ಯಕ್ತಿತ್ವವನ್ನು ಅಳವಡಿಸಿಕೊಂಡು ಬದುಕಬೇಕು. ಬದುಕಿನಲ್ಲಿ ಅವನಿಗೆ ಪ್ರಾಣದಷ್ಟೇ ಮಾನ ಮುಖ್ಯ. ಹಾಗೆಯೇ ಮಾನವೀಯತೆ ಮುಖ್ಯ. ಸಮಾಜದಲ್ಲಿನ ಎಲ್ಲರನ್ನೂ ಪ್ರೀತಿ ವಿಶ್ವಾಸದಿಂದ ಕಾಣುವ ಹಿರಿಯ ಭಾವ ಅವನಿಗೆ ಬೇಕು. ಯಾವ ಸಮಾಜದಲ್ಲಿ ಮಾನವೀಯತೆ ಅಡಗಿರುತ್ತದೆಯೋ ಅಲ್ಲಿ ಸೌಹಾರ್ದತೆಯ ನದಿ ಹರಿಯುತ್ತಿರುತ್ತದೆ ಎನ್ನುವುದನ್ನು ಹೇಳಲೇಬೇಕು.

ಅಂತಹ ವಿಚಾರವನ್ನು ಉಪದೇಶಿಸುವ ಕೀರ್ತನೆಯೊಂದು ಹೀಗಿದೆ :

*''ಮಾನವ ಜನ್ಮಕೆ ಮಾನವ ರೂಪವು*
*ಮಾನ ಪೋದ ಮೇಲೇನಿರಲು ಏನು ?*
*ಶ್ವಾನ ಕನಸಿನಂತಿಹುದು ಸಂಸಾರ ಸುಖ*
*ಮಾನದಿಂ ಪೊರೆ ಭಕ್ತಧೇನು ಶ್ರೀರಾಮ.''*

ದಾಸ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆ ನೀಡಿ ಕೋಮುಸೌಹಾರ್ದತೆಗೆ ಉದಾಹರಣೆಯಾಗಿ, ಅಪೂರ್ವ ನಕ್ಷತ್ರದಂತಿದ್ದ ರಾಮದಾಸರ ಬದುಕು ಮತ್ತು ಬರಹ ಕೀರ್ತನ ಸಾಹಿತ್ಯದಲ್ಲೇ ಅಪರೂಪವಾದುದು.

ತಮ್ಮ ಕಂಠದ ಮೂಲಕ ಹರಿದಾಸ ಸಾಹಿತ್ಯವನ್ನು ಪ್ರಚಾರ ಮಾಡುವುದರೊಂದಿಗೆ ದಾಸರ ಮೌಲಿಕ ಸಂದೇಶಗಳನ್ನು ತಲುಪಿಸಲು ಹೊರಟಿರುವ ಕನಕಗಿರಿಯ ಹುಸೇನ ದಾಸರ ಸೇವೆಯನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಲೇಬೇಕು. ಹುಸೇನದಾಸರಂತಹ ಅನೇಕ ವ್ಯಕ್ತಿಗಳು ನಮ್ಮ ಮಧ್ಯೆ ಎಲೆ ಮರೆಯ ಕಾಯಿಯಂತೆ ದುಡಿಯುತ್ತಿರುವುದು, ಸೌಹಾರ್ದತೆಗೆ ಸ್ವರವಾಗುತ್ತಿರುವುದು, ಈ ನೆಲದ ಸತ್ವವನ್ನು ಪರಿಚಯಿಸುತ್ತದೆ.

ಹರಿದಾಸರು ತಮ್ಮ ಕೀರ್ತನೆಗಳಲ್ಲಿ ಮುಖ್ಯವಾಗಿ ಹರಿಸ್ಮರಣೆಯೊಂದಿಗೆ ಜಾತಿ, ಕುಲ, ಜನನ, ಮರಣ, ಧರ್ಮ ಮುಂತಾದವುಗಳ ಬಗೆಗೆ ಮಾತನಾಡಿದ್ದಾರೆ. ಇದರ ಜೊತೆಗೆ ಸೌಹಾರ್ದಯುತವಾದ ಅಂಶಗಳನ್ನು ಹೇಳಿ ಸಮಾಜ ಸುಧಾರಣೆಗೆ ಪ್ರಯತ್ನಿಸಿರುವುದು ಮಹತ್ವದ ಸಂಗತಿಯಾಗಿದೆ. ಅಂದಿನ ಸಮಕಾಲೀನ ಸಮಾಜದಲ್ಲಿ ಕಂಡುಂಡ ಅನುಭವಗಳಿಗೆ ಅಭಿವ್ಯಕ್ತಿ ರೂಪ ಕೊಟ್ಟಿದ್ದಲ್ಲದೆ ಮಾನವೀಯತೆಗಾಗಿ, ಸಮಾಜ ಬದಲಾವಣೆಗಾಗಿ ತುಡಿದಿದ್ದರು. ಅವರು ಕೀರ್ತನೆಗಳಲ್ಲಿ ತಮ್ಮ ಖಚಿತವಾದ ನಿಲುವುಗಳನ್ನು ದಾಖಲಿಸುವುದರ ಮೂಲಕ ಹಾಡುತ್ತಾ ತಮ್ಮ ಒಳನೋಟಗಳನ್ನು ತೆರೆದು ತೋರಿಸಿದರು. ಹರಿದಾಸರು ಹಾಡುಗಳಲ್ಲಿ ಕಟ್ಟಿಕೊಟ್ಟ ಜೀವನ ಮೌಲ್ಯಗಳು ದಾಸ ಸಾಹಿತ್ಯಕ್ಕೆ ಬಹುದೊಡ್ಡ ಕೊಡುಗೆಗಳಾಗಿವೆ. ಪ್ರಸ್ತುತ ಸಂದರ್ಭಕ್ಕೆ ದಾಸರ ಅನೇಕ ವಿಚಾರಗಳು ಅಪೇಕ್ಷಣೀಯ ಮತ್ತು ಅನುಕರಣೀಯ ಅಂಶಗಳಾಗಿವೆ. ಕೋಮು ಗಲಭೆಗಳು ದಿನೇ ದಿನೇ ಹೆಚ್ಚಾಗುತ್ತಿರುವ ಇಂದಿನ ದಿನಗಳಲ್ಲಿ ದಾಸರ ಅನೇಕ ನುಡಿಗಳು ಸೌಹಾರ್ದತೆಯನ್ನು, ಸಾಮರಸ್ಯವನ್ನು ಮೂಡಿಸುವಲ್ಲಿ ಹೊಸ ಬೆಳಕು ಚೆಲ್ಲುವಂತಿವೆ. ಭಾರತೀಯ ಸಂಸ್ಕೃತಿಯ ಬಗ್ಗೆ ಬೇಕಾದಷ್ಟು ಮಾತನಾಡಿ ಅಮಾನವೀಯ ಹಿಂಸೆಯಲ್ಲಿ ತೊಡಗುವ ಮಂದಿಗೆ ಇದರ ಪರಿಚಯ ಮಾಡಿಕೊಳ್ಳುವ ಅಗತ್ಯವಿದೆ.

ದಸ್ತಗೀರ ಸಾಬ್ ದಿನ್ನಿ
ಸಂಶೋಧನಾ ವಿದ್ಯಾರ್ಥಿ, ಸ್ನಾತಕೋತ್ತರ ಕೇಂದ್ರ, ರಾಯಚೂರು

# ಕ್ಯೂಬ ಒಂದು ಪರಿಚಯ

ಅಮೆರಿಕಾ ಎಂದರೆ ಜಗತ್ತು, ಜಗತ್ತು ಎಂದರೆ ಅಮೆರಿಕಾ ಎಂದೆನಿಸಿಕೊಂಡಿರುವ ಬಲಿಷ್ಠ ರಾಷ್ಟ್ರವನ್ನು ಎದುರು ಹಾಕಿಕೊಂಡು, ಆದರಿಂದ ಸಂಭವಿಸಿದ ಕಷ್ಟ ನಷ್ಟಗಳಿಗೆ ತಲೆಕೊಟ್ಟು ಫಿಡೆಲ್ ಕ್ಯಾಸ್ಟ್ರೊ ಅವರ ಮುಂದಾಳತ್ವದಲ್ಲಿ ಮುಂದುವರಿಯುತ್ತಿರುವ ಪುಟಾಣಿ ದ್ವೀಪ ಕ್ಯೂಬ. ಆ ದೇಶದ ಬಗ್ಗೆ ನನ್ನ ಕಣ್ಣು ತೆರೆಸಿದ್ದು ಶ್ರೀ ಜಿ. ಎನ್. ಮೋಹನ್ ಬರೆದ ''ನನ್ನೊಳಗಿನ ಹಾಡು... ಕ್ಯೂಬಾ'' ಎಂಬ ಪ್ರವಾಸ ಕಥನ. ಇದನ್ನು ಮೋಹನ್‌ರವರ ಪ್ರವಾಸ ಕಥನ ಎಂದು ಓದುವುದಕ್ಕಿಂತ ಕ್ಯೂಬಾದ ಪ್ರಯಾಸ ಕದನ ಎಂದು ಓದುವುದೇ ಹೆಚ್ಚು ಸಮಂಜಸ.

ಭಾರತಕ್ಕೆ ಅಂಡಮಾನ್ ಹೇಗೋ ಹಾಗೆ ಅಮೆರಿಕಾಕ್ಕೆ ಕ್ಯೂಬಾ. ಫ್ಲಾರಿಡಾದಿಂದ ಕೇವಲ ೧೪೦ ಕಿ. ಮೀ. ದೂರದಲ್ಲಿರುವ ಕ್ಯೂಬಾ ಸುಮಾರು ೧೬೦೦ ಚಿಕ್ಕಪುಟ್ಟ ದ್ವೀಪಗಳಿಂದ ಕೂಡಿದ ಒಂದು ದೊಡ್ಡ ದ್ವೀಪ. ಇದರ ರಾಜಧಾನಿ ಹಾಗೂ ಅತಿ ದೊಡ್ಡ ನಗರ ಹವಾನಾ. ಕರ್ನಾಟಕದಲ್ಲಿ ಮಂಡ್ಯ ಸಕ್ಕರೆಗೆ ಹೆಸರುವಾಸಿ ಆದಂತೆ, ಕ್ಯೂಬ ಜಗತ್ತಿನ ಸಕ್ಕರೆಯ ಬಟ್ಟಲು ಎಂದು ಪ್ರಸಿದ್ಧಿ ಪಡೆದಿದೆ. ಇವತ್ತು ಅದಕ್ಕೆ ಪ್ರಾಮುಖ್ಯತೆ ಇರುವುದು ಬಂಡವಾಳಶಾಹಿ ಬಿರುಗಾಳಿಯ ಮಧ್ಯೆಯೂ ಉರುಳದೆ ನಿಂತ ಅದರ ಸಮಾಜವಾದಿ ಸತ್ವಕ್ಕಾಗಿ.

ಕ್ಯೂಬಾದ ಇತಿಹಾಸ ಬಲು ದೀರ್ಘ. ೧೪೯೨ರ ಅಕ್ಟೋಬರ್ ೧೨ ರಂದು ಕ್ಯೂಬಾಗೆ ಕಾಲಿಟ್ಟ ಕೊಲಂಬಸ್ ಈ ದ್ವೀಪದ ಸೌಂದರ್ಯ ಮತ್ತು ಸಂಪತ್ತನ್ನು ನೋಡಿ ತಾನು ಇಂಡಿಯಾಗೆ ಕಾಲಿಟ್ಟಿದ್ದೇನೆಂದು ಭಾವಿಸಿ 'ಇಂಡೀಸ್' ಎಂದು ಕರೆದ. ಇದು ಇಂಡಿಯಾ ಅಲ್ಲ ಎಂದು ಗೊತ್ತಾದ ನಂತರ 'ವೆಸ್ಟ್ ಇಂಡೀಸ್' ಆಯಿತು. ವೆಸ್ಟ್ ಇಂಡೀಸ್ ದ್ವೀಪ ಸಮುಚ್ಚಯದ ಅಂಗವಾದ ಆಂಟಿಲೀಸ್ ದ್ವೀಪ ಗೊಂಚಲಿನಲ್ಲಿರುವ ಅತಿ ಸುಂದರ ದ್ವೀಪವೇ ಕ್ಯೂಬಾ. ಆದುದರಿಂದ ಇದನ್ನು 'ಆಂಟಲೀಸಿನ ಮುತ್ತು' ಎಂದು ಕ್ಯೂಬನ್ನರು ಕರೆಯುತ್ತಾರೆ.

ಮೊದಲು ಅಂದದ್ದು 'ಡಿಸ್ಕವರಿ', ನಡೆದದ್ದು 'ಡಿಸ್ಟ್ರಕ್ಷನ್.' ಆಕ್ರಮಣ ಮಾಡಿದ ಸ್ಪೇನ್, ಕ್ಯೂಬಾದಲ್ಲಿ ನೆಲೆಸಿದ್ದ ಮೂಲನಿವಾಸಿಗಳನ್ನು ಕ್ರಮೇಣ ನಾಶ ಮಾಡಿತು. ಚಾಕರಿಗೆ ಆಫ್ರಿಕಾದಿಂದ ನೀಗ್ರೋ ಗುಲಾಮರನ್ನು ತಂದು ದುಡಿಸಿಕೊಂಡಿತು. ಬ್ರಿಟಿಷರು ಕ್ಯೂಬಾದ ಮೇಲೆ ದಾಳಿ ಮಾಡಿ ವಶಪಡಿಸಿಕೊಂಡಿದ್ದು ಕೇವಲ ಒಂದು ವರ್ಷ. ಸ್ಪೇನ್ ಆಳಿದ್ದು ಸುಮಾರು ನಾನೂರು ವರ್ಷ. ಹೀಗಾಗಿ ಇವತ್ತಿಗೂ ಅಲ್ಲಿಯ ಜನರ ಭಾಷೆ ಸ್ಪ್ಯಾನಿಷ್. ಕ್ಯೂಬಾದಲ್ಲಿನ ನಾಗರಿಕರು ಸ್ಪೇನಿನ ಅಡಿಯಾಳಾಗಿ ಬದುಕುವುದಕ್ಕಿಂತಲೂ ಸ್ವತಂತ್ರವಾಗಿರುವುದು ಒಳ್ಳೆಯದೆಂದು ಆಗಾಗ ಸ್ಪೇನಿನ ಆಳ್ವಿಕೆಯನ್ನು ಪ್ರತಿಭಟಿಸುತ್ತಿದ್ದರು, ದಂಗೆ ಏಳುತ್ತಿದ್ದರು. ಅಮೆರಿಕಾ ಕ್ಯೂಬಾ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿ ಸ್ಪೇನನ್ನು ಸೋಲಿಸಿ ಕೆಲಕಾಲ ಕ್ಯೂಬಾದ ಮೇಲೆ ಮಿಲಿಟರಿ ಆಡಳಿತವನ್ನು ಚಲಾಯಿಸಿತು. ೧೯೩೦ರಲ್ಲಿ ಫುಲ್‌ಗಾನ್ಸಿಯೋ ಬ್ಯಾಟಿಸ್ಟ ಎಂಬುವವನ ದಬ್ಬಾಳಿಕೆಗೆ ಅದು ಒಳಪಟ್ಟಿತು. ೧೯೫೯ರಲ್ಲಿ ಅವನನ್ನು ಕೆಳಗಿಳಿಸಿ ಫಿಡೆಲ್ ಕ್ಯಾಸ್ಟ್ರೋ ಅಧಿಕಾರಕ್ಕೆ ಬಂದರು.

ಅಂದಿನಿಂದ ಈವರೆಗೆ ಕ್ಯೂಬಾ ಸಾಧಿಸಿದ್ದೇನು, ಅದಕ್ಕಿಂತ ಹತ್ತು ವರ್ಷದ ಹಿಂದೆಯೇ ಸ್ವಾತಂತ್ರ್ಯ ಪಡೆದ ಭಾರತ ಸಾಧಿಸಿದ್ದೇನು ಎಂದು ತುಲನಾತ್ಮಕವಾಗಿ ವಿವೇಚಿಸುವುದು ನಮಗೆ ಅಗತ್ಯವಾಗಿದೆ.

ಭಾರತವೂ ಕ್ಯೂಬಾದಂತೆಯೇ ಸಮಾಜವಾದಿ ತತ್ವವನ್ನು ಸಂವಿಧಾನದಲ್ಲಿ ಸ್ವೀಕರಿಸಿಕೊಂಡಿದೆ. ಆದರೆ ಆಚರಣೆಯಲ್ಲಿ ಇಲ್ಲ. ನಮ್ಮದು ಪ್ರಜಾಪ್ರಭುತ್ವ, ಕ್ಯೂಬಾದ್ದು ಪ್ರಜಾಹಿತತ್ವ. ಅದು ಕಾರ್ಮಿಕರ ಪ್ರಧಾನತೆ ಇರುವ ದೇಶ; ನಮ್ಮದು ದುಡಿಯದೆ ಮತ್ತೊಬ್ಬರಿಂದ ದುಡಿಸಿಕೊಂಡು ಹಾಯಾಗಿ ಬದುಕಲು ಬಯಸುವ ದೇಶ. ನಮ್ಮಲ್ಲಿ ರಾಜಕೀಯ ಪಕ್ಷಗಳಿಗೆ ಲೆಕ್ಕವಿಲ್ಲ. ಅಲ್ಲಿ ಕ್ಯೂಬನ್ ಕಮ್ಯುನಿಸ್ಟ್ ಪಾರ್ಟಿ ಎನ್ನುವ ಒಂದೇ ಪಕ್ಷ. ಪಕ್ಷಗಳು ನಾಲ್ಕಾರು ಇದ್ದರೆ ಅವರಲ್ಲಿ ಪೈಪೋಟಿ ಉಂಟಾಗಿ ಉತ್ತಮ ಸರ್ಕಾರ ಜನಕ್ಕೆ ಲಭಿಸೀತು ಎನ್ನುವುದು ಒಂದು ಆಶಯ. ಆದರೆ ಈ ಆಶಯ ಭಾರತದಲ್ಲಿ ಇದುವರೆಗೆ ನೆರವೇರಿಲ್ಲ.

ಕ್ಯೂಬಾ ಅಮೆರಿಕಾದಿಂದ ಬಹಿಷ್ಕೃತವಾದ ದೇಶ, ನಮ್ಮದು ತಿರಸ್ಕೃತವಾದ ದೇಶ. ನಾವು ರಷ್ಯಾ ಬಲಹೀನವಾದ ನಂತರ ಅಮೆರಿಕೆಯನ್ನು ಒಲಿಸಿಕೊಳ್ಳಲು ಪ್ರಯತ್ನಿಸುತ್ತಿದ್ದೇವೆ. ಇತ್ತೀಚಿನ ಅಮೆರಿಕೆಯ ದುರ್ಘಟನೆಯ ಹಿನ್ನೆಲೆಯಲ್ಲಿ ಪಾಕಿಸ್ತಾನವನ್ನು ಬದಿಗಿರಿಸಿ ನಾವು ಅಮೆರಿಕೆಯ ಸ್ನೇಹಕ್ಕೆ ಜೊಲ್ಲು ಸುರಿಸಲು ಪ್ರಯತ್ನಿಸಿದ್ದು ಎಷ್ಟೊಂದು ಹಾಸ್ಯಾಸ್ಪದ ! ಕ್ಯೂಬಾದ ಮೇಲೆ ಹೇರಿರುವ ಆರ್ಥಿಕ ದಿಗ್ಬಂಧನಗಳನ್ನು ನೆನೆಸಿಕೊಂಡರೆ ನಮಗೆ ಎದೆ ಬಡಿತ ಹೆಚ್ಚಾಗುತ್ತದೆ, ಇಷ್ಟಾದರೂ ಕ್ಯೂಬಾ ಜಪ್ಪೆಂದಿಲ್ಲ. ನಾವು ಮಾತ್ರ ನಮ್ಮನ್ನು ಮಾರಿಕೊಳ್ಳಲು ತಯಾರಾಗಿದ್ದೇವೆ. ಕ್ಯೂಬನ್ನರಲ್ಲಿರುವ ಸ್ವಾಭಿಮಾನ, ದೇಶಪ್ರೇಮ ನಮ್ಮಲ್ಲಿಲ್ಲ. ನಮ್ಮಲ್ಲಿದ್ದ ಕಷ್ಟ ಸಹಿಷ್ಣುತೆ, ತ್ಯಾಗ ಮನೋಭಾವ ಎಲ್ಲಾ ನಶಿಸಿಹೋಗಿದೆ. ಹಣ, ಲಾಭಕ್ಕಾಗಿ ನಾವು ಏನು ಮಾಡಲೂ ಹೇಸುವುದಿಲ್ಲ. ಇದರಿಂದಲೇ ನಮ್ಮಲ್ಲಿ ಹಗರಣಗಳು ಹೆಚ್ಚುತ್ತಿವೆ.

ನಮ್ಮ ದೇಶದಂತೆ ಕ್ಯೂಬಾ ಕೂಡಾ ಎರಡು ಮುಖ್ಯ ಗುರಿಗಳನ್ನು ಇಟ್ಟುಕೊಂಡಿದೆ. ಮೊದಲನೆಯದಾಗಿ ಆರ್ಥಿಕ ಮತ್ತು ಸಾಮಾಜಿಕ ಸುಧಾರಣೆ, ಎರಡನೆಯದಾಗಿ ಆರ್ಥಿಕ ಮತ್ತು ಸಾಮಾಜಿಕ ಸಮಾನತೆ. ಮೊದಲನೆಯ ಗುರಿಯಲ್ಲಿ ಕ್ಯೂಬಾ ಹಿಂದೆ ಬಿದ್ದಿರಬಹುದು, ಆದರೆ ಎರಡನೆಯ ಗುರಿಯಲ್ಲಿ ಅದು ಮಾಡಿರುವ ಕಾಲು ಭಾಗ ಕೂಡ ನಮ್ಮಿಂದಾಗಿಲ್ಲ. ಅಲ್ಲಿಯ ಉಚಿತ ಶಿಕ್ಷಣ ಮತ್ತು ಉಚಿತ ವೈದ್ಯಕೀಯ ಉನ್ನತಮಟ್ಟದಲ್ಲಿದೆ. ವೈದ್ಯರು ಮನೆಗೆ ಬರುತ್ತಾರೆ, ಮನೆಯವರು ವೈದ್ಯರನ್ನು ಹುಡುಕಿಕೊಂಡು ಹೋಗಬೇಕಿಲ್ಲ. ಪ್ರಜೆಗಳು ಸುಶಿಕ್ಷಿತರಾಗಿದ್ದರೆ, ಆರೋಗ್ಯವಂತರಾಗಿದ್ದರೆ ಅದಕ್ಕಿಂತ ಹೆಚ್ಚಿನದೇನು ಬೇಕು? ಅಲ್ಲಿಯೂ ಬಡತನವಿದೆ. ಕಾರಿಗೆ ಪೆಟ್ರೋಲಿಲ್ಲ, ಹಾಗೆಂದು ಜನರು ಅಳುತ್ತಾ ಕೂರುವುದಿಲ್ಲ. ಪೆಟ್ರೋಲನ್ನು ಶಾಲೆಯ ಮಕ್ಕಳ ವಾಹನಗಳಿಗಾಗಿ ಬಿಟ್ಟು ಸೈಕಲ್ ತುಳಿಯುತ್ತಾರೆ. ಸಿಕ್ಕಿದ್ದನ್ನು ಹಂಚಿಕೊಂಡು ತಿನ್ನುತ್ತಾರೆ.

ದೇಶಕ್ಕಾಗಿ ನಾನು, ನನಗಾಗಿ ದೇಶವಲ್ಲ ಎಂಬ ಭಾವನೆ ಎಲ್ಲಾ ಕ್ಯೂಬನ್ನರಲ್ಲಿಯೂ ರಕ್ತಗತವಾಗಿಹೋಗಿದೆ. ೧೬ ವರ್ಷದ ವಯಸ್ಸಿನ ಗಂಡಸರೆಲ್ಲಾ ೩ ವರ್ಷಗಳ ತನಕ ಸೈನಿಕ ಕಾರ್ಯಾಚರಣೆಯಲ್ಲಿ ತೊಡಗಿರಬೇಕು, ಇಲ್ಲವೇ ೩ ವರ್ಷಗಳ ಕೃಷಿ ಕೆಲಸ ಮಾಡಬೇಕು. ಅಲ್ಲಿಯ ಸೈನ್ಯದ ಗಾತ್ರ ದೊಡ್ಡದು. ಅದರ ಪಾತ್ರವೂ ಅಷ್ಟೇ ದೊಡ್ಡದು. ಕಬ್ಬಿನ ಬೆಳೆ ಬಂದಾಗ ಕಟಾವಿಗೆ ಸೈನ್ಯವೂ ಸಿದ್ಧ.




ಕ್ಯೂಬಾದಲ್ಲಿ ರೇಷನ್ ಇದೆ. ನಮ್ಮಲ್ಲಿದ್ದ ರೇಷನ್ ಈಗ ರದ್ದಾಗುತ್ತಿದೆ. ದುಡ್ಡಿಲ್ಲದವನು ಬದುಕುವುದು ಕಷ್ಟವಾಗುತ್ತಿದೆ. ಬದುಕಲೇ ಬೇಕೆನ್ನುವವನು ದುಷ್ಟ ಮಾರ್ಗದಿಂದ ಹಣ ಗಳಿಸಲು ಪ್ರಾರಂಭಿಸಿದ್ದಾನೆ. ಸರ್ಕಾರ ಮತ್ತು ನಾಗರಿಕರ ನಡುವೆ ಇರಬೇಕಾದ ಬಾಂಧವ್ಯ ಸಡಿಲವಾಗುತ್ತಿದೆ. ಇರುವೆಯಿಂದಲೂ ಆನೆ ಕಲಿಯಬೇಕಾಗಿದೆ !

ಹಾಲಾಡಿ ಮಾರುತಿರಾವ್
# ೩/೪, ಮ್ಯಾಳಸಾ ನಿವಾಸ, ಅಬ್ಬಿಗೆರೆ ಬಡಾವಣೆ,
ಚಿಕ್ಕಬಾಣಾವರ ರಸ್ತೆ, ಬೆಂಗಳೂರು-೯೦

# ಧರ್ಮನಿರಪೇಕ್ಷತೆ, ಧರ್ಮಸಹಿಷ್ಣುತೆ

ಎ. ಪಿ. ಗೌರೀಶಂಕರ

**ಭಾ**ರತದ ಪ್ರಜೆಗಳು ತಮಗೇನೇ ಸಮರ್ಪಿಸಿಕೊಂಡಿರುವ ಪವಿತ್ರ ರಾಷ್ಟ್ರ ನಿರ್ಮಾಪನ ಸಂಹಿತೆ – ಭಾರತದ ಸಂವಿಧಾನ. ಅದರ ಪೀಠಿಕೆಯಲ್ಲೇ ಘೋಷಿಸಿರುವಂತೆ ಸಮಾಜ ಸ್ವಾಮ್ಯ, ಧರ್ಮನಿರಪೇಕ್ಷತೆ ಮತ್ತು ಪ್ರಜಾಪ್ರಭುತ್ವ ರಾಷ್ಟ್ರದ ಸ್ಥಿರ ಹಾಸು. ಎಲ್ಲ ಪ್ರಜೆಗಳಿಗೂ ಆರ್ಥಿಕ, ಸಾಮಾಜಿಕ, ರಾಜಕೀಯ ನ್ಯಾಯ, ವಿಚಾರ ಸ್ವಾತಂತ್ರ್ಯ, ವಾಕ್ ಸ್ವಾತಂತ್ರ್ಯ ಮತ್ತು ಮತಧರ್ಮಗಳ ಅವಲಂಬನೆ, ಆರಾಧನೆಗಳ ಸ್ವಾತಂತ್ರ್ಯ ಮತ್ತು ಜೀವನದಲ್ಲಿ ಸ್ಥಾನಮಾನಗಳನ್ನು ಹೊಂದಲು ಹಾಗೂ ವ್ಯಕ್ತಿತ್ವ ವಿಕಸನಗೆ ಸಮಾನ ಅವಕಾಶಗಳನ್ನೊದಗಿಸುವುದು – ಇವು ರಾಷ್ಟ್ರದ ಧ್ಯೇಯ. ಪ್ರಜಾಪ್ರಭುತ್ವ ಆಡಳಿತ ನೀತಿ ಸ್ಥಿರಗೊಳ್ಳಲು ಮತ್ತು ದೇಶದ ಸಮಗ್ರತೆ ಕಾಪಾಡಿಕೊಳ್ಳಲು, ಧರ್ಮನಿರಪೇಕ್ಷತೆ ತತ್ವಾಡಳಿತೆಯ ಪ್ರಾಮುಖ್ಯ ಮನಗಂಡು, ಸಂವಿಧಾನ ನಿಬಂಧನಕಾರರು, ತಾ : ೩-೪-೧೯೪೮ರಂದು ಒಂದು ಚಾರಿತ್ರಿಕ ನಿರ್ಣಯ ಕೈಗೊಂಡರು.

ಅದರಂತೆ ಯಾವುದೇ ಸಂಘ ಅಥವಾ ಸಂಸ್ಥೆ, ಅದರ ಸದಸ್ಯತ್ವ ಸ್ವೀಕರಣೆ ಅಥವಾ ನಿರಾಕರಣೆಯಲ್ಲಿ ಧರ್ಮ, ಮತ ಅಥವಾ ಜಾತಿಯ ನೆಲೆಯಲ್ಲಿ ಅಥವಾ ಕಾರಣಕ್ಕಾಗಿ ಪ್ರವೃತ್ತವಾಗುವುದೋ ಅಂಥ ಸಂಘ ಅಥವಾ ಸಂಸ್ಥೆಯ ಚಟುವಟಿಕೆಯನ್ನು ನಿಯಂತ್ರಿಸಿ, ಸಂಪೂರ್ಣ ತಡೆಯತಕ್ಕದ್ದು ಮತ್ತು ಈ ಬಗ್ಗೆ ಯೋಗ್ಯ ಕಾಯಿದೆ ರಚಿಸತಕ್ಕದ್ದು. ಸಂವಿಧಾನ ರಚನೆಯ ಮೊದಲು (೧೯೪೭) ಭವಿಷ್ಯತ್ ಭಾರತದ ನೀಲಿ ನಕಾಶೆಯನ್ನು ನಿರೂಪಿಸುತ್ತ ಪಂಡಿತ್ ಜವಾಹರಲಾಲ್ ನೆಹರೂರವರು ಸ್ವತಂತ್ರ ಭಾರತ ಎಲ್ಲ ಧರ್ಮ, ಮತ, ಜಾತಿಗಳಿಗೆ ಸಂಪೂರ್ಣ ಸ್ವಾತಂತ್ರ್ಯ ನೀಡುವುದು; ಹಾಗಿದ್ದರೂ ರಾಷ್ಟ್ರ ಎಲ್ಲ ಧರ್ಮ, ಮತ, ಜಾತಿಗಳಿಂದ ಅತೀತವಾಗಿರ ತಕ್ಕದ್ದೆಂದು ಕರಾರುವಾಕ್ಕಾಗಿ ಹೇಳಿದ್ದರು. ತಮ್ಮ ಕೊನೆಯುಸಿರಿದ್ದ ತನಕ ದೇವರ ಸ್ಮರಣೆಯಲ್ಲಿರುತ್ತಿದ್ದ ಮಹಾತ್ಮಾ ಗಾಂಧೀಜಿ ಇದನ್ನು ಸಮರ್ಥಿಸಿ, ಧರ್ಮವು ಪ್ರಜೆಯ ವೈಯಕ್ತಿಕ ವಿಚಾರ, ರಾಷ್ಟ್ರಾಡಳಿತೆಗೂ, ಧರ್ಮಕ್ಕೂ ನೇರ ಸಂಬಂಧವಿರತಕ್ಕದ್ದಲ್ಲವೆಂಬ ನಿರ್ಧಾರಿತ ಷರತ್ತು ಮಂಡಿಸಿದ್ದರು. ದಾರ್ಶನಿಕ ಸರ್ವಪಲ್ಲಿ ರಾಧಾಕೃಷ್ಣನ್ ಅವರು ಧಾರ್ಮಿಕ ಸಂಸ್ಥೆ (ಮಠ, ಇಗರ್ಜಿ, ಮಸೀದಿ ಮುಂತಾದವು) ಮತ್ತು ರಾಷ್ಟ್ರ ಇವುಗಳ ನಡುವೆ ನೇರ ಸಂಬಂಧ, ಆಡಳಿತೆಯ ಮಟ್ಟಿಗೆ ಅನಗತ್ಯ ಎಂಬುದಾಗಿ ಧರ್ಮನಿರಪೇಕ್ಷತೆಯ ಚಾರಿತ್ರಿಕ ಹಿನ್ನೆಲೆಯ ತತ್ವ ನಿರೂಪಿಸಿದ್ದರು.

ಸಂವಿಧಾನದ ಪೀಠಿಕೆಯಲ್ಲಿ ಧರ್ಮನಿರಪೇಕ್ಷತೆಯ ಸ್ಪಷ್ಟ ಉಲ್ಲೇಖ ೧೯೭೬ರಲ್ಲಿ (೪೨ನೆಯ ತಿದ್ದುಪಡಿ) ಸೇರಿಸಿರುವುದು ಕೇವಲ ಪಕ್ಷ ರಾಜಕೀಯ ಸಾಧನೆಗಾಗಿ. ಆದರೆ, ನಿಬಂಧನಕಾರರು ಪ್ರಜೆಗಳ ಸ್ವಾತಂತ್ರ್ಯದ ವ್ಯಾಪ್ತಿಯನ್ನು ಪೀಠಿಕೆಯಲ್ಲಿಯ ನಿರೂಪಣೆಯನ್ನೂ ಮೂರನೆಯ ಅಧ್ಯಾಯದಲ್ಲಿ ಮೂಲಭೂತ ಹಕ್ಕುಗಳನ್ನೂ ಈ ತತ್ವಾನುಸಾರವೇ ನೇಯ್ದಿದ್ದಾರೆ. ಇದರ ಸ್ಪಷ್ಟ ವ್ಯಾಖ್ಯೆ ಸಂವಿಧಾನದಲ್ಲೆಲ್ಲೂ ಕಾಣಸಿಗದು. ಆದರೆ, ರಾಜ್ಯಗಳ ಉಚ್ಚ ನ್ಯಾಯಾಲಯಗಳು ಮತ್ತು ರಾಷ್ಟ್ರದ ಸರ್ವೋಚ್ಚ ನ್ಯಾಯಾಲಯದ ಹಲವಾರು ತೀರ್ಪುಗಳಲ್ಲಿ ರಾಷ್ಟ್ರಾಡಳಿತೆಯಲ್ಲಿ ಅದರ ಸ್ಥಾನ, ವಿವಿಧ ಸ್ವರೂಪ, ಮಿತಿ, ಅನ್ವಿತ ನೀತಿ ಸೂತ್ರಗಳನ್ನು ಸವಿವರವಾಗಿ ನಿರೂಪಿಸಲಾಗಿದೆ.

ಸ್ವಾತಂತ್ರ್ಯಪೂರ್ವ ಇಂಡಿಯಾ ದೇಶದಿಂದ ಚಾರಿತ್ರಿಕ ಮತ್ತು ರಾಜಕೀಯ ಕಾರಣಗಳಿಂದ ಇಸ್ಲಾಮೀ ರಾಷ್ಟ್ರವೊಂದು ಪ್ರತ್ಯೇಕವಾಗಿ ಸ್ಥಾಪನೆಯಾದುದರ ಮತ್ತು ಆ ಸಂದರ್ಭದಲ್ಲುಂಟಾದ ಭೀಕರ ಕಗ್ಗೊಲೆಗಳ ಮತೀಯ ದಂಗೆಗಳ ಮುನ್ನೆಲೆಯಲ್ಲಿ ಧರ್ಮನಿರಪೇಕ್ಷ ನಿಲುವು ರಾಷ್ಟ್ರ ನಾಯಕರಿಗೆ ಆಗ ಅನಿವಾರ್ಯವಾಗಿತ್ತು. ಇದು ಆಗಿನ ವಸ್ತುಸ್ಥಿತಿಯಾಗಿತ್ತಾದರೂ ಭಾರತದ ಬಹುಧರ್ಮೀಯ ಸಮಾಜಕ್ಕೆ ಧರ್ಮನಿರಪೇಕ್ಷತೆ ತತ್ವ ತೀರ ಹೊಸದೇನೂ ಆಗಿರಲಿಲ್ಲ. ಪ್ರಾಚೀನ ಕಾಲದಿಂದಲೂ ಧರ್ಮಾನುಷ್ಠಾನದಲ್ಲಿ ಭಾರತೀಯರ ನಿಲುವು ಬಲು ವಿಶಾಲ ಹಾಗೂ ಉದಾರ. ಭಾರತೀಯ ಚಿಂತನಕಾರರು ವೈಚಾರಿಕ ತತ್ತ್ವ ನಿಷ್ಠೆಗಳನ್ನು ಪುರಾತನಕಾಲದಿಂದಲೂ ಎತ್ತಿ ಹಿಡಿದಿದ್ದಾರೆ. ತಮಗೆ ಲಭ್ಯವಿರುವ ಮಾಹಿತಿ ದತ್ತಾಂಶದ ಆಧಾರದಲ್ಲಿ ವೈಚಾರಿಕ ಪಥ ಅನುಸರಿಸಿ ಪ್ರಕೃತಿಯ (ಅಂದರೆ ಇಂದ್ರಿಯಗೋಚರ ಪ್ರಪಂಚದ) ಮೂಲ ಶೋಧನೆ ನಡೆಸಿ ಶಾಶ್ವತ ನಿಯಮಗಳನ್ನು ರೂಪಿಸಿದ್ದಾರೆ. ಭಾರತದ ದರ್ಶನಶಾಸ್ತ್ರ ನಿಯಮಗಳ ನಿರೂಪಣೆಯು ಪವಾಡಗಳನ್ನು ಆಧರಿಸಿಲ್ಲ. ಸತ್ಯ ಮತ್ತು ಸತ್ಯಾನ್ವೇಷಣೆಯೇ ಆ ದರ್ಶನಶಾಸ್ತ್ರದ ನೆಲೆ – ಈ ನೆಲೆಯಲ್ಲಿ ಪ್ರತಿಯೊಬ್ಬನೂ ತಾನು ನಂಬಿದ ದೇವರನ್ನು ಪೂಜಿಸಲು ಸ್ವತಂತ್ರ. ತನ್ನ ನಂಬಿಕೆಯ ಸತ್ಯದಂತೆ, ಪರಪೀಡನೆ ಇಲ್ಲದೆ ಮತ್ತು ಇತರರ ನಂಬಿಕೆಯನ್ನು ಗೌರವಿಸಿ, ಬಾಳಲು ಪ್ರತಿಯೊಬ್ಬನೂ ಸ್ವತಂತ್ರ. ಇದರ ಪರಿಣಾಮವಾಗಿ ವೈದಿಕ ಧರ್ಮದ ಜತೆಯಲ್ಲೇ ಚಾರ್ವಾಕರು, ಬೌದ್ಧರು, ಜೈನರು, ತರುವಾಯದ ದಿನಗಳಲ್ಲಿ ಪರದೇಶಗಳಿಂದ ಬಂದ ಅನ್ಯಮತೀಯರೂ ಇಲ್ಲಿ ಜೀವನ ನಡೆಸಲು ಸಾಧ್ಯವಾಯಿತು. ಇದು ಅತಿ ಪ್ರಾಚೀನ, ಎಲ್ಲ ಭಾರತೀಯರೂ ಸ್ಥಿರವಾಗಿ ನಂಬಿ, ಅಂಗೀಕರಿಸಿದ ಮೂಲ ತತ್ತ್ವ. ಈ ಕಾರಣದಿಂದಲೂ, ಸಂವಿಧಾನ ನಿಬಂಧನಕಾರರಿಗೆ ಧರ್ಮ ನಿರಪೇಕ್ಷ ತತ್ವವನ್ನು ಎರಕದಲ್ಲಿ ಸೇರಿಸಲು ಕಷ್ಟವೆನಿಸಲಿಲ್ಲ.

ಸಾಂವಿಧಾನಿಕವಾಗಿ ಭಾರತವು ಧರ್ಮನಿರಪೇಕ್ಷವಾಗಿರುವುದಾದರೂ, ಸರಕಾರದ ಆಡಳಿತ ಧೋರಣೆ, ಕಾರ್ಯಾಚರಣೆ, ರಾಜಕೀಯ ನಾಯಕರ ನಡೆವಳಿಕೆಗಳು ಈ ತತ್ವವನ್ನು ಬಿಂಬಿಸುವುವೇ ? ಇದು ಬಹಳ ಮುಖ್ಯ ವಿಚಾರ. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಗಳಾಗಿದ್ದ ಮೊದಲ ಎರಡು ಪೀಳಿಗೆಯ ನಾಯಕರು ರಾಷ್ಟ್ರಾಡಳಿತೆಯಿಂದ ದೂರವಾದಂತೆ ತತ್ವನಿಷ್ಠೆ ಮತ್ತು ಧ್ಯೇಯ ನಿಷ್ಠೆಗಳು ಶಿಥಿಲವಾದುದು ಕಂಡುಬರುತ್ತದೆ. ನೆಹರೂ ರವರ ವೈಚಾರಿಕತೆ, ವೈಜ್ಞಾನಿಕ ದೃಷ್ಟಿಕೋನ ಮತ್ತು ಸಮಾಜ ಸ್ವಾಮ್ಯವಾದ ಅವರೊಡನೇ ಅಂತ್ಯ ಕಂಡವು. ಅನಂತರದ ದಿನಗಳಲ್ಲಿ ಅವರ ಉಜ್ವಲ ವ್ಯಕ್ತಿ ಪೂಜೆ ಅಲ್ಲದೆ ಅವರ ಪೀಳಿಗೆಯ ಪಾದಪೂಜೆಯನ್ನೂ ಹಲವು ವಿಧದಲ್ಲಿ ಬಹಿರಂಗವಾಗಿ ನಡೆಯಿಸುತ್ತ ಬಂದಿರುವುದಾದರೂ, ಅವರ ಸಾರ್ವಜನಿಕ ಜೀವನ ಧ್ಯೇಯ, ತತ್ವಾನುಷ್ಠಾನಗಳನ್ನು ಸಂಪೂರ್ಣವಾಗಿ ವರ್ಜಿಸಲಾಗಿದೆ. ದೇಶದ ಸಂಪನ್ಮೂಲಗಳನ್ನು ಉತ್ಪಾದನೆ ಹೆಚ್ಚಿಸಲು, ಪ್ರಜೆಗಳಿಗೆ ವೈಜ್ಞಾನಿಕ ಶಿಕ್ಷಣ ನೀಡಲು ಮತ್ತು ಬಡತನದ ಬವಣೆ ನಿವಾರಿಸಲು ಸರಕಾರಗಳು ಉಪಯೋಗಿಸಲಿಲ್ಲ, ಉಪಯೋಗಿಸುತ್ತಿಲ್ಲ. ಬದಲಾಗಿ ರಾಜಕೀಯ ಧುರೀಣರ ದರ್ಬಾರು ದೌಲತ್ತು ವಿಜೃಂಭಿಸಲು ಪೋಲು ಮಾಡುತ್ತಿರುವರು.

ಆರ್ಥಿಕ ಸ್ವಾಸ್ಥ್ಯದಿಂದ ವಂಚಿತರಾದ ಮತದಾರರು ಸ್ವಾಭಾವಿಕವಾಗಿ ಅಂದಿನ ಏಕಪಕ್ಷ ಕಾಂಗ್ರೆಸನ್ನು ತೊರೆದು ಇತರ ರಾಜಕೀಯ ಪಕ್ಷಗಳನ್ನು ಬೆಂಬಲಿಸತೊಡಗಿದಾಗ, ಮತ ಗಳಿಸುವ ಕುಯುಕ್ತಿಗಳನ್ನು ಕಾಂಗ್ರೆಸ್ಸಿಗರು ಅರಸತೊಡಗಿದರು. ಆರ್ಥಿಕ ಧೋರಣೆಯ ಅನುಷ್ಠಾನದಲ್ಲಿ ತಾವು ಸೋಲುತ್ತಿರುವುದು ಸ್ಪಷ್ಟವಾಗುತ್ತಿದ್ದಂತೆ, ಆಳುವ ಕಾಂಗ್ರೆಸ್ ಮತ್ತು ಅದರೊಡನೆ ಪೈಪೋಟಿಯಲ್ಲಿ ಇತರ ರಾಜಕೀಯ ಪಕ್ಷಗಳು ಅಲ್ಪಸಂಖ್ಯಾತರ, ಪರಿಶಿಷ್ಟ ವರ್ಗ ಹಾಗೂ ಜಾತಿಗಳ ಮತದಾರರನ್ನು ಪ್ರಜಾತಂತ್ರ ತತ್ವಗಳನ್ನು ಬಲಿಗೊಟ್ಟು, ಓಲೈಸುವ ವಕ್ರಮಾರ್ಗ ಹಿಡಿದರು. ಆರ್ಥಿಕ ಸಮಾನತೆ, ಸಮಾನ ಉದ್ಯೋಗಾವಕಾಶ ನಿರ್ಮಾಣ, ಬಡತನ ನಿವಾರಣೆ ಧ್ಯೇಯಗಳಿಗೆ ಧರ್ಮ, ಮತ ಹಾಗೂ ಜಾತೀಯ ವೈಷಮ್ಯದ ಮೆರುಗು ಕೊಟ್ಟು, ಧಾರ್ಮಿಕ ಭಾವನೆ ಕೆರಳಿಸುವುದು, ಅನುಷ್ಠಾನಿಸಲು ಸಾಧ್ಯವಲ್ಲದ ಭರವಸೆ ನೀಡುವುದು, ಧರ್ಮ, ಜಾತಿ, ಪಂಗಡಗಳ ನೆಲೆಯಲ್ಲಿ ತಾರತಮ್ಯ ತೋರುವ ಕೇವಲ ಅಸಹ್ಯ ಕೀಳುಮಟ್ಟದ ರಾಜಕೀಯ ಡೊಂಬರಾಟಗಳನ್ನು ಎಲ್ಲ ಪಕ್ಷಗಳೂ ಪೈಪೋಟಿಯಿಂದ ನಡೆಸಿದುವು. ಇಂದಿಗೂ ನಡೆಸುತ್ತಿವೆ. ಇಷ್ಟಲ್ಲದೆ, ಧರ್ಮ ಶ್ರದ್ಧೆಯ ಸೋಗಿನಲ್ಲಿ ವಿಜೃಂಭಣೆಯ ದೇವತಾರ್ಚನೆ, ಯಾಗ, ಯಜ್ಞ, ಮಂತ್ರಿ ಮತ್ತು ಅಧಿಕಾರಿಗಳ ಕಛೇರಿ ಪ್ರಾರಂಭ, ಪೂಜೆ ಇತ್ಯಾದಿ ಮೂಢ ಧರ್ಮಾಭಿಚರಣೆಗಳೂ ವ್ಯಾಪಕವಾಗಿ ಹಬ್ಬಿಕೊಂಡಿವೆ. ಇದಕ್ಕಾಗಿ ಸರಕಾರದ ಮತ್ತು ಸಾರ್ವಜನಿಕ ಹಣ ಸೊತ್ತುಗಳನ್ನು ಪೋಲು ಮಾಡುವುದು ರೂಢಿಯಾಗಿದೆ.

ಧರ್ಮನಿರಪೇಕ್ಷತೆಯನ್ನು ಸಂವಿಧಾನದ ಮುಂಬಾಗಿಲಿನಲ್ಲಿ ಸ್ವಾಗತಿಸಿ, ಹಿಂಬಾಗಿಲಿನಲ್ಲಿ ತ್ಯಜಿಸಲಾಗಿದೆ.

ಇವೆಲ್ಲ ಭವಿಷ್ಯ ದಿಗಂತದಲ್ಲಿ ಕವಿದು ಗದರಿಸುವ ಕಾರ್ಮೋಡಗಳು. ಕಾರ್ಮೋಡಗಳ ಸೆರೆಯಲ್ಲಿ ಕೋಲ್ಮಿಂಚಿನ ಶುಭ್ರ ಥಳಕನ್ನೂ ನಾವು ಕಾಣಬಹುದು. ಆ ಶುಭ್ರ ಪ್ರಕಾಶವೇ ಭಾರತೀಯ ಶ್ರೀಸಾಮಾನ್ಯನ ಪಾರಂಪರಿಕ ಸಂಸ್ಕೃತಿಯ ಉದಾರ ಮನೋಭಾವ. ಈತ ಧರ್ಮನಿರಪೇಕ್ಷತೆ, ಸಮಾಜ ಸ್ವಾಮ್ಯ, ಸಾಂವಿಧಾನಿಕ ಆಡಳಿತೆ ಇತ್ಯಾದಿ ಪದಗಳ ಅರ್ಥವ್ಯಾಪ್ತಿಯನ್ನು ಶಾಸ್ತ್ರೀಯವಾಗಿ ಅರಿಯದವನು. ರಾಜಕೀಯ ವಿಶ್ಲೇಷಣೆಯನ್ನು ಮಾತಿನಲ್ಲಿ ತಿಳಿಸಲಾರದವನು. ಹಾಗಿರುವುದಾದರೂ ಆ ಪದಗಳ ತಳಹದಿಯ ಧಾರ್ಮಿಕ ಸಮಭಾವ ಹೃದ್ಗೂಡಿಸಿಕೊಂಡ ಹೃದಯ ಸಂಪನ್ನ. ಅಂಥವರು ಭಾರತದ ಉದ್ದಗಲಕ್ಕೂ ಬಾಳುತ್ತಿರುವ ಶೇಕಡಾ ತೊಂಬತ್ತಕ್ಕಿಂತಲೂ ಮೀರಿದ ಬಹುಮಂದಿ. ಅವರೇ ಭಾರತದ ನೆಲದ ಸತ್ತ್ವ. ಅಂಥವರ ಇರುವಿಕೆಯಿಂದಲೇ ರಾಷ್ಟ್ರೀಯ ದುರಂತಗಳು, ಭೌಗೋಳಿಕ ವಿಪ್ಲವ, ನೆರೆ, ಪಿಡುಗು, ಹೊರದೇಶದ ಆಕ್ರಮಣ ಕಾಲಗಳಲ್ಲಿ ಸಮಗ್ರ ಭಾರತ ಒಂದು ಶಕ್ತಿಯಾಗಿ ಸಮಸ್ಯೆಯನ್ನು ಎದುರಿಸಲು ಸೆಟೆದು ನಿಲ್ಲುವುದು ಸಾಧ್ಯವಾಯಿತು. ತಮ್ಮ ದೈನಂದಿನ ವ್ಯವಹಾರಗಳಲ್ಲಿ ಮತ, ಧರ್ಮ, ಜಾತಿಗಳ, ಜನನ ಆಕಸ್ಮಿಕಗಳು ಸೃಷ್ಟಿಸಿರುವ ತಡೆಗೋಡೆಗಳನ್ನು ಅವರು ಗಣಿಸುವುದಿಲ್ಲ. ಮೇಲುನೋಟಕ್ಕೆ ತೋರುವ ಭಿನ್ನತೆ, ಕೀಳು ಮೇಲೆಂಬ ಆತಂಕಪ್ರಜ್ಞೆ– ಈರ್ಷೆ, ವೈಮನಸ್ಸುಗಳ ಕಟ್ಟುಗಳನ್ನು ಮೀರಿ ಜನಸಾಮಾನ್ಯರು ವ್ಯಾಪಾರ ವ್ಯವಹಾರ ನಡೆಯಿಸುತ್ತಾರೆ. ಜನಸಾಮಾನ್ಯರ ಮಾನವಿಕ ಹೃದಯ ಸಂಪತ್ತು ಗಂಗಾ ನದಿಯಂತೆ ಎಂದೂ ಕಲುಷಿತವಾಗಲಾರದ್ದು.

ಭಾರತ ಸರಕಾರವೆಂಬ ಕ್ರಿಯಾಶೀಲ ಅರಾಜಕತೆ ಅಥವಾ ಅವ್ಯವಸ್ಥೆ ಉಳಿದಿರುವುದು ಜನಸಾಮಾನ್ಯರ ಕರ್ತವ್ಯ ಪ್ರಜ್ಞೆಯಿಂದ. ಕಾರ್ಮಿಕರು, ಉದ್ಯೋಗಸ್ಥರು, ಕೃಷಿಕರು, ವೃತ್ತಿ ನಿರತರು (ನಿರಂತರವಾಗಿ ವ್ಯವಸ್ಥೆಯನ್ನು ಶಪಿಸುತ್ತಿರುವುದಾದರೂ) ತಮ್ಮ ಕೆಲಸಗಳನ್ನು ಸಕಾಲದಲ್ಲಿ ಮಾಡುತ್ತಿರುವುದರಿಂದ ನಾವೊಂದು ಜನಾಂಗವಾಗಿ, ದೇಶವಾಗಿ ಉಳಿದಿರುವುದು ಸಾಧ್ಯವಾಗಿದೆ. ಅವರ ಸ್ವಭಾವ ಸಹಜ ಶಾಂತಿಪ್ರಿಯತೆಯನ್ನು ಉದ್ದೀಪನ ಗೊಳಿಸುತ್ತ ಪರಂಪರೆಯ ಧ್ಯೇಯದತ್ತ ಸಾಗುವಂತೆ ಒಂದುಗೂಡಿಸಬೇಕು. ಅಯೋಧ್ಯೆ, ಮಥುರಾ, ವಾರಣಾಸಿ ಇತ್ಯಾದಿ ಮರೆತುಹೋಗಿರುವ ಚಾರಿತ್ರಿಕ ಘಟನೆಗಳ ಅಥವಾ ದೇಶ ವಿಭಜನಾ ಕಾಲದಲ್ಲಾಗಿರಬಹುದಾದ ಮತೀಯ ದಂಗೆಗಳ ವಿಚಾರಗಳಲ್ಲಿ ಜನರನ್ನು ಉದ್ರೇಕಿಸದ ಸಾಂತ್ವನದ ಧೋರಣೆ ಅನುಸರಿಸಬೇಕು. ಸರಕಾರದ ಧೋರಣೆ, ಸಾರ್ವಜನಿಕ ಸಂಸ್ಥೆಗಳ ಕಾರ್ಯಸಂಯೋಜನೆ, ಸಮಾಜ ನಾಯಕರ ಪ್ರಯತ್ನಗಳು ಜನಸಾಮಾನ್ಯರ ಸದ್ಭಾವನಾ ಸಂಪತ್ತನ್ನು ಸಚೇತನಗೊಳಿಸುವ ನಿಟ್ಟಿನಲ್ಲಿ ಮುಂದುವರಿಯಬೇಕು. ಈ ತರದ ಸುದ್ದಿ ಗದ್ದಲವಿರದ ಧರ್ಮನಿರಪೇಕ್ಷ ವೈಚಾರಿಕ ಧೋರಣೆಯನ್ನು ಪ್ರಾಮಾಣಿಕವಾಗಿ ಅನುಷ್ಠಾನಿಸಿದರೆ, ಜಗತ್ತಿನ ಮಹಾರಾಷ್ಟ್ರಗಳ ಸಾಲಿನಲ್ಲಿ ಭಾರತವೂ ಒಂದಾಗಬಹುದು.

ಈ ಸಂದರ್ಭದಲ್ಲಿ ಅಸ್ತಂಗತ ರೋಮ್ ಸಾಮ್ರಾಜ್ಯದ ಚರಿತ್ರಕಾರ ಗಿಬ್ಬನ್‌ನ ಮಾತುಗಳು ಪ್ರಸ್ತುತ: ''ಆಗ ರೋಮ್‌ನಲ್ಲಿ ಪ್ರಚಲಿತವಿರುತ್ತಿದ್ದ ಹಲವು ವಿಧದ ಆರಾಧನಾ ಕ್ರಮಗಳೆಲ್ಲವೂ ಸಮಾನವಾಗಿ ಸತ್ಯವೆಂದು ಪ್ರಜೆಗಳು ನಂಬಿದ್ದರು. ಅವೆಲ್ಲವೂ ಸಮಾನವಾಗಿ ಅಸತ್ಯವೆಂದು ದಾರ್ಶನಿಕರು (ಅಥವಾ ತತ್ವಜ್ಞಾನಿಗಳು) ಕಂಡಿದ್ದರು. ಅವೆಲ್ಲವೂ ಸಮಾನವಾಗಿ ತಮಗೆ ಉಪಯುಕ್ತವೆಂದು ಆಡಳಿತಾಧಿಕಾರಿಗಳು ಸುಮ್ಮಗಿದ್ದರು. ಅಂತೂ, ಧರ್ಮಸಹಿಷ್ಣುತೆಯು ಪರಸ್ಪರ ಸಹಕಾರ ಮಾತ್ರವಲ್ಲದೆ, ಧಾರ್ಮಿಕ ಸಹ ಭಾವನೆ ಮತ್ತು ಸಮ್ಮಿಲನವನ್ನೂ ನಿರ್ಮಿಸಿತ್ತು.'' ಈ ಕಾರಣಕ್ಕಾಗಿ ಧರ್ಮನಿರಪೇಕ್ಷತೆಯ ಇನ್ನೊಂದು ಮುಖವಾಗಿರುವ ಧರ್ಮಸಹಿಷ್ಣುತೆಯನ್ನು ಬೆಳೆಯಿಸಿಕೊಳ್ಳುವುದು ನಮಗೆ ಕೇವಲ ಅನಿವಾರ್ಯ ಮಾತ್ರವಲ್ಲ ನಮ್ಮ ಉಳಿವಿಗೆ ಅಗತ್ಯ ಕೂಡ.

ಎ. ಪಿ. ಗೌರೀಶಂಕರ
ಅಡ್ವೊಕೇಟ್, ಇಬ್ರೋಸ್ ಕಮರ್ಷಿಯಲ್ ಕಾಂಪ್ಲೆಕ್ಸ್,
ಕೊಡಿಯಾಲಬೈಲು, ಮಂಗಳೂರು - ೫೭೫ ೦೦೩

# ಚಿಟ್ಟೆ ಹಿಡಿಯುವ ಹುಡುಗಿ

ಹೀಗೊಮ್ಮೆ
ಹಾದಿಯಲಿ ಹೋಗುವಾಗ

ಕೊರಳಿಗೆ ಜೋತು
ಬಿದ್ದ ಕಂಕುಳ ಕೂಸು
ತಲೆಯ ಮೇಲೆ ಅಗಲ ಬಾಯ
ಎರಡು ಮಡಕೆ
ಕೂಸೂ, ಮಡಕೆ
ಎರಡೂ ಬೀಳುವ ಗೋಜಿಲ್ಲ
ಬಿದ್ದೀತೆಂಬ ಮುಲಾಜಿಲ್ಲ
ದಾಪುಗಾಲು ನಡಿಗೆ
ಬೀಸು ಬೀಸು

ಮಾಸಿದ ಸೀರೆ ಜಡೆಗಟ್ಟಿದ ಕೂದಲು
ಹಳೇ ಬಳೆಗಳೆರಡು
ಕರೀದಾರ ಬರೀಪಾದ
ಕಂಗಳಲ್ಲಿ ಅರಿವಿಗೇ ಬಾರದ ವಿಷಾದ
ಗುರಿ ಇರದ ಹಾದಿ
ಸರಿ ಇರದ ಬೀದಿ
ನಡಿಗೆ ಮಾತ್ರ ನೋಡುವವರಿಗೆ ಸರಾಗ
ಮುನ್ನಡೆದಿದ್ದಳು ಅವ್ವಾ !

ಹಿಂದೆ ಅವ್ವನದೇ ಎಲ್ಲಡಿಟೋ
ಆದರೆ ಹೆಜ್ಜೆ ಪುಟು ಪುಟು
ಗುರಿಯಿರದ ಹಾದಿ ಸರಿ ಇರದ ಬೀದಿ
ಎರಡೂ ಬಿಟ್ಟು ಇಳಿದಿದ್ದಳು ಏಳು ಎಂಟರ ಹುಡುಗಿ



ಪಾರ್ಥೇನಿಯಂನ ಫುಟ್‌ಪಾತ್ ಪಾರ್ಕಿಗೆ
ನೀರಿಲ್ಲದೆಯೂ ತಲೆಯೆತ್ತಿ ನಿಲ್ಲುವ
ಕಳೆಗಳ ಲೋಕಕ್ಕೆ ಕಾಡು ಹೂಗಳು
ಅರಳಿದ್ದ ಅವಳದೇ ರೀತಿಯ ಸ್ವರ್ಗಕ್ಕೆ

ಸ್ವರ್ಗದಾಚೆಯ ಲೋಕಕ್ಕೂ ಆಚೆಗೆ
ಕೈಚಾಚಿದ್ದಳು ಎತ್ತರಕ್ಕೆ

ಅಲ್ಲಿ ;
ಬಣ್ಣ ಬಣ್ಣಗಳ ತನ್ನೊಡಲಲ್ಲಿ
ಇಟ್ಟುಕೊಂಡ ಚಿಟ್ಟೆ ಮುಂದೆ ಮುಂದೆ
ಬಣ್ಣಬಣ್ಣಗಳ ಕನಸುಗಳ ತನ್ನೊಳಗೆ
ಮುತ್ತಿಸಿಕೊಂಡ ಹುಡುಗಿ ಹಿಂದೆ ಹಿಂದೆ

ಚಿಟ್ಟೆಯ ಹಿಡಿಯಲು ನೋಡುತ್ತಾಳೆ
ಓಡುತ್ತಾಳೆ ಅದರ ನಡುವೆಯೂ
ಅವ್ವನ ಒಡಲ ಬಳಿ ಪ್ಲಾಸ್ಟಿಕ್ಕಿನಲ್ಲಿ
ಕಟ್ಟಿಕೊಂಡ ಹಳಸಲನ್ನದ ವಾಸನೆ
ದೂರಾಗದಂತೆ ಜತನ ವಹಿಸುತ್ತಾಳೆ

ಚಿಟ್ಟೆ ಹಿಡಿಯುವ ಹುಡುಗಿ
ನಿನಗೆ ಚಿಟ್ಟೆ ಸಿಕ್ಕೀತೇನೆ ?
ಚಿಟ್ಟೆಯೊಡಲ ಸೊಗಸು
ನಿಮ್ಮವ್ವನ ಒಡಲ ಬಳಿ
ಕಟ್ಟಿಕ್ಕಿದ ಹಳಸಲನ್ನಕ್ಕೂ
ಬರುವುದೇನೆ ?
ನಿನ್ನ ಕಣ್ಣಂಚಿನ ಕನಸುಗಳು ನನಸಾದಾವೇನೆ ?

ನನಗದೇ ಕಾತುರ
ನನಗದೇ ಆತುರ.

ಎಂ. ಎಸ್. ವೇದಾ
ಯು-೧೯, ಸಿ ಎಚ್-೧೯, ಪಿ. ಪಿ. ವಸತಿಗೃಹಗಳು, ಪಂಪಾಪತಿ
ರಸ್ತೆ, ಸರಸ್ವತೀಪುರಂ, ಮೈಸೂರು-೯

# ಚರಿತ್ರೆಯ ಪುನರ್ ನಿರ್ಮಾಣದಲ್ಲಿ ಸ್ಥಳನಾಮಗಳ ಮಹತ್ವ

**ಡಾ॥ ವಿಶ್ವನಾಥ**

**ಈ** ಪ್ರಪಂಚ ಎನ್ನುವ ಪದವೇ ಪಂಚಭೂತಗಳಾದ ನೀರು, ಗಾಳಿ, ಬೆಳಕು, ಭೂಮಿ, ಆಕಾಶಗಳಿಂದ ಆವರಿಸಲ್ಪಟ್ಟಿರುವುದು. ಇಂತಹ ಪ್ರಾಕೃತಿಕ ಸಂಪತ್ತನ್ನು ಅನುಭವಿಸಲು ಲಕ್ಷಾಂತರ ಜೀವಿಗಳು ಸೃಷ್ಟಿಯಾಗಿವೆ. ಅವುಗಳನ್ನೇ ಜೀವಜಂತುಗಳು, ಸಸ್ತನಿಗಳು, ಮೃಗ-ಪಕ್ಷಿಗಳು, ನರ - ವಾನರರೆಂದು ಕರೆಯುವುದು. ಒಂದೊಂದು ಜೀವಿಯೂ ಒಂದೊಂದು ತೆರನಾದ ವಾಸ್ತವ್ಯವನ್ನು ಕಂಡುಕೊಳ್ಳುತ್ತದೆ. ಮೀನು ನೀರಿನಲ್ಲಿಯೂ, ಕಪ್ಪೆ - ಕೆರೆ, ಬಾವಿ, ಕಲ್ಲಿನ ಪೊಟರೆಯಲ್ಲಿಯೂ, ಹಕ್ಕಿ-ಪಕ್ಷಿಗಳು ತಾವೇ ರಚಿಸಿಕೊಂಡ ಗೂಡಿನಲ್ಲಿಯೂ, ಕೀಟಾದಿಗಳು ಅವುಗಳ ಸಾಮರ್ಥ್ಯಕ್ಕೆ ಅನುಗುಣವಾಗಿ ಸಸ್ಯಸಂಪತ್ತಿನ ಸಂಕುಲಗಳನ್ನಾಶ್ರಯಿಸಿ ಜೀವಿಸುವುದು ಋತು-ಚಕ್ರಕ್ಕನುಗುಣವಾಗಿ ನಡೆದೇ ಇದೆ. ಇಂತಹ ಪರಿಸರದಲ್ಲಿ ಬುದ್ಧಿಪ್ರಧಾನತೆಯಿಂದ ಮಾನವನ ಬದುಕು ಬಹು ಎತ್ತರದಲ್ಲಿ ನಿಲ್ಲುತ್ತದೆ. ಆ ಬದುಕಿಗೆ ಬಹು ವಿಸ್ತಾರವಾದ ಸಂಸ್ಕೃತಿ, ಚರಿತ್ರೆ, ಪರಂಪರೆಗಳೂ ಜೀವನದುದ್ದಕ್ಕೂ ಪ್ರವಹಿಸುವ ನದಿಯಂತೆ ಹರಿದುಬರುತ್ತಲೇ ಇರುತ್ತವೆ.

ಪ್ರಾಕೃತಿಕ ಪರಿಸರದ ಒಡನಾಟದಲ್ಲಿ ಮಾನವನ ಬದುಕು ಸಾಗುತ್ತಿರುವುದರಿಂದಲೇ ಅದನ್ನು ಮಾನವ ಜಗತ್ತು ಎಂದು ಕರೆಯಬಹುದು. ಆ ಜಗತ್ತಿನಲ್ಲಿ ಮಾನವನ ಹುಟ್ಟಿನೊಂದಿಗೆ ಸ್ಥಳನಾಮ, ಹೆಸರುಗಳು, ಮನೆ-ಮಠ, ಗುಡಿ-ಗೋಪುರಗಳು ಹುಟ್ಟಿದವು. ಇದಕ್ಕೆ ಪೂರ್ವದಲ್ಲಿ ಮಾನವನ ನೆಲೆ ಮರದ ಪೊಟರೆ ಮತ್ತು ಕಲ್ಲು ಗುಹೆಗಳಲ್ಲಿ ನಡೆಯುತ್ತಿದ್ದಿತು. ಗೆಡ್ಡೆ ಗೆಣಸು-ಹಸಿಮಾಂಸವನ್ನು ತಿನ್ನುವ ಕಾಲ ಮುಗಿದುಹೋಗಿ, ಕೃಷಿಯು ಪ್ರಾರಂಭವಾದ ಮೇಲೆ ಕೆರೆ, ಹೊಳೆ, ನದಿ, ಕಾಲುವೆ, ಗುಡ್ಡ, ದಿಬ್ಬ, ಬಯಲು, ಭೂಫಲವತ್ತತೆ ಎಲ್ಲಿದೆ, ಅಲ್ಲಲ್ಲಿ, ನೆಲೆಯನ್ನು ಕಂಡುಕೊಂಡು ಅವುಗಳೇ ಕಾಲ ಸರಿದಂತೆ ಹಟ್ಟಿ, ಊರು, ಹಳ್ಳಿ, ಗ್ರಾಮ, ಪುರ, ಅಗ್ರಹಾರ, ನಾಡು, ರಾಷ್ಟ್ರ, ಬೀಡು, ಮಂಡಲಗಳಾಗಿ ಅಸ್ತಿತ್ವಕ್ಕೆ ಬಂದವು.

ಸ್ಥಳನಾಮಗಳ ಹುಟ್ಟಿಗೆ ಮಾನವನ ಆಹಾರ ಸಂಚಯ ಕಾಲವೇ ಪ್ರಮುಖ ಕಾರಣವಾಯಿತು. ಒಂದೆಡೆ ಫಲವತ್ತಾದ ಭೂಮಿ ಕೃಷಿಗೆ ಒತ್ತಾದರೆ, ನದಿ ತಟಗಳು ನೀರಿನಾಶ್ರಯವನ್ನು ಅವಲಂಬಿಸಿದ್ದುವೇ ಆಗಿದ್ದವು. ಕಾಲ ಗತಿಸಿದಂತೆ ಗ್ರಾಮ ರಚನೆ ಜೀವನಕ್ಕೆ ಪ್ರಯೋಜನಕಾರಿಯೆಂದು ಮನವರಿಕೆಯಾಗುವಲ್ಲಿ ಉದ್ದೇಶಪೂರ್ವಕವಾಗಿ ಜನರು ಸ್ಥಳಗಳಿಗೆ ಹೆಸರು ಕೊಟ್ಟುಕೊಳ್ಳುವುದರ ಮೂಲಕ, ಪ್ರಕೃತಿ ಮತ್ತು ಸಂಸ್ಕೃತಿಯ ಹೆಸರುಗಳನ್ನಿಟ್ಟುಕೊಂಡು, ಹಾಗೇ ಇಟ್ಟ ಹೆಸರಿನಿಂದ ಒಂದೊಂದು ಸ್ಥಳದ ಊರು, ಗ್ರಾಮ, ಹಳ್ಳಿ, ಪುರ ಇತ್ಯಾದಿಗಳನ್ನು ಕರೆಯುವ ಪದ್ಧತಿ ರೂಢಿಗೆ ಬಂದಿತು. ಉದಾಹರಣೆಗೆ ಗುಡ್ಡದ ಹಳ್ಳಿ, ಕೆರೆಯೂರು, ಹೊಳಿಗ್ರಾಮ, ನದಿಹಳ್ಳಿ, ಹೊಳೆನರಸೀಪುರ, ಇತ್ಯಾದಿ.

ಯಾವುದೇ ಸ್ಥಳನಾಮ ಊರುಗಳಲ್ಲಿ ವಾಸಿಸುವ ಜನರ ಜೀವನಾಧಾರಕ್ಕೆ ವ್ಯವಸಾಯವೇ ಮುಖ್ಯ ವೃತ್ತಿಯಾಗಿರುತ್ತದೆ. ಅದಕ್ಕೆ ಪೂರಕವಾಗಿ ಗ್ರಾಮಗಳ ರಚನೆಯಿರುತ್ತದೆ. ಇವುಗಳು ಎತ್ತರ ಭೂಭಾಗದ ಸಮತಟ್ಟಿನ ಪ್ರದೇಶದಲ್ಲಿ ಕಂಡುಬರುವುದುಂಟು. ಇದು ಅವರವರ ಕೃಷಿಗೆ ಅನುಕೂಲವಾಗುವಂತೆ ಇರುತ್ತದೆ. ಕೃಷಿಯು ಬಹುಪಾಲು ಮಳೆ ನೀರನ್ನೇ ಅವಲಂಬಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಕೆರೆ-ಕುಂಟೆಗಳು ನಿರ್ಮಾಣವಾದವು. ಆದ್ದರಿಂದಲೇ ಸ್ಥಳನಾಮಗಳ ಹುಟ್ಟು ನಿನ್ನೆ-ಮೊನ್ನೆಯದಲ್ಲ; ಪುರಾತನ ಕಾಲದ ಜೀವಸೃಷ್ಟಿಯೊಂದಿಗೆ ಬೆಳೆದುಬಂದದ್ದು; ಪ್ರಾಕೃತಿಕ ಗರ್ಭದಿಂದ ಸೀಳಿ ಬಂದದ್ದು. ಹಾಗೇ ರೂಪುಗೊಂಡ ಸ್ಥಳನಾಮಗಳು ಕಾಲಕಳೆದಂತೆ ಗ್ರಾಮಗಳಾಗಿ, ಅಗ್ರಹಾರಗಳಾಗಿ, ನಗರಪಟ್ಟಣಗಳಾಗಿ ಪರಿವರ್ತನೆಗೊಂಡವು. ಅದಕ್ಕೆ ಕಾರಣ ವಿಜ್ಞಾನದ ಮುನ್ನಡೆ. ಹಾಗೆಯೇ ಚರಿತ್ರೆಯ ಪುಟಗಳಲ್ಲಿ ಒಂದೊಂದು ಗ್ರಾಮನಾಮವು ದಾಖಲಾದುದು. ಒಂದೊಂದಕ್ಕೂ ಒಂದೊಂದು ಚರಿತ್ರೆ, ಇತಿಹಾಸ, ಸಂಸ್ಕೃತಿ, ಭಾಷೆ , ನಾಗರಿಕತೆ, ಸಾಹಿತ್ಯ, ಪರಿಸರ, ಧರ್ಮ, ಕಸುಬು, ವೃತ್ತಿ, ವಿದ್ಯಾಭ್ಯಾಸ ಇತ್ಯಾದಿ ವಿವರಗಳು ಚಾರಿತ್ರಿಕ ಹಿನ್ನೆಲೆಯಿಂದಲೇ ದೊರೆಯುವುದುಂಟು.

ಪುರಾತನ ಸ್ಥಳನಾಮಗಳು ಬಹುಪಾಲು ಅರ್ವಾಚೀನ ಸ್ಥಳನಾಮಗಳಿಗಿಂತ ಭಿನ್ನವಾಗಿರುತ್ತವೆ ಮತ್ತು ಅರ್ಥ ಸಂಪತ್ತಿನಿಂದ ತುಂಬಿವೆ. ಒಂದು ದೇಶದ ಒಂದು ಸ್ಥಳದ ಅಥವಾ ಪ್ರದೇಶದ ಪರ್ವತ, ಶಿಖರ, ನದಿ, ಕಲ್ಲು, ಗುಡ್ಡ, ರಾಜ್ಯ, ನಾಯಕ, ಪ್ರಭು, ಮಣ್ಣು, ಮರ, ಕೋಟೆ, ದೇವಾಲಯ, ಅಗ್ರಹಾರ, ನಗರ, ಅರವಟ್ಟಿಗೆಗಳು, ಪುಣ್ಯಕ್ಷೇತ್ರಗಳು ಇನ್ನೂ ಮುಂತಾದ ಸ್ಥಳ ಅಥವಾ ಭೌಗೋಳಿಕ ಪ್ರದೇಶದ ಚರಿತ್ರೆಯನ್ನು ಬಿಚ್ಚಿಡಲು ಅನೇಕ ಪ್ರಕಾರವಾದ ಮಾಹಿತಿಯನ್ನು ಒದಗಿಸುತ್ತವೆ. ಅವುಗಳು ನಮ್ಮ ಪೂರ್ವಾರ್ಜಿತ ನೆಲೆಗಳ ಕೃಷಿ, ಹೈನುಗಾರಿಕೆ, ಸಂಪ್ರದಾಯ, ಹಬ್ಬಹರಿದಿನಗಳು, ಲೋಕರೂಢಿ, ಪದ್ಧತಿಗಳು, ವೈವಾಹಿಕ ವಿಧಾನ, ಗ್ರಾಮಗಳ ಹಬ್ಬ, ಜಾತ್ರೆಗಳು-ಉತ್ಸವಗಳು, ಉಡುಗೆ-ತೊಡುಗೆಗಳು, ಊಟೋಪಚಾರಗಳು, ಸೌಂದರ್ಯ ಜ್ಞಾನ, ಧಾರ್ಮಿಕ ಪರಂಪರೆ, ಸಾಹಿತ್ಯ, ಮೂಢನಂಬಿಕೆ, ರಾಜ್ಯಸಂಸ್ಥಾಪನೆಯ ಆಳರಸರ ಇತಿಹಾಸ, ಪಾಳೆಗಾರರ ಆಡಳಿತ ಶೈಲಿ, ಗ್ರಾಮಾಡಳಿತದ ವೈಖರಿ, ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಜನಜೀವನದ ಐತಿಹಾಸಿಕ ವಿವರಗಳನ್ನು ತಿಳಿಸುವ ಜ್ಞಾನಕೋಶಗಳೆಂದರೆ ಉತ್ಪ್ರೇಕ್ಷೆಯಾಗಲಾರದು. ಅಲ್ಲದೇ ನೈಸರ್ಗಿಕ ಸಂಪತ್ತಿನ ಉಪಯೋಗ, ಭಾಷಾ ಚರಿತ್ರೆ, ಮಾನವ ಶಾಸ್ತ್ರ ಸಮಾಜ ಶಾಸ್ತ್ರ, ಜೀವವಿಜ್ಞಾನ, ಸಸ್ಯಶಾಸ್ತ್ರ, ಜೈವಿಕ ವಿಜ್ಞಾನ, ರಸಾಯನಶಾಸ್ತ್ರ, ಭೌತವಿಜ್ಞಾನ, ಸಸ್ಯಶಾಸ್ತ್ರ, ಕಾನೂನು ಶಾಸ್ತ್ರ, ಅಪರಾಧಶಾಸ್ತ್ರ, ಕೈಗಾರಿಕೆ, ಶಾಸನಶಾಸ್ತ್ರ, ಛಂದಸ್ಸು, ಜಾನಪದ ಇನ್ನೂ ಮುಂತಾದ ಅನುಲ್ಲೇಖಿತ ವಿಷಯಗಳು ದಾಖಲಾಗಿರುವುದು ಸ್ಥಳನಾಮಗಳಲ್ಲಿಯೆ.

ಚರಿತ್ರೆಯ ವಿವರಗಳನ್ನು ತಿಳಿಸುವುದರಲ್ಲಿ ಸ್ಥಳನಾಮಗಳು ಬಹು ಸಹಕಾರಿಯಾಗಿವೆ. ಕ್ರಿ. ಶ. ೧೪೧೧ರಲ್ಲಿ ವಿಜಯನಗರ ಪ್ರೌಢಪ್ರತಾಪ ದೇವರಾಯನ ಕಾಲದಲ್ಲಿ ರಚಿತವಾದ ಹಂಪೆಯ ಶಾಸನದಲ್ಲಿ ಬರುವ ಪದ್ಯವೊಂದು ಮಾನವನ ಉದಾತ್ತ ಸಂಸ್ಕೃತಿಯ ಸಾಮಾಜಿಕ ಹಿನ್ನೆಲೆಯನ್ನು ಅರ್ಥವತ್ತಾಗಿ ತಿಳಿಸಿದೆ. ಪ್ರೌಢ ಪ್ರತಾಪದೇವರಾಯನ ಮಂತ್ರಿ ಲಕ್ಷ್ಮೀಧರಾಮಾತ್ಯನು ಮಹಾಗಣಪತಿಯನ್ನು ಸ್ಥಾಪಿಸಿ ಅದಕ್ಕೆ ದತ್ತಿಗಳನ್ನು ಬಿಟ್ಟ ಸಂಗತಿ ಈ ಶಾಸನದಲ್ಲಿ ತಿಳಿದುಬರುತ್ತದೆ. ಲಕ್ಷ್ಮೀಧರನು ಮಗುವಾಗಿದ್ದಾಗ, ಅವನ ತಾಯಿ ಹಾಲೆರೆಯುತ್ತಾ ಅದರೊಂದಿಗೆ ಉದಾತ್ತ ವಿಚಾರದ ಸಂಸ್ಕೃತಿಯನ್ನು ರಕ್ತಗತವಾಗುವಂತೆ ಎರೆದಳೆಂಬುದನ್ನು ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ : ಸಂಪುಟ ನಾಲ್ಕು : ಸಂಖ್ಯೆ ೨೬೭ರಲ್ಲಿ ಹೇಳಿದೆ.

*ಕೆರೆಯಂ ಕಟ್ಟಿಸು, ಬಾವಿಯಂ ಸವಸು*
*ದೇವಾಗಾರಮಂ ಮಾಡಿಸ*
*ಜ್ಜೆರೆಯೊಳ್ ಸಿಲ್ಕಿದನಾಥರಂ ಬಿಡಿಸು,*
*ಮಿತ್ರರ್ಗಿಂಬುಕೆಯ್ ನಂಬಿದ*
*ರ್ಗೆರವಟ್ಟಾಗಿರು, ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ*
*ಪಿಂದೆ ತಾ*
*ಯೆರದಳ್ಪಾಲೆರೆವಂದುತೊಟ್ಟು ಕಿವಿಯೊಳ್*
*ಲಕ್ಷ್ಮೀಧರಾಮಾತ್ಯನಾ.*

– ಕೆರೆಯನ್ನು ಕಟ್ಟಿಸು, ಬಾವಿಯನ್ನು ತೋಡಿಸು, ದೇವಾಲಯಗಳನ್ನು ನಿರ್ಮಿಸು, ಬಂಧನಕ್ಕೆ ಸಿಕ್ಕ ಅನಾಥರನ್ನು ಬಿಡಿಸು, ಸ್ನೇಹಿತರಿಗೆ ಸಹಾಯಕನಾಗು, ನಂಬಿದವರಿಗೆ ಆಶ್ರಯದಾತನಾಗು, ಸತ್ಪುರುಷರನ್ನು ರಕ್ಷಿಸು–

**ಬ್ರಾಹ್ಮಣರ ವಾಸ್ತವ್ಯಗಳು ಅಗ್ರಹಾರಗಳಾದರೆ, ಕ್ಷತ್ರಿಯರದು ನಾಡುಗಳು, ಮಂಡಲಗಳು, ಹಾಗೆಯೇ ವೈಶ್ಯರದು ನಗರ, ಪತ್ತನಗಳಾದರೆ, ಶೂದ್ರರದು ಕೇರಿ ಅಥವಾ ತಾಂಡಗಳು ನಿರ್ಮಾಣವಾದ ಚರಿತ್ರೆಯನ್ನು ಸ್ಥಳನಾಮಗಳು ಹೇಳುತ್ತವೆ.**

ಎಂದು ಹಾಲುಣಿಸಿದ ಚಿತ್ರಣ ನಮ್ಮ ಕಣ್ಣುಂದೆ ಕಾಣುತ್ತದೆ. ಇದು ಕೂಡಾ ಗ್ರಾಮ ಜೀವನದ ಸರ್ವರಿಗೆ ಲೋಕೋಪಕಾರವೆಸಗುವ ಕಾರ್ಯವೇ ಆಗಿದೆ. ಈ ಹಿನ್ನೆಲೆಯಲ್ಲಿ ಸ್ಥಳನಾಮಗಳನ್ನು ಪರಿಶೀಲಿಸಿದಾಗ ಕೆರೆ-ಕಟ್ಟೆ, ಕಲ್ಲು-ಬಾವಿ, ಕುಂಟೆಗಳ ನಿರ್ಮಾಣದ ಉದ್ದೇಶ ತಿಳಿದುಬರುವುದು.

ಅನೇಕ ಸ್ಥಳನಾಮಗಳಲ್ಲಿ ಶಾಸನಗಳನ್ನು ರಚಿಸಿ ಬಿಟ್ಟು ಹೋದ ರಾಜಮಹಾರಾಜರ ಚರಿತ್ರೆಗಳು ತಿಳಿದುಬರುತ್ತವೆ. ಅವು ದಾನ, ಧರ್ಮ, ವಿದ್ಯಾಭ್ಯಾಸ ಮತ್ತು ವೀರತ್ವವನ್ನು ಪ್ರದರ್ಶ ಮಾಡುವಂತಹುಗಳೇ ಆಗಿವೆ. ಸೊರಟೂರು ಎಂಬ ಸ್ಥಳನಾಮವೊಂದರ ಶಾಸನದಲ್ಲಿ ತಿಳಿದುಬರುವಂತೆ "ದಾನದೊಳನ್ನದಾನಮೆ ಸಾರಂ" ಎನ್ನುತ್ತದೆ. ಇದು ಅನ್ನದಾನಕ್ಕಾಗಿ ಭೂಮಿಯನ್ನು ದಾನಕೊಟ್ಟ ಜಕ್ಕಿಯಬ್ಬೆಯ ಆದರ್ಶವನ್ನು ವರ್ಣಿಸುವ ಶಾಸನವಾಗಿದೆ. ಕನ್ನಡದ ಸ್ಥಳನಾಮಗಳ ಮಟ್ಟಿಗೆ ಹೇಳುವುದಾದರೆ ಪ್ರಮುಖವಾದ ನಾಲ್ಕು ಸಾಮಾಜಿಕ ವರ್ಗಗಳು ತಿಳಿದುಬಂದವು. ಅದನ್ನೇ ವರ್ಣವ್ಯವಸ್ಥೆ ಎಂದು ಕರೆಯುವುದು. ಬ್ರಾಹ್ಮಣರು ವೇದಾಧ್ಯಯನ, ಪೂಜೆ-ಪುನಸ್ಕಾರದಲ್ಲಿದ್ದು, ವಿದ್ಯಾಭ್ಯಾಸದಲ್ಲಿ ಮೊದಲ ಸ್ತರದಲ್ಲಿದ್ದರು. ಅವರ ವಿದ್ವತ್ತಿಗೆ ರಾಜಮಹಾರಾಜರು ಭೂಮಿ ಮತ್ತು ಅಗ್ರಹಾರಗಳನ್ನು ದಾನವಾಗಿ ನೀಡುತ್ತಿದ್ದದ್ದು ಉಂಟು. ಕ್ಷತ್ರಿಯರು ದೇಶ ರಕ್ಷಣೆ ಮತ್ತು ಪ್ರಭುತ್ವ ಸ್ಥಾಪನೆಯಲ್ಲಿ ತೊಡಗಿದ್ದರು. ಅದನ್ನು ಒಂದೊಂದು ರಾಜಪ್ರಭುತ್ವ ಎಂದು ಕರೆಯಬಹುದು. ಇವರು ತಮ್ಮ ಆಳ್ವಿಕೆಯನ್ನು ತಮ್ಮ ಶಕ್ತಿಗನುಸಾರವಾಗಿ ವಿಸ್ತರಿಸುತ್ತಿದ್ದರು. ಮೂರನೇ ಸ್ಥಾನದ ವೈಶ್ಯರು ವ್ಯಾಪಾರ-ವ್ಯವಹಾರದಲ್ಲಿ ನಿಪುಣರಾಗಿ, ಹಣ ಗಳಿಕೆಯಲ್ಲಿ ತೊಡಗಿದ್ದರು. ನಾಲ್ಕನೆಯದಾಗಿ, ಶೂದ್ರರು ಈ ಮೇಲಿನ ಮೂರು ವರ್ಗದವರ ಸೇವೆ ಮಾಡಿಕೊಂಡು ಬದುಕುತ್ತಿದ್ದರು. ಇಂಥವರು ವಾಸಿಸುವಂತಹ ಕೇರಿಗಳಿಗೆ ತಾಂಡ, ಹಟ್ಟಿಗಳೆಂದು ಕರೆಯುತ್ತಾರೆ. ಹಾಗೆ ಕರೆಯುವ ಹೆಸರುಗಳೇ ಸ್ಥಳನಾಮಗಳು.

ಬ್ರಾಹ್ಮಣರ ವಾಸ್ತವ್ಯಗಳು ಅಗ್ರಹಾರಗಳಾದರೆ, ಕ್ಷತ್ರಿಯರದು ನಾಡುಗಳು, ಮಂಡಲಗಳು, ಹಾಗೆಯೇ ವೈಶ್ಯರದು ನಗರ, ಪತ್ತನಗಳಾದರೆ, ಶೂದ್ರರದು ಕೇರಿ ಅಥವಾ ತಾಂಡಗಳು ನಿರ್ಮಾಣವಾದ ಚರಿತ್ರೆಯನ್ನು ಸ್ಥಳನಾಮಗಳು ಹೇಳುತ್ತವೆ.

ಚಾರಿತ್ರಿಕ ಬೆಳವಣಿಗೆಯಲ್ಲಿ ಸ್ಥಳನಾಮ ಮಹತ್ವಗಳನ್ನು ಕೆಲವು ಅಂಶಗಳಿಂದ ಕಂಡುಕೊಳ್ಳಬಹುದು.

**೧. ಆರ್ಥಿಕ ಸ್ಥಿತಿಗಳು :** ಬಹುಪಾಲು ಸ್ಥಳನಾಮ ಊರುಗಳ ಜನರ ಬದುಕು ವ್ಯವಸಾಯವೆ. ಆಹಾರ ಪದಾರ್ಥಗಳನ್ನು ಬೆಳೆಸುವುದರ ಜೊತೆಗೆ ಹತ್ತಿ, ಎಣ್ಣೆ, ಬೀಜಗಳನ್ನು ಸಂವೃದ್ಧಿಯಾಗಿ ಬೆಳೆಯುವುದು ತಿಳಿದು ಬರುತ್ತಿತ್ತು. ಇದರಿಂದ, ಹತ್ತಿಯಿಂದ ನೂಲುವವರು, ಎಣ್ಣೆ ಬೀಜದಿಂದ ಎಣ್ಣೆ ತೆಗೆಯುವ ಗಾಣಿಗರ ಕುಟುಂಬಗಳು ಜನ್ಮ ತಳೆಯುತ್ತಿದ್ದವು. ಕೃಷಿಗೆ ಬೇಕಾದ ಉಪಕರಣಗಳನ್ನು ಸಿದ್ಧಪಡಿಸಲು ಬಡಿಗಿ, ಕಮ್ಮಾರರ ವೃತ್ತಿಯ ವ್ಯಕ್ತಿಗಳಿರುತ್ತಿದ್ದರು. ಹಾಗೆ ದವಸಧಾನ್ಯಗಳನ್ನು ತುಂಬಿಡಲು ಬೇಕಾದ ಮೊರ, ಬುಟ್ಟಿ, ಕುಕ್ಕೆ ಹೆಣೆಯುವ ಕೊರಮರು, ಮೇದರು ಕಂಡುಬರುತ್ತಿದ್ದರು. ದೇವಸ್ಥಾನದ ಪೂಜೆಗಾಗಿ ಜೋಯಿಸರು, ಬಟ್ಟೆ ಸ್ವಚ್ಛಮಾಡಲು ಅಗಸರು, ಕ್ಷೌರಿಕರು, ಕುರುಬರು, ಗೋವಳರು, ಬೆಸ್ತರು ಇನ್ನೂ ಮುಂತಾದ ಜನರು ಒಂದೆಡೆ ನೆಲಸುವ ಪರಿಪಾಠವಿದ್ದಿತು. ಕಾಲ ಕ್ರಮೇಣ ಒಂದೊಂದು ವೃತ್ತಿ ಮಾಡುವವರ ಹೆಸರಿನಲ್ಲಿ ಸ್ಥಳನಾಮಗಳು ಜನ್ಮಪಡೆದವು. ಅವುಗಳೇ ಕುರುಬರ ಹಳ್ಳಿ, ಅಗ್ರಹಾರ, ಪುರ, ಅಗಸನಕಟ್ಟೆ, ಕಮ್ಮಾರಗೇರಿ, ಬಡಗಿಮನೆ, ಮೇದರಕೇರಿ, ಬೆಸ್ತರಕೇರಿ, ಹಡಪದಳ್ಳಿ, ಇನ್ನೂ ಇತ್ಯಾದಿಯಾಗಿ ರೂಢಿಗತ ಅಂಕಿತದ ಮುದ್ರೆ ಒತ್ತಿ ಅವುಗಳೇ ಒಂದೊಂದು ಚಿಕ್ಕ ಚಿಕ್ಕ ಹಳ್ಳಿಗಳಾಗಿ ಚರಿತ್ರೆಯ ಹಿನ್ನೆಲೆಯಲ್ಲಿ ಕಂಡುಬಂದವು. ಅವರವರ ವೃತ್ತಿಗಳು ಆರ್ಥಿಕ ಅಂಶಗಳನ್ನೇ ಪ್ರಧಾನವಾಗಿ ಅವಲಂಬಿಸಿದ್ದವು.

**೨. ಸಾಮಾಜಿಕ ಸ್ಥಿತಿ :** ಕಾಲಚಕ್ರ ಉರುಳಿದಂತೆ ಮನೆ - ಮಠಗಳು ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಗೋಚರವಾದವು. ಕನ್ನಡವನ್ನಾಳಿದ ಎಲ್ಲಾ ರಾಜಮನೆತನಗಳು ಮಠಮಾನ್ಯಗಳನ್ನು ಸ್ಥಾಪಿಸಲು ಸಹಕಾರಿಯಾದವು. ದೇವಸ್ಥಾನಗಳು ಮುನಿಗಳ ವಾಸಸ್ಥಾನವಾಗಿದ್ದವಲ್ಲದೇ ದೊಡ್ಡ ದೊಡ್ಡ ವಿದ್ಯಾಕೇಂದ್ರಗಳೂ ಆಗಿದ್ದವು. 'ಮಠ' ಎಂಬ ಪದಕ್ಕೆ ಯತಿಗಳ ವಾಸಸ್ಥಾನವೆಂದರ್ಥ. ಆದರೆ ಸಾಮಾನ್ಯ ಜನರು ವಾಸಿಸುವ ಸ್ಥಳಗಳಿಗೂ ಇಡಲಾದ ಹೆಸರುಗಳನ್ನು ಈ ಮಠಗಳು ಪಡೆದಿವೆ. ಅಮರಕೋಶ ಪು. ೧೧೬ರಲ್ಲಿ ಮಠವೆಂದರೆ ಶಿಷ್ಯರಿರುವ ಸ್ಥಳವೆಂದು ಹೇಳಿದೆ. ಇಂದು ಹಳ್ಳಿಗಳಲ್ಲಿ ಪಾಠಶಾಲೆಗಳನ್ನು ಮಠಗಳೆಂದು ಕರೆಯುವ ಪದ್ಧತಿ ಇದೆ. ಅಂದರೆ ಜ್ಞಾನಾರ್ಜನೆಯ ಸಾಂಸ್ಕೃತಿಕ - ಮಠಗಳು, ವಿದ್ಯಾಭ್ಯಾಸದ ಕೇಂದ್ರಗಳು. ಇವುಗಳನ್ನು ಸ್ಥಳನಾಮಗಳು ಹೀಗೆ ಹೇಳುತ್ತವೆ. ಘಟಿಕಾ, ಅಗ್ರಹಾರ ಮತ್ತು ಬ್ರಹ್ಮಪುರಿಗಳೆಂಬ ವಿದ್ಯಾಸಂಸ್ಥೆಗಳಿದ್ದವು. ಘಟಿಕಾ ಎಂಬುದು ಧಾರ್ಮಿಕ ಶಿಕ್ಷಣ ಕೇಂದ್ರವಾಗಿತ್ತು. ಶ್ರೇಷ್ಠ ವಿದ್ವಾಂಸರು ವಾಸಿಸುವ ಸ್ಥಳಗಳು ಅಗ್ರಹಾರಗಳಾದರೆ, ನಗರ ಅಥವಾ ಪಟ್ಟಣಗಳಲ್ಲಿ ವಾಸಿಸುವ ವಿದ್ವಾಂಸರ ನೆಲೆಗಳನ್ನು ಬ್ರಹ್ಮಪುರಿಗಳೆಂದು ಕರೆಯುತ್ತಿದ್ದರು. ಅಗ್ರಹಾರಗಳು ಹಳ್ಳಿಗಳಾದರೆ ಬ್ರಹ್ಮಪುರಿಗಳು ನಗರಗಳಾಗಿರುತ್ತಿದ್ದವು. ಹಾಗೆಯೇ ಅಗ್ರಹಾರ ಮತ್ತು ಬ್ರಹ್ಮಪುರಿಗಳು ಪಠ್ಯವಿಷಯಗಳ ದೃಷ್ಟಿಯಿಂದಲೂ ವಿದ್ಯಾರ್ಥಿಗಳ ಸಂಖ್ಯೆಯ ದೃಷ್ಟಿಯಿಂದಲೂ ಹೆಚ್ಚು ಮಹತ್ವದ್ದಾಗಿವೆ. ಮತ್ತೆ ಮಠಗಳು, ದೇವಾಲಯಗಳು ವಿದ್ಯಾಭ್ಯಾಸದ ಕೇಂದ್ರಗಳಾಗಿದ್ದವು.

ಅನೇಕ ಸ್ಥಳನಾಮ ಶಾಸನಗಳಲ್ಲಿ ತಿಳಿದಿರುವಂತೆ ಸುಪ್ರಸಿದ್ಧವಾದ ವಿದ್ಯಾಕೇಂದ್ರವೆಂದರೆ ಬೆಳಗಾವಿ ಅಥವಾ ಬಳ್ಳಿಗಾವೆ. ಇಲ್ಲಿ ಮೂರು ಪುರಗಳೂ, ಐದು ಮಠಗಳೂ, ಏಳು ಬ್ರಹ್ಮಪುರಿಗಳೂ ಮತ್ತು ಅನೇಕ ಅಗ್ರಹಾರಗಳೂ ಇದ್ದವೆಂದು **ಏಷ್ಯನ್ ಇಂಡಿಯನ್ ಎಜುಕೇಷನ್** ಎಂಬ ಕೃತಿಯಲ್ಲಿ ಹೇಳಿದೆ. ಹಾಗೆಯೇ ಜೈನ, ಬೌದ್ಧ ದೇವಾಲಯಗಳು, ಬಸ್ತಿ-ವಿಹಾರಗಳು ವಿದ್ಯೆಯನ್ನು ಕಲಿಸುವ ಕೇಂದ್ರಗಳಾಗಿದ್ದವು. ಇದಕ್ಕೆ ಉತ್ತಮ ಉದಾಹರಣೆ ತಾಳಗುಂದ ಶಾಸನ. ಇದು ಕದಂಬರ ಕಾಲದಿಂದಲೂ ಪ್ರಸಿದ್ಧವಾದ ವಿದ್ಯಾಕೇಂದ್ರವಾಗಿದ್ದಿತು. ಅಲ್ಲದೇ ಅಗ್ರಹಾರ ಹೆಸರಿನಲ್ಲಿ ಸುಮಾರು ೧೪೪ ಹಳ್ಳಿಗಳನ್ನು ಒಳಗೊಂಡಿತ್ತು. ಇಂತಹ ಅನೇಕ ಅಗ್ರಹಾರಗಳಿಂದ ಕೂಡಿದ ಬೆಳಗಾವಿ ಪ್ರಭಾವಶಾಲಿಯಾದ ವಿಶ್ವವಿದ್ಯಾನಿಲಯದ ಕೇಂದ್ರವಾಗಿದ್ದಿತು.

ಬಳ್ಳಿಗಾವಿ ಬರಬರುತ್ತಾ ವಿದ್ಯಾಭ್ಯಾಸದ ಜೊತೆಗೆ, ಕಲಾಭ್ಯಾಸದಲ್ಲಿ ಕಲಾಪರಿಣತಿಯಲ್ಲೂ ಪ್ರಮುಖವಾದ ಹೆಸರನ್ನು ಪಡೆದುಕೊಂಡಿದೆ. ಇಲ್ಲಿರುವ ಅನೇಕ ಮಠಗಳಲ್ಲಿ ದಕ್ಷಿಣ ಕೇದಾರೇಶ್ವರ ಮಠ ಎಂದು ಕರೆಯುವ ಕೋಡಿಮಠ ಬಹಳ ಮುಖ್ಯವಾದ ವಿದ್ಯಾಕೇಂದ್ರವಾಗಿತ್ತು. ಮತ್ತೊಂದು ಪ್ರಮುಖವಾದ ವಿದ್ಯಾಕೇಂದ್ರ ಬಿಜಾಪುರ ಜಿಲ್ಲೆಯ ಒಂದು ಚಿಕ್ಕ ಹಳ್ಳಿಯಾಗಿರುವ ಸಾಲೊಟಗಿ. ಹತ್ತು ಹನ್ನೊಂದನೇ ಶತಮಾನದಲ್ಲಿ ಇದೊಂದು ಪ್ರಸಿದ್ಧವಾದ ವಿದ್ಯಾಕೇಂದ್ರವಾಗಿತ್ತು. ಇದೊಂದು ಸಾಂಸ್ಕೃತಿಕ ಅಂಶದ ಚಾರಿತ್ರಿಕ ಸ್ಥಳನಾಮವೇ ಆಗಿದೆ. ಈ ಊರಿನ ಮೊದಲ ಹೆಸರು ಪಾವಟಿಗೆ ಆಗಿದ್ದು ಕಾಲಾನಂತರದಲ್ಲಿ ಸಾಲ್ಲೆಯ ಪಾವಿಟ್ಟಗೆ ಆಗಿ ರೂಪುಗೊಂಡಿದೆ. ಅಲ್ಲಿ ತ್ರೈಪುರುಷ ದೇವಾಲಯಕ್ಕೆ ಸಂಬಂಧಿಸಿದಂತೆ ಒಂದು ದೊಡ್ಡ ಕಟ್ಟಡದಲ್ಲಿ ಶಾಲೆ ನಡೆಯುತ್ತಿತ್ತು. ಇದನ್ನು ಕಟ್ಟಿಸಿದವನು ರಾಷ್ಟ್ರಕೂಟ ದೊರೆ ಮೂರನೇ ಕೃಷ್ಣನ ಆಸ್ಥಾನಮಂತ್ರಿ, ನಾರಾಯಣ ಎಂಬುವನು. ನಾಡಿನ ವಿವಿಧ ಭಾಗಗಳಿಂದ ವಿದ್ಯಾರ್ಥಿಗಳು ಬಂದು ಅಧ್ಯಯನ ಕೈಗೊಳ್ಳುತ್ತಿದ್ದರು. ಈ ಸ್ಥಳನಾಮದ ಊರಿನಲ್ಲಿ ಸುಮಾರು ಇಪ್ಪತ್ತೇಳು ಮನೆಗಳು ಶಾಲಾವಿದ್ಯಾರ್ಥಿಗಳಿಗಾಗಿ ಮೀಸಲಾಗಿದ್ದವೆಂದು ತಿಳಿದಿದೆ.

– ಈ ಮನೆಗಳಿಗೆ ಬೇಕಾದ ದೀಪವ್ಯವಸ್ಥೆಗಾಗಿ ಹನ್ನೆರಡು ನಿವರ್ತನ ಅಂದರೆ ಸುಮಾರು ಅರವತ್ತು ಎಕರೆ ಜಮೀನನ್ನು ಮೀಸಲಾಗಿಟ್ಟಿದ್ದರು. ಅದಲ್ಲದೇ ಎರಡು

## ಪ್ರಶ್ನೋತ್ತರ

ಕರಸೇವಕನ ಕನಸಿನಲಿ ರಾಮ
ಮರ್ಯಾದಾ ಪುರುಷೋತ್ತಮ ಬಂದ :
'ನನ್ನ ಹೆಸರಿನಲಿ ಹಿಂಸೆ ನರಮೇಧ
ನಡೆಸಿದ್ದು ಸರಿಯೆ' ಎಂದು ಗದರಿಸಿದ.

ಕೆಂಗಣ್ಣು ಬಿಟ್ಟು ಕರಸೇವಕನೆಂದ :
'ಶಿಲೆಯೊಳಗಿರು ಮರ್ಯಾದೆಯಿಂದ
ಅಹಿಂಸೆ ಶಾಂತಿ ಪ್ರೀತಿ ಎಂದುಸಿರಿದ
ಗಾಂಧಿಗಾದ ಗತಿಯೇ ನಿನಗೂ' ಎಂದ.

*- ಡಾ|| ರಂಗಾರೆಡ್ಡಿ ಕೋಡಿರಾಂಪುರ*

ಸಾವಿರ ಐದುನೂರು ಎಕರೆಗಳಷ್ಟು ಭೂಮಿ ಶಾಲೆಯದಾಗಿತ್ತು.

ಗುಲ್ಬರ್ಗಾ ಜಿಲ್ಲೆಯ ನಾಗಾವಿ ಒಂದು ಮಹಾ ಅಗ್ರಹಾರವಾಗಿತ್ತೆಂದು ೧೦೫೮ರ ನಾಗಾವಿ ಶಾಸನ ಹೇಳುತ್ತದೆ. ಅಲ್ಲಿಯ ತ್ರೈಪುರುಷ ದೇವಾಲಯವೇ ಶಾಲೆಯನ್ನು ನಡೆಸುತ್ತಿತ್ತು. ಇಲ್ಲಿ ಇನ್ನೂರು ವೇದ ವಿದ್ಯಾರ್ಥಿಗಳು, ಐವತ್ತು ಶಾಸ್ತ್ರ ವಿದ್ಯಾರ್ಥಿಗಳು ಓದುತ್ತಿದ್ದರಂತೆ. ಇಲ್ಲಿ ಸರಸ್ವತೀ ಭಂಡಾರ ಎಂಬ ಒಂದು ಗ್ರಂಥಾಲಯ ಇದ್ದಿತೆಂದು ಶಾಸನದಲ್ಲಿ ಹೇಳಿದೆ. ಹಾಗೆಯೇ ಹಾಸನ ಜಿಲ್ಲೆಯ ಅರಸೀಕೆರೆ ಗ್ರಾಮ ಸರ್ವಜ್ಞಪುರವಾಗಿತ್ತೆಂದು ಕರ್ನಾಟಕ ಸಂಸ್ಕೃತಿ ಸಮೀಕ್ಷೆಯಲ್ಲಿ ಹೇಳಿದೆ. ೧೨ನೇ ಶತಮಾನದಲ್ಲಿ ಕರ್ನಾಟಕದ ಮೇಲಾದ ಧಾರ್ಮಿಕ ಮತ್ತು ಸಾಮಾಜಿಕ ಕ್ರಾಂತಿ ವಿದ್ಯಾಭ್ಯಾಸದ ಮೇಲೂ ತನ್ನ ಪರಿಣಾಮವನ್ನು ಬೀರಿತು. ಚತುರ್ವರ್ಣಗಳನ್ನು ಹುಟ್ಟಿನ ಆಧಾರದ ಮೇಲೆ ನಿರ್ಧರಿಸುವ ಕ್ರಮವನ್ನು ಖಂಡಿಸಿ ಯೋಗ್ಯತೆಯಿಂದ ಜನರನ್ನು ಅಳೆಯಲು ಬಯಸಿದ ಬಸವಾದಿ ಶರಣರು ಧರ್ಮವನ್ನು ಮನೆಮನೆಗೆ ಕೊಂಡೊಯ್ದಂತೆ, ವಿದ್ಯಾಭ್ಯಾಸದ ಅನುಕೂಲವನ್ನು ಎಲ್ಲರಿಗೂ ಕಲ್ಪಿಸಿ ಕೊಟ್ಟರು. ವಿದ್ಯಾಭ್ಯಾಸವನ್ನು ಸಾರ್ವತ್ರಿಕಗೊಳಿಸಿದ ಶರಣರ ಪ್ರಯತ್ನವನ್ನು ಆ ಧರ್ಮದ ಅನುಯಾಯಿಗಳು ಮುಂದುವರೆಸಿಕೊಂಡು ಬಂದರು. ಅದಕ್ಕೆ ನಿದರ್ಶನವಾಗಿ ಸ್ಥಳನಾಮಗಳಲ್ಲಿ ಅದರಲ್ಲೂ, ಹಳ್ಳಿಗಳಲ್ಲಿ ವೀರಶೈವರ ಮಠಗಳು ನಡೆಸುತ್ತಿದ್ದ ಶಾಲೆಗಳು, ಅಯ್ಯನವರ ಶಾಲೆಗಳು ಎಂದು ಪ್ರಸಿದ್ಧವಾಗಿ ವಿದ್ಯಾಪ್ರಸಾರದಲ್ಲಿ, ದಾಸೋಹದಲ್ಲಿ ಮುಖ್ಯಪಾತ್ರ ವಹಿಸುತ್ತಿರುವುದನ್ನು ಕಾಣಬಹುದು. ಉದಾಹರಣೆಗೆ ಶ್ರೀ ಸುತ್ತೂರುಮಠ, ಡಂಬಳಮಠ ಗದಗ, ಚಿತ್ರದುರ್ಗ ಮಠ, ಶ್ರೀ ಸಿದ್ಧಗಂಗಾ ಮಠ, ಸಿರಿಗೆರೆ ಮಠ, ಬಾಳೆಹೊನ್ನೂರು ಮಠಗಳನ್ನು ಇಂದಿಗೂ ಹೆಸರಿಸಬಹುದು.

ಹೀಗೆಯೇ ಬ್ರಹ್ಮಪುರಿಗಳೆಂದರೆ ಹೆಚ್ಚಾಗಿ ನಗರಗಳಿಗೆ ಸೇರಿದ ವಿದ್ಯಾಕೇಂದ್ರಗಳೆಂದು ಹೇಳಲು ಸಾಧ್ಯವಿದೆ. ಅಗ್ರಹಾರಗಳು, ಮಠಮಾನ್ಯಗಳು ಹಳ್ಳಿ, ಗ್ರಾಮ, ಊರೂರುಗಳಲ್ಲಿ ವಿದ್ಯಾಭ್ಯಾಸ ಕ್ರಮಕ್ಕೆ ಅನುಕೂಲ ಮಾಡಿಕೊಡುತ್ತಿದ್ದವು. ಇವುಗಳು ಕದಂಬ, ಗಂಗ, ರಾಷ್ಟ್ರಕೂಟ, ಚಾಲುಕ್ಯ, ರಾಷ್ಟ್ರಕೂಟ ಮತ್ತು ವಿಜಯನಗರ ಅರಸರ ಕಾಲದಲ್ಲಿಯೂ ಸ್ಥಳನಾಮಗಳ ಹೆಸರಿನಲ್ಲಿ ಪುರ, ಗ್ರಾಮ, ಅಗ್ರಹಾರ ಮತ್ತು ಬ್ರಹ್ಮಪುರಿಗಳನ್ನು ಸ್ಥಾಪಿಸಿದ ವಿವರಗಳು ತಿಳಿಯುತ್ತವೆ.

ಬಿಜಾಪುರ ಜಿಲ್ಲೆಯ ಮೇತುಂಗಿ ಎಂಬ ಸ್ಥಳದಲ್ಲಿ ಹೊಯ್ಸಳ ಮಂತ್ರಿ ಕ್ರಿ. ಶ. ೧೨೬೦ ರಲ್ಲಿ ಒಂದು ಮಹಾ ಪಾಠಶಾಲೆಯನ್ನು ಸ್ಥಾಪಿಸಿದ ಬಗ್ಗೆ, ಅಲ್ಲಿ ಸಂಸ್ಕೃತ, ಮರಾಠಿ ಮತ್ತು ಕನ್ನಡಭಾಷೆಗಳ ಅಧ್ಯಯನಕ್ಕೆ ಅವಕಾಶ ಒದಗಿಸಿದನೆಂದು ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಹೇಳುತ್ತದೆ. ಕೊಲಗಳ್ಳಿ, ನೀಲಗುಂದ, ಬಾಗೇವಾಡಿ, ಗದಗು, ಬೇಹಟ್ಟಿ ಮುಂತಾದ ಕಡೆ ವಿದ್ಯಾಭ್ಯಾಸವು ಸ್ವತಂತ್ರವಾಗಿ ನಡೆಯುತ್ತಿತ್ತು.

೩. **ಆಡಳಿತ ಸ್ಥಿತಿಗಳು :** ಯಾವುದೇ ಒಂದು ಸಾಮ್ರಾಜ್ಯದ ಸ್ಥಾಪನೆ, ಆದರ ಅಳಿವು ಉಳಿವುಗಳು ತಿಳಿದು ಬರುವುದು ಸ್ಥಳನಾಮಗಳಿಂದಲೇ. ಸಾಮ್ರಾಜ್ಯ




ವಿಸ್ತಾರವಾದಂತೆಲ್ಲ ರಾಜ್ಯದ ಆಡಳಿತ ಸೌಲಭ್ಯ ಮತ್ತು ಸೌಕರ್ಯಗಳು ಜನತೆಯನ್ನು ಮುಟ್ಟಬೇಕಾದರೆ, ಅನೇಕ ಪ್ರಕಾರದ ಆಡಳಿತ ನಿರ್ವಹಣೆಯ ಮಜಲುಗಳನ್ನು ಸ್ಥಳನಾಮಗಳು ತಿಳಿಸುತ್ತವೆ. ಅವುಗಳೆಂದರೆ ನಾಡು, ವಿಷಯ, ರಾಷ್ಟ್ರ, ಕಂಪಣ, ಗ್ರಾಮ ಇತ್ಯಾದಿ. ಇವುಗಳು ಪ್ರಾಚೀನ ಕರ್ನಾಟಕದ ಗಂಗರು ಮತ್ತು ಕದಂಬರ ಆಳ್ವಿಕೆಯಲ್ಲಿ ಕಂಡುಬರುತ್ತವೆ. ಮುಂದೆ ರಾಷ್ಟ್ರಕೂಟರ ಕಾಲದಲ್ಲಿ ರಾಷ್ಟ್ರಪತಿ, ವಿಷಯಪತಿ, ಗ್ರಾಮಕೂಟ – ಈ ಅಧಿಕಾರಿ ವರ್ಗವನ್ನು ತಿಳಿಸುವುದು ಕಂಡುಬರುತ್ತದೆ. ಆಡಳಿತ ಕ್ರಮದಲ್ಲಿ 'ರಾಷ್ಟ್ರ' ಎಂಬುದೇ ಅತಿದೊಡ್ಡ ವಿಷಯವಾಗಿತ್ತು. ಆದರೆ ರಾಷ್ಟ್ರಕೂಟ ಕಾಲದಲ್ಲಿ ಮಂಡಲ ಎಂಬ ಆಡಳಿತ ವಿಭಾಗ ಕಂಡುಬಂದಿತು. ರಾಷ್ಟ್ರಕೂಟರ ರಾಷ್ಟ್ರ ಎಂಬ ಪದ ಈ ಮಂಡಲಕ್ಕೆ ಸಮಾನ. ಈ ವಿಷಯಗಳನ್ನು ಈಗಿನ ಜಿಲ್ಲೆಗಳಿಗೆ ಹೋಲಿಸಬಹುದು.

ವಿಷಯದ ಅನಂತರ ತಿಳಿದುಬರುವ ವಿಭಾಗಕ್ಕೆ ಭುಕ್ತಿ ಎಂದು ಕರೆಯುತ್ತಿದ್ದರು. ಇಲ್ಲಿ ಆಡಳಿತ ನಡೆಸುವವರನ್ನು ಭೋಗಪತಿ ಅಥವಾ ಭೋಗಿಕ ಎಂದು ಕರೆಯುವ ವಾಡಿಕೆ ಇದ್ದಿತು. ದಂತಿದುರ್ಗನ ಸಮನಗರ ಎಂಬ ಸ್ಥಳನಾಮ ಶಾಸನದಲ್ಲಿ ಐದುನೂರು (ಪಂಚಶತ) ಭುಕ್ತಿಯ ಉಲ್ಲೇಖವಿದೆ. ೧ನೇ ಅಮೋಘವರ್ಷನ ಕೊಣ್ಣನೂರು ಶಾಸನದಲ್ಲಿಯೂ 'ಮಜ್ಜಂತಿಯ ಸಪ್ತಪತಿಗ್ರಾಮ' ಎಂದು ಭುಕ್ತಿಯ ಹೆಸರು ಪಡೆದಿದೆ. ಆದ್ದರಿಂದ ಭುಕ್ತಿ ಎಂದರೆ ನೂರರಿಂದ - ಐದುನೂರು ಹಳ್ಳಿಗಳನ್ನುಳ್ಳ ವಿಭಾಗವೇ ಆಗಿದೆ. ಭುಕ್ತಿಗಳು ಹಳ್ಳಿಗಳ ಸಮೂಹವನ್ನು ಸೂಚಿಸಿ, ಚಿಕ್ಕ ಆಡಳಿತ ಘಟಕವಾಗಿ ತಿಳಿದುಬರುತ್ತವೆ. ಅವು ಇಂದಿನ ಮೂರು ನಾಲ್ಕು ತಾಲ್ಲೂಕಿನ ತಹಸೀಲನ್ನು ಸೇರಿಸಿ ಮೂಡಿರುವ ಉಪವಿಭಾಗಕ್ಕೆ (sub-division) ಹೋಲುತ್ತವೆ. ಕನ್ನಡನಾಡಿನ ಸಂದರ್ಭದಲ್ಲಿ 'ನಾಡುಗಳನ್ನು' 'ಸಾವಿರ' ಎಂಬ ಹೆಸರಿನಲ್ಲಿ ಕರೆಯುತ್ತಿದ್ದದ್ದು ಚಾಲ್ತಿಯಲ್ಲಿತ್ತು. ಮೊದಲು ಸಾವಿರ ಹಳ್ಳಿಗಳನ್ನುಳ್ಳ ದೊಡ್ಡ ವಿಭಾಗ 'ನಾಡು' ಎಂದು ನಿರ್ದೇಶನಗೊಂಡರೆ, ಸಾವಿರ ಎಂಬ ಹೆಸರು ಹಾಗೇ ಉಳಿದುಕೊಂಡು ಬಂದಿರಲಿಕ್ಕೆ ಸಾಕು. ಆದರ ಹಿನ್ನೆಲೆಯಲ್ಲಿ ಬನವಾಸಿ ೧೨,೦೦೦, ಗಂಗವಾಡಿ ೯೬,೦೦೦, ನೊಳಂಬವಾಡಿ ೩೨,೦೦೦ ಎಂದು 'ನಾಡು'ಗಳ ಪ್ರಕಾರಗಳು ತಿಳಿದುಬರುತ್ತದೆ. ಈ ನಾಡು - ಪ್ರದೇಶ, ದೇಶ ಪ್ರಾಂತ ಎಂಬ ಅರ್ಥವನ್ನೇ ಹೇಳುತ್ತದೆ.

ಸ್ಥಳನಾಮಗಳಲ್ಲಿ ರಾಜ್ಯವಿಭಾಗದ ಅತಿ ಚಿಕ್ಕ ಮೂಲ ಘಟಕವೆಂದರೆ ಹಳ್ಳಿ ಅಥವಾ ಗ್ರಾಮ. ಪ್ರತಿಯೊಂದು ಹಳ್ಳಿಯೂ ಒಬ್ಬೊಬ್ಬ ಗ್ರಾಮ ಮುಖಂಡನ ಆಡಳಿತಕ್ಕೊಳಪಟ್ಟಿರುತ್ತಿತ್ತು. ಇವನನ್ನು ಗ್ರಾಮಕೂಟ, ಗಾವುಂಡ ಮುಂತಾದ ಹೆಸರುಗಳಿಂದ ಕರೆಯಲಾಗುತ್ತಿತ್ತು. ಹಳ್ಳಿಗಳ ಉತ್ಪತ್ತಿ, ಹಳ್ಳಿಗಳ ರಕ್ಷಣೆ, ನ್ಯಾಯ ತೀರ್ಮಾನ, ಶಾಂತಿ ಸುವ್ಯವಸ್ಥೆಯ ಏರ್ಪಾಡು - ಇತ್ಯಾದಿಗಳಿಗೆಲ್ಲ ಗಾವುಂಡನೇ ಮುಖ್ಯ ಅಧಿಕಾರಿಯಾಗಿದ್ದನು. ಈತನಿಗೆ ಜಮೀನಿನ ರೂಪದಲ್ಲಿ, ಧಾನ್ಯದ ರೂಪದಲ್ಲಿ ಸರ್ಕಾರ ದಿಂದ ಪ್ರತಿಫಲ ಲಭಿಸುತ್ತಿತ್ತು. ಗೌಡನ ಸಹಾಯಕ್ಕಾಗಿ ಕುಲಕರಣಿ, ಶಾನುಭೋಗ, ಇರುತ್ತಿದ್ದರು. ಇವರ ಹೆಸರಿನಲ್ಲಿ 'ಗ್ರಾಮಮಹತ್ತರ' ಎಂಬ ಸ್ಥಳನಾಮಗಳು ತಿಳಿದು ಬಂದಿವೆ. ಹಳ್ಳಿಗಳಲ್ಲಿ ಉದ್ಭವಿಸುವ ಸಮಸ್ಯೆಗಳನ್ನು ನಿವಾರಿಸಲು 'ಮಹಾ ಜನಗಳೆಂಬ' ಸಂಸ್ಥೆ ಇರುತ್ತಿದ್ದಿತು. ನ್ಯಾಯ ತೀರ್ಮಾನ, ಶಾಂತಿಪಾಲನೆ, ವಿದ್ಯಾಭ್ಯಾಸ, ಆರೋಗ್ಯ, ನೈರ್ಮಲ್ಯ ರಕ್ಷಣೆ ಇತ್ಯಾದಿಗಳು ಇವರ ಹೊಣೆಯಾಗಿದ್ದವು. ಆದರೆ ವಿಜಯನಗರ ಕಾಲದಲ್ಲಿ ಹಳ್ಳಿಯ ಈ ಸಭೆಯನ್ನು 'ಮಹಾಜನ' ಎಂಬುದರ ಜೊತೆಗೆ 'ಊರ್' ಎನ್ನುವ ಹೆಸರಿನಿಂದಲೂ ಕರೆಯುತ್ತಿದ್ದರು. ಇದು ಗ್ರಾಮ ಪಂಚಾಯಿತಿಗಿಂತ ಮಿಗಿಲಾದ ಮತ್ತೊಂದು ಸಭೆ. ಇದನ್ನು ನಾಡು ಎಂದು ಕರೆಯುತ್ತಿದ್ದರು.

ವಿಜಯನಗರದ ಅಳರಸರ ಕಾಲದಲ್ಲಿಯೂ ಪ್ರಾಂತ್ಯ ವಿಭಾಗಕ್ರಮ ಬೇರೆಯಾಗಿತ್ತು. ಅವುಗಳನ್ನು ರಾಜ್ಯ ಅಥವಾ ಮಂಡಲಗಳೆಂದು ಕರೆಯುತ್ತಿದ್ದರು. ಅವುಗಳ ಚಿಕ್ಕ ಘಟಕಗಳಿಗೆ, ಒಳನಾಡು, ಕೋಟ್ಟಂ, ವಿಷಯ, ನಿರ್ವೃತ್ತಿ, ನಾಡು, ಸೀಮೆ, ಮೋಲಗ್ರಾಮ, ಚಾವಡಿ ಮುಂತಾದ ಹೆಸರುಗಳಿರುತ್ತಿದ್ದವು. ಒಳನಾಡುಗಳು ಸುಮಾರು ಐವತ್ತು ಹಳ್ಳಿಗಳಿಂದ ಕೂಡಿರುತ್ತಿದ್ದವು. ಇವುಗಳಿಗೆ ಮತ್ತೊಂದು ಹೆಸರು ಮೇಲಗ್ರಾಮ. ಮತ್ತೆ ಕೆಲವು ಕಡೆ 'ಕಂಪಣ'ಗಳೆಂದು ಕರೆದಿರುವ ನಿದರ್ಶನಗಳಿವೆ.

೪. **ಚಾರಿತ್ರಿಕ ಮತ್ತು ಸಾಹಿತ್ಯಿಕ ಸ್ಥಿತಿಗತಿಗಳು :** ಪ್ರತಿಯೊಂದು ಸ್ಥಳನಾಮವು ಸೃಷ್ಟಿ ಮತ್ತು ರಚನಾಘಟ್ಟದಲ್ಲಿ ರೂಪುಗೊಳ್ಳುತ್ತದೆ. ಕರ್ನಾಟಕವನ್ನಾಳಿದ ರಾಜರ ಹೆಸರಿನಲ್ಲಿ, ರಾಮಾಯಣ - ಮಹಾಭಾರತಗಳ ಹೆಸರಿನಲ್ಲಿ, ಕಾಲ್ಪನಿಕವಾಗಿಯೋ, ಐತಿಹ್ಯ, ಪುರಾಣಾತ್ಮಕವಾಗಿಯೋ, ರಾಜರ ದಿಗ್ವಿಜಯದ ಹೆಸರಿನಲ್ಲಿಯೋ ಸ್ಥಳನಾಮಗಳು ಹುಟ್ಟಿಕೊಂಡು ಮೌಖಿಕರೂಪದಲ್ಲಿ ಪ್ರಸರಣಗೊಂಡು, ಅನಂತರದಲ್ಲಿ ಅಕ್ಷರ ಕಲಿತವರಿಂದ ಲಿಖಿತ ರೂಪದಲ್ಲಿ ಉಳಿದುಬರುತ್ತವೆ. ಕರ್ನಾಟಕದಾದ್ಯಂತ ರಾಮಾಯಣ-ಮಹಾಭಾರತದಲ್ಲಿ ಬರುವ ಪಾತ್ರಗಳ ಹೆಸರುಗಳು ಇಲ್ಲದೇ ಇರುವ ಸ್ಥಳಗಳು ವಿರಳವೆ. ಉದಾಹರಣೆಗೆ ಭೀಮನ ಹುಂಡಿ, ಕುಂತಿಬೆಟ್ಟ, ಅರ್ಜುನಪುರ, ಯಮದಾಳುಗಳಂತೆಯೂ, ರಾಮಾಪುರ, ಸೀತಾಪುರಿ, ಸೌಮಿತ್ರಿನಗರ, ಆಂಜನೇಯಪುರ, ವಾಲಿಬೆಟ್ಟ ಇತ್ಯಾದಿಗಳು ಸ್ಥಳನಾಮ ರೂಪಗಳಲ್ಲಿವೆ. ಇದಕ್ಕೆ

ಕಾರಣ ಅಂದಿನ ಕಾಲದ ಸಂಸ್ಕೃತಿಯನ್ನು ಪ್ರತಿಬಿಂಬಿಸಲು ಇಟ್ಟ ಹೆಸರುಗಳಾಗಿದ್ದವು. ಅದಾದ ನಂತರ ದ್ವಾರ ಸಮುದ್ರ, ಅರಸೀಕೆರೆ, ಕೃಷ್ಣರಾಜನಗರ, ಕೃಷ್ಣರಾಜಪೇಟೆ, ಚಾಮರಾಜನಗರ, ವೀರರಾಜಪೇಟೆ, ನರಸಿಂಹಪುರ, ದೌಲತಾಬಾದ್. ಸ್ಥಳನಾಮ ಬೇರೊಂದು ಕ್ರಮವಾಗಿ, ಹಳೇಬೀಡು, ಭಂಡಾರವಾಡ, ಎಡತೊರೆ, ಅತ್ತಿಗುಡ್ಡ, ಅರಿಕುಠಾರ, ಮಲೆಯೂರು, ಹೊಳೇನರಸೀಪುರ, ಬೀದರ ಎಂಬ ಈಗಿನ ಹೆಸರನ್ನು ಪಡೆದುಕೊಂಡಿವೆ. ಇಷ್ಟಕ್ಕೆ ಕಾರಣ ರಾಜರ ಆಳ್ವಿಕೆ ಮತ್ತು ಅವರ ಸಿದ್ಧಿ ಸಾಧನೆಗಳು ಜನತೆಗೆ ಅವರಿಂದಾಗುತ್ತಿದ್ದ ಅನುಕೂಲತೆಯನ್ನು ಆಧರಿಸಿ ಇಟ್ಟ ಹೆಸರುಗಳೇ ಆಗಿವೆ. ಈ ರಾಜರ ಆಳ್ವಿಕೆಯ, ಗ್ರಾಮರಚನೆಯ ಉಲ್ಲೇಖಗಳು ಗಂಗರು, ಕದಂಬರು, ಚಾಲುಕ್ಯರು, ಹೊಯ್ಸಳರು (ಮೈಸೂರು ಅರಸರು) ಬರೆಸಿರುವ ಶಾಸನಗಳಲ್ಲಿ ತಿಳಿದುಬರುತ್ತವೆ. ಕರ್ನಾಟಕದ ಮಟ್ಟಿಗೆ ಪ್ರತಿಯೊಂದು ಗ್ರಾಮ, ಊರು, ಹಳ್ಳಿ, ಯಾವುದಾದರೊಂದು ರಾಜಮನೆತನದ ಆಳ್ವಿಕೆಗೆ ಒಳಪಟ್ಟು ಶಾಸನ ಮತ್ತು ವೀರಗಲ್ಲನ್ನು ಹೊಂದಿರುವುದೇ ಆಗಿದೆ. ಉದಾಹರಣೆಗೆ ಬೇಲೂರಿನ ಹಲ್ಮಿಡಿ, ಬಿಜಾಪುರದ ಬಾದಾಮಿ, ಮದ್ದೂರಿನ ಆತಕೂರು, ಶ್ರವಣಬೆಳಗೊಳ ಶಾಸನ ಇನ್ನೂ ಇತ್ಯಾದಿ.

ಕರ್ನಾಟಕದ ಹಲವಾರು ಸ್ಥಳನಾಮಗಳಲ್ಲಿ ದೊರೆಯುವ ಶಾಸನಗಳು ಕರ್ನಾಟಕದ ಜನಜೀವನ, ಸಂಪ್ರದಾಯ ಪದ್ಧತಿ, ವಿದ್ಯಾಭ್ಯಾಸ ಕ್ರಮ, ಆಡಳಿತ, ಲಲಿತಕಲೆ, ಸಂಗೀತ, ದಾನ - ಧರ್ಮ, ರಕ್ಷಣೆ, ಸಾಹಿತ್ಯ - ಸಂಸ್ಕೃತಿ, ವ್ಯಾಕರಣ, ಛಂದಸ್ಸು, ಇತಿಹಾಸ, ಭೂಗೋಳ, ಕೃಷಿಯ ಹಿನ್ನೆಲೆ ಇತ್ಯಾದಿಗಳನ್ನು ತಿಳಿಸಿಕೊಡುವುದರಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡು ಜ್ಞಾನದ ಸವಿಗಡಲುಗಳೇ ಆಗಿವೆ.

ಚರಿತ್ರೆಯ ಪುನರ್‌ಸೃಷ್ಟಿಯಲ್ಲಿ ಸ್ಥಳನಾಮಗಳ ಮಹತ್ವ ಅಪಾರವಾದದ್ದು. ಚರಿತ್ರೆಯನ್ನು ಬಿಚ್ಚಿಡುವಲ್ಲಿ ಸಹಾಯಕವಾಗುವ ಕನ್ನಡ ಶಾಸನಗಳು ಶ್ರವಣಬೆಳಗೊಳವನ್ನು ವಿವಿಧ ಹೆಸರುಗಳಿಂದ ಕರೆದಿವೆ. ಇಲ್ಲಿ ಚಿಕ್ಕಬೆಟ್ಟವನ್ನು ಕಳ್ವಪ್ಪು ಎಂದೂ ದೊಡ್ಡ ಬೆಟ್ಟವನ್ನು ಪೆರ್ಗಪ್ಪು ಎಂದೂ, ಶ್ರವಣ ಬೆಳಗೊಳವನ್ನು ವೆಳ್ಗೊಳ ಎಂದೂ (= ಇಲ್ಲಿ ಸುಂದರವಾದ ಕೊಳವೊಂದಿದೆ) ಕರೆಯಲಾಗಿದೆ. ವಡ್ಡಾರಾಧನೆ ಕೃತಿಯಲ್ಲಿ ಕಳ್ವಪ್ಪುನಾಡು ಎಂದು ಕರೆದಿರುವುದು ಶ್ರವಣ ಬೆಳಗೊಳದ ಸುತ್ತಮುತ್ತಲಿನ ಪ್ರದೇಶವನ್ನೇ. ಈ ಕಳ್ವಪ್ಪು - ಸಮಾಧಿ ಎಂಬರ್ಥವನ್ನು ಸೂಚಿಸುತ್ತದೆ. ಇದನ್ನು ಸಂಸ್ಕೃತದಲ್ಲಿ ಕಟವಪ್ರ ಎಂದು ಕರೆಯುವುದುಂಟು. ಬಹುಶಃ ಅನೇಕ ತೀರ್ಥಂಕರರು ಇಲ್ಲಿ ಸಮಾಧಿಯಾಗಿರುವ ನಿದರ್ಶನಗಳಿವೆ. ಅದರ ನಿಮಿತ್ತವಾಗಿ ಚಾವುಂಡರಾಯ ಜಗತ್ತಿನಾದ್ಯಂತ ಕಣ್ಮನ ಸೆಳೆಯುವ ಬಾಹುಬಲಿ ವಿಗ್ರಹವನ್ನು ಪ್ರತಿಷ್ಠಾಪಿಸಿ, ಶಾಂತಿಯ, ಅಹಿಂಸೆಯ ಸಂದೇಶವನ್ನು ಧರೆಯುದ್ದಕ್ಕೂ ಸಾರಿರುವುದು. ಇದು ಒಂದು ಕಡೆ ಜೈನಧರ್ಮ, ಮತ್ತೊಂದು ಕಡೆ ಚಂದ್ರಗುಪ್ತ ಮೌರ್ಯನ ಇತಿಹಾಸ, ಮಗದೊಂದೆಡೆ ರಾಜಾಶ್ರಯ, ಇನ್ನೊಂದೆಡೆ ಕಲಾಗಾರಿಕೆಯಲ್ಲಿ ಇಡೀ ಒಂದು ಜೈನಧರ್ಮದ ಸಾರವನ್ನು ಪಡೆಮೂಡಿಸಿರುವುದು ಚಾರಿತ್ರಿಕ ಹಿನ್ನೆಲೆಯಿಂದ ತಿಳಿದುಬರುವುದುಂಟು.

ಹಾಗೆಯೇ ಮಹಿಷೂರನ್ನು (ಮೈಸೂರು) ಮಹಿಷಮಂಡಲ ಎಂದು ಚಾರಿತ್ರಿಕವಾಗಿ ಕರೆಯುವುದುಂಟು. ಆದರೂ ಎಮ್ಮೆ ದನಗಳನ್ನು ಸಾಕಿಕೊಂಡು, ಹೈನುಗಾರಿಕೆ ವೃತ್ತಿಯನ್ನೇ ಪ್ರಮುಖವಾಗಿ ಅವಲಂಬಿಸಿದ್ದ ಜನರ ವಾಸ್ತವ್ಯ ಸ್ಥಳ. ಮಹಿಷರೆಂದರೆ ಒಂದು ಜನಾಂಗವೂ ಆಗುತ್ತದೆ. ಆದರೆ ದುರ್ಗಿಯು ಮಹಿಷಾಸುರನನ್ನು ಸಂಹಾರ ಮಾಡಿದ್ದಕ್ಕೆ, ದುರ್ಗಿಯ ಹೆಸರಿನಲ್ಲಿ ಮಹಿಷೂರು > ಮಹಿಸೂರು > ಮೈಸೂರು > ಎಂದು ಹೆಸರು ಉಳಿದುಬಂದಿತು. ಕೆಲವು ಕಾಲ ಈ ಸ್ಥಳನಾಮವನ್ನು ಮಹಿಷಾಪುರವೆಂದು ಕರೆದಿರುವುದುಂಟು.

ಹೀಗೆ ಜಗತ್ತಿನ ಎಲ್ಲಾ ಆಗುಹೋಗುಗಳ ಸ್ಥಿತಿ-ಗತಿಗಳನ್ನು ಸ್ಮೃತಿಪಟಲದಲ್ಲಿ ಹಿಡಿದಿಟ್ಟು, ಗಣಕಯಂತ್ರದ ಫ್ಲಾಪಿಗಳಂತೆ ಸ್ಥಳನಾಮಗಳು ಮಾನವನ ಸರ್ವ-ಸಂಸ್ಕೃತಿಯ ವಿಚಾರಧಾರೆಗಳನ್ನು ಸೆರೆಹಿಡಿದುಕೊಂಡ ಉಗ್ರಾಣಗಳೇ ಆಗಿವೆ. ಸ್ಥಳನಾಮಗಳೆಂದರೆ ಒಂದರ್ಥದಲ್ಲಿ ಸರಸ್ವತಿದೇವಿಯ ಮುದ್ರಾಭಂಡಾರಗಳೆ. ಅದು ವಿಜ್ಞಾನ, ಇತಿಹಾಸ, ರಾಜ್ಯಾಡಳಿತ, ಸಂಪ್ರದಾಯ, ಕಲೆ, ಜನಜೀವನ, ಭೌತಿಕ ಸ್ವರೂಪ, ಪ್ರಾಕೃತಿಕ ಪರಿಸರದ ಸಂಪತ್ತು, ಕಲ್ಲು, ಕಡಲು, ಪರ್ವತ-ಶಿಖರ, ಎಡೆ-ತೊರೆ, ಹಳ್ಳ-ಹೊಳೆ, ಗುಡಿಸಲು-ಗೋಪುರ, ಸೂರ್ಯ-ಚಂದ್ರ, ಹಗಲು-ರಾತ್ರಿ ಮುಂತಾದ ಪ್ರಕೃತಿಕ್ರಿಯೆಯೊಂದಿಗೆ ಮಾನವನ ಗತಕಾಲದ ಜೀವನವನ್ನು - ಸಂಸ್ಕೃತಿಯನ್ನು ಬೆಸೆದಿವೆ.

ಒಟ್ಟಾರೆಯಾಗಿ ಗ್ರಾಮಗಳ ನಿರ್ಮಾಣ, ಮಾನವನ ಅಸ್ತಿತ್ವ, ನದಿ-ತಟಗಳ ನೀರನ್ನು ಕೃಷಿಗೆ ಬಳಸಿದ ಬಗೆ, ರಾಜಪ್ರಭುತ್ವದವರ ಆಳ್ವಿಕೆ, ಅವರು ಬಿಟ್ಟ ದತ್ತಿ, ಕೊಟ್ಟ ದಾನ, ಬರೆಸಿದ ಶಾಸನ, ಕಟ್ಟಿಸಿದ ಹಳ್ಳಿ-ಪುರ, ಪಟ್ಟಣ, ಬ್ರಹ್ಮಪುರಿ, ಅಗ್ರಹಾರ, ಆಡಳಿತ ಶಾಖೆಗಳ ವಿಭಜನೆ, ರಾಜರು-ಪ್ರಜೆಗಳ ನಡುವಿನ ಸಂಬಂಧ, ಧಾರ್ಮಿಕ ಸಹಿಷ್ಣುತೆ, ಅಹಿಂಸಾ ತತ್ವ, ಕೋಟೆಕೊತ್ತಲಗಳನ್ನು ನಿರ್ಮಿಸಿದ ಬಗೆ, ತೆರಿಗೆ ವಿಧಾನಗಳು, ಅದರ ಸದ್ವಿನಿಯೋಗ, ಗ್ರಾಮಾಭಿವೃದ್ಧಿಗೆ ಪ್ರೋತ್ಸಾಹ, ವಿದ್ಯಾಕೇಂದ್ರಗಳ ಸ್ಥಾಪನೆ, ಅನೇಕ ಕವಿಸಂಕುಲಕ್ಕೆ ಉತ್ತೇಜನ, ಒಂದೆಡೆ ಕಾವ್ಯ ಮತ್ತೊಂದೆಡೆ ಕಾವ್ಯಧರ್ಮ, ಸಾಮಂತರಾಜರಿಗೆ ಕೊಡುತ್ತಿದ್ದ ಆಶ್ರಯ, ಸೇನಾ ತರಬೇತು, ಯುದ್ಧ ವರ್ಣನೆ, ರಾಜಸೂಯ ಯಾಗ, ಶತ್ರುಗಳ ನಿರ್ಮೂಲನೆ, ವರ್ಣಾಶ್ರಮ ಧರ್ಮದ ಕಲ್ಪನೆ ಇತ್ಯಾದಿಗಳೆಲ್ಲವೂ ತಿಳಿದುಬಂದಿರುವುದು ಚರಿತ್ರೆಯನ್ನು ಪುನರ್‌ನಿರ್ಮಾಣ ಮಾಡುವ ಸ್ಥಳನಾಮ ಮಹತ್ವದಿಂದಲೇ.

ಆದ್ದರಿಂದ ಚಾರಿತ್ರಿಕ ಹಿನ್ನೆಲೆಯಲ್ಲಿ ಸ್ಥಳನಾಮಗಳು ನಮ್ಮ ಪೂರ್ವಿಕರ ವಿದ್ಯಾಸಂಪನ್ನತೆ, ಸಂಸ್ಕೃತಿಯ ಹರವು, ಸೌಂದರ್ಯಜ್ಞಾನ, ಧಾರ್ಮಿಕ ದೃಷ್ಟಿ, ಕಂದಾಚಾರಗಳು, ಸಂಪ್ರದಾಯಗಳು, ರಾಜಮಹಾರಾಜರ ಪ್ರಭುತ್ವ, ಮಾನವ ಜನಾಂಗದ ಮೂಲ ನಿವಾಸಿಗಳ ಹಿನ್ನೆಲೆ, ಅಂದಿನ ಜನರ ವೃತ್ತಿ ಧರ್ಮಗಳು, ಪ್ರಕೃತಿ ಸಂಪತ್ತು, ಭಾಷೆ ಮತ್ತು ವ್ಯಾಕರಣ, ಮಾನವಶಾಸ್ತ್ರ, ಮನಃಶಾಸ್ತ್ರ, ಇತಿಹಾಸ ಶಾಸ್ತ್ರ, ಕಾನೂನು ಶಾಸ್ತ್ರ ಇನ್ನೂ ಮುಂತಾದ ವಿಚಾರಗಳನ್ನು ತಮ್ಮ ಗರ್ಭದಲ್ಲಿ ಹುದುಗಿಸಿಕೊಂಡಿರುವ ಅನುಲ್ಲೇಖಿತ ಕೈಪಿಡಿಗಳೂ, ಜ್ಞಾನಾರ್ಥ ಭಂಡಾರದ ಬೃಹತ್ ಕೋಶಗಳೇ ಆಗಿವೆ.


ನಾ. ವಿಶ್ವನಾಥ
[illegible]


# ಸಾದರ ಸ್ವೀಕಾರ

**ಬಿಜಾಪುರದ ಆದಿಲ್‌ಶಾಹಿ ಸ್ಮಾರಕಗಳ ಕಿರು ನೋಟಗಳು** (ಇಂಗ್ಲಿಷಿನಲ್ಲಿ)

*ಡಾ|| ಎಚ್. ಡಿ. ದಡ್ಡಿ*

ಪುಟ : ೧೦೦ ಬೆಲೆ : ರೂ. ೩೦೦

ಆರ್. ಎ. ಸ್ವಾಮಿಗೌಡರ್

ಜಮಖಂಡಿ - ೫೮೭ ೩೦೧

**ಮಿಂಚು** (ಕವನ ಸಂಕಲನ)

*ಅಪ್ಪಾ ಸಾಹೇಬ ಅಲಿಬಾದಿ*

ಪುಟ : ೭೨ ಬೆಲೆ : ರೂ. ೪೦

ವಿನೂತನ ಪ್ರಕಾಶನ, 'ಶಾಂತಿನಿಕೇತನ'

ಜಯನಗರ, ಎಚ್.ಬಿ.ಸಿ. ಹತ್ತಿರ

ಅಥಣಿ-೫೯೧ ೩೦೪, ಬೆಳಗಾವಿ ಜಿಲ್ಲೆ

**ಡೀಸೆಂಟಾಗಿ ಬಯ್ಯುವುದು**

(ಹಾಸ್ಯ ಪ್ರಬಂಧಗಳು)

*ಪಿ. ಬಿ. ಪ್ರಸನ್ನ*

ಪುಟ : ೧೧೮ ಬೆಲೆ : ರೂ. ೫೩

ಸುಮಂತ ಪ್ರಕಾಶನ, ಉಪ್ಪಿನ ಕೋಟೆ, ಬ್ರಹ್ಮಾವರ

**ಸೂಜಿಗಲ್ಲು ಹುಡುಗಿ** (ಕವನ ಸಂಕಲನ)

*ಎಸ್. ನಟರಾಜ ಬೂದಾಳು*

ಪುಟ : ೮೪ ಬೆಲೆ : ರೂ. ೬೦

ವೀಚಿ ಸಾಹಿತ್ಯ ಪ್ರತಿಷ್ಠಾನ

ಜನರಲ್ ಕಾರಿಯಪ್ಪ ರಸ್ತೆ, ಕೆ. ಆರ್. ಬಡಾವಣೆ,

ತುಮಕೂರು - ೫೭೨ ೧೦೧

**ಹುತಾತ್ಮ ಭಗತ್ ಸಿಂಗ್**

*ಕುಲದೀಪ ನಯ್ಯರ್ ಅನು : ಜೆ. ಪಿ. ಬಸವರಾಜು*

ಪುಟ : ೧೨೮ ಬೆಲೆ : ರೂ. ೬೦

ಲೋಹಿಯಾ ಪ್ರಕಾಶನ

'ಕ್ಷಿತಿಜ' ಕಪ್ಪಗಲ್ಲು ರಸ್ತೆ, ಬಳ್ಳಾರಿ - ೫೮೩ ೧೦೩

**ಸುಸಾರ ಸಂಸಾರ**

(ಕುಟುಂಬ ನಿರ್ವಹಣಾ ಶಾಸ್ತ್ರ ಪ್ರವೇಶ)

*ಭಾರತಿ ತೊರಗಲ್ಲ*

ಪುಟ : ೨೧೬ ಬೆಲೆ : ರೂ. ೧೨೦

ಅಮೋಘ ವಾಙ್ಮಯ ಪ್ರಸಾರ

೬೫, ರಾಣಿ ಚೆನ್ನಮ್ಮ ನಗರ. (೧ನೇ ಘಟ್ಟ)

[illegible]

# ಬೆಳ್ಳಿ ಕಡಗದ ಪುರಾಣ

ಸಂಪಿಗೆ ಹಳ್ಳಿ ಅಶ್ವಥಕಟ್ಟೆ ಮೇಲೆ ಮೂರ್ದಿನಿಂದ ಪರಸ್ತಳಸ್ತ ಕುಂತ್ಬುಟ್ಟಿದ್ದ. ಅವ್ನ ವಶಿಷ್ಟ ಮಹಾಮುನಿಯಂಗೆ ಕಾಣ್ತಿದ್ದ. ಯಾರಾತ್ರಾನೂ ಮಾತಿಲ್ಲಾ, ಕಥೆ ಇಲ್ಲಾ. ಯಾರ್ನೂ ಕಣ್ಣೆತ್ತಿ ನೋಡ್ತಿರ್ಲಿಲ್ಲಾ. ಹಿಟ್ಟು, ನೀರು ಕೆಳ್ಳೊದ್ನೇ ಅಲ್ಲ.

ಆ ಹೊತ್ತು ಬಡ್ಡಿ ಶಂಕ್ರಪ್ಪ ಚುಮು ಚುಮು ಬೆಳಕ್ನಾಗೆ ಅಶ್ವಥಕಟ್ಟೆ ಮುಂದಾಸಿ ಕುಂಟೆ ಕಡೆ ಹೋಗ್ತಿದ್ದ. ತಲ್ಗೆ ಕೈ ಕೊಟ್ಕಂಡು ಮನ್ಗಿದ್ದ ಆ ಋಷಿಯ ಮುಖದ್ಮೇಲೆ ಅದ್ಯಾವ್ದೋ ನೆರಳು ವಾಲಾಡ್ತಿತ್ತು. ಕತ್ತೆತ್ತಿ ನೋಡದ್ರೆ ನಾಗಪ್ಪ ಸ್ವಾಮಿ ಮಿಣುಗ್ತಾ ಅವ್ನೆ.

ಬಡ್ಡಿ ಶಂಕ್ರಪ್ನ ಕೈ, ಕಾಲ್ಗಳು ನಡ್ತಿದ್ದವು. ಕೈಮುಕ್ಕಂಡು, ಕಣ್ಮುಚ್ಕಂಡು ಅವ್ನ ಕೆನ್ನೆಗಳ್ನ ಅವ್ನೇ ಬಡ್ಕಂಡು "ಸ್ವಾಮಿ ಪರ್ಮಾತ್ಮ ನಮೂರ್ನ ಉದ್ದಾರ ಮಾಡ್ಬೇಕಪ್ಪಾ ಸ್ವಾಮಿ" ಬೇಡ್ಕಂಡು ಕಣ್ಬಟ್ಟಿದ್ದ. ಆ ನಾಗಪ್ಪ ಸ್ವಾಮಿ ಮಟಾ ಮಾಯವಾಗಿದ್ದ. ಈ ಸುದ್ದಿ ಕಾಡ್ಗಿಚ್ಚಿನಂತೆ ಊರಾದೂರೆಲ್ಲಾ ಅಬ್ಬಿತ್ತು. ಜನ್ಗಳಲ್ಲಿ ಭಯ, ಭಕ್ತಿ ಹಾಲಿನಂತೆ ಉಕಿತ್ತು. ಆ ಅಶ್ವಥಕಟ್ಟೆ ಸುತ್ತಾ ತನ್ನತ್ರಕ್ಕೆ ಕಿವ್ಡರನ್ನೂ, ಮೂಗರನ್ನೂ ಬರ್ಮಾಡ್ಕಂಡಿತ್ತು. ನೋಡ ನೋಡ್ತಿದಂಗೆ ಅಶ್ವಥಕಟ್ಟೆ ಸುತ್ತಾ ಮುತ್ತಾ ಕಸ, ಕಡ್ಡಿ, ಕೊಳೆ ಕಣ್ಮರೆಯಾಗಿ ಲಕಲಕಾ ಅನ್ತಿತ್ತು. ಅಶ್ವಥಕಟ್ಟೆಗೆ ನೀರು ಸಳೆವು ಹಾಕಿದ್ರು. ಮೆಟ್ಲಮುಂದೆ ಸಾರಿಸಿದ್ರು. ರಮಣಿಯರ ಕೈಚಳಕಕ್ಕೆ ಥರಾವರಿ ರಂಗೋಲೆ ನಗ್ತಿದ್ವು. ಮೆಟ್ಲಿಗೆ ಆರಶಿಣ, ಕುಂಕುಮ ಅಚ್ಚಿದ್ರು. ಮರ್ಕೆ ಪೂಜೆ ಮಾಡಿದ್ರು. ಋಷಿಗೆ ಮಂಗ್ಳಾರ್ತಿ ಬೆಳ್ಗಿದ್ರು. ಇರೋರು ನಾ ಮುಂದು, ತಾ ಮುಂದು ಅಂತ ಪೂಜೆ ಮಾಡಿಸ್ತಿದ್ರು. ಅಶ್ವಥಕಟ್ಟೆಯ ಎದ್ರು ಮನೆಯ ಗೌರಮ್ಮ ಅದ್ನೆಲ್ಲಾ ನೋಡಿ ನೋಡಿ ವ್ಯಥೆ ಪಟ್ಕಂಡು ಯೋಚಿಸಿ, ಯೋಚಿಸಿ ಸಾಕಾಗಿದ್ಲು, ದೆವ್ರ ಪಟದತ್ರ ತಡ್ಕಾಡಿದ್ಲು. ಅವ್ಳ ಜೀವ ಉಸೂರ್ ಅನ್ತು. ದಿಪಾಲೆ ಕಂಬದ ಮೇಲಿದ್ದ ಹಣತೆ ಒಳ್ಗಡೆ ಕೈಯಾಕಿದ್ಲು. ಒಂದು ಕಾಸು ಕೈಗೆ ಸಿಕ್ತು. ಯತ್ಕಡೆ ತಿರುಗಿಸಿದ್ರೂ ಕಪ್ಪಟ್ಟೆ ಕರ್ಗಿತ್ತು. ಅದ್ನ ಉಣಿಸೆ ಹಣ್ಣು, ಉಪ್ನಿಂದ ಉಜ್ಜಿದ್ಲು. ಅದು 'ಫಳಾ ಫಳ್ಳೆ' ನಾನು ಐವತ್ತು ಪೈಸೆ ಅಂತ ಹೇಳ್ತು. ತಿರ್ಗಾ ಅದ್ನ ಹಣತೆ ಒಳ್ಗಾಕಿ ತಲೆ ಮೇಲೆ ಕೈ ಹೊತ್ಕಂಡು ನಡ್ಮನೆಯಾಗೆ ಕುಂತ್ಕಂಡ್ಳು.

ಬಡ್ಡಿ ಶಂಕ್ರಪ್ಪ ಬೆಳ್ಳಿ ದಿಪಾಲೆ ಕಂಬ್ದಾಗೆ ತುಪ್ಪ ತುಂಬ್ಕಂಡು ಗೌರಮ್ನ ಮನ್ಗೆ ಬಂದು "ಬೆಂಕಿಕಡ್ಡಿ ಕೊಡಮ್ಮಾ" ಕೇಳಿದ್ರು.

"ಇಲ್ಲಾ ಕಾಣಣ್ಣೋ" ಗೌರಮ್ಮ ಹೇಳಿದ್ಲು.

"ಅಲ್ಲಾ ಕಾಣಮ್ಮಾ ನಿನ್ನ ಬೆಳ್ಳಿ ಕೇಳಿಲ್ಲಾ, ಬಂಗಾರ ಕೇಳಿಲ್ಲಾ ಒಂದೇ ಒಂದು ಬೆಂಕಿಕಡ್ಡಿ ಕೇಳಿದ್ರೆ, ಅದ್ನೂ ಇಲ್ಲಾ ಅಂತಿಯಲ್ಲಾ, ಮನೆ ಅಂದ್ಮೆಲಿ ಬೆಂಕಿ ಕಡ್ಡಿ ಇರಲ್ವಾ ?" ಟಪಾರ್ ಅಂತ ಬಾಗ್ಲು ಮುಚ್ಕೊಂಡು ಗೌರಮ್ಮ ಆಚ್ಕೋದ್ಲು. ಯಾರ ಯಾರದೋ ಮನೆ, ಹಿತ್ಲಾಗ ಗಳ, ಬೊಂಬು, ಹಗ್ದುರಿ ಯಾವ ಯಾವ ತೆಂಗಿನ್ಮರದ ಗರಿಗಳೋ ಸೇರಿ ಹಸಿರಿನ ಚಪ್ರವಾಗಿ ಜನ್ಗಳ ಕಣ್ಣಿಗೆ ತಂಪು ನೀಡಿತ್ತು. ಅಶ್ವಥಕಟ್ಟೆ ಸುತ್ತಾ, ಹದಿನೆಂಟು ಇಪ್ಪತ್ತು ಕಲ್ಕಂಭಗಳು ನಿಂತ್ಕಂಡ್ಬುಟ್ವೋ. ಅದ್ಕೆ ತಂತಿ ಬೇಲಿ ಬಿಕ್ಕಂಡು ತಾರತಮ್ಯಕ್ಕೆ ಮೂಕ ಸಾಕ್ಷಿಯಾಗಿದ್ದವು. ಅದ್ಕೊಂದು ಬಿದರಿನ ತಟಿಕೆ. ಅದ್ರ ಮುಂದೆ ಬಡ್ಡಿ ಶಂಕ್ರಪ್ಪ ಕೈಯಾಗೆ ಕೊಲಿಡ್ಕಂಡು ಹೋಗ್ಬರೋರ್ನೆಲ್ಲಾ ಕಣ್ಣಾಗೆ ಕಣ್ಣಿಟ್ಟು ನೋಡ್ತಿದ್ದ.

ಒಂದುಡ್ಗ ಆ ಋಷಿಗೆ ತೆಂಗಿನ್ಕಾಯಿ ನೀವಿಳ್ಸಿ "ಈ ಸಾರಿ ನನ್ನ ಪಾಸು ಮಾಡಪ್ಪಾ ಸ್ವಾಮಿ" ಬೇಡ್ಕಂಡು ಹಿಡ್ಗಾಯಿ ಹೊಡೆದಿದ್ದ. ಇಬ್ರು ಹುಡುಗ್ರು ಒಬ್ರ ತಲೆಗೆ ಇನ್ನೋಬ್ರು ಕುರಿಗಳಂಗೆ 'ಢಂಮ್' ಅಂತ ಡಿಕ್ಕಿ ವಡ್ಕಂಡಿದ್ರು. ಒಬ್ಬ ಹುಡುಗ ಎರಡ್ಕಯಲ್ಲೂ ತಲೆನ ಹಿಡ್ಕಂಡು 'ಕ್ವಾಯಾ' ಅಂತ ಅಳ್ತಿದ್ದ. ಯಾರೋ ಅವ್ನ ಬಾಯ್ಗೆ ತೆಂಗಿನ್ಕಾಯಿ ಚೂರು ತುರ್ಕಿದ್ರು. ಇನ್ನೊಂದುಡ್ಗ ತಲೆನ ಉಜ್ಕಂತಿದ್ದ. ರವಷ್ಟೋತ್ತು ಆದ್ಮೆಲೆ ಇಬ್ರೂ ಕೋಳಿಗಳಂಗೆ ಕಿತ್ತಾಡ್ತಿದ್ರು. ಬಡ್ಡಿ ಶಂಕ್ರಪ್ಪ ಅವ್ರನ್ನ ಬಿಡಿಸಿ ದೂರ ದೂರ ತಳ್ಳಿದ್ದ.

ಶೆಟ್ರು ಸ್ನಾನ ಮಾಡ್ಕಂಡು ಗರಿ ಗರಿ ಸಿಲ್ಕಿನ ಪಂಚೆ ಉಂಟ್ಕಂಡು ಹಣೆಗೆ ಮೂರ್ನಾಮ ಬಳ್ಕಂಡು, ದೇವುರ್ಗೆ ಒಂದು ಗಂಟೆ ತಕೊಂಡು ಅದ್ಕೂ ಮೂರ್ನಾಮ ಬಳ್ಕಂಡು ಮಿನಿ ಪಂಚಾಂಗ ೨೦೦೨ ನ್ನ ಓದಿ ಕಣ್ಗೊತ್ಕಂಡು ದೇವ್ರ ಪಟದ ಹತ್ತಿರ ಮಡ್ಗಿ ಅಶ್ವಥಕಟ್ಟೆ ಕಡ್ಗೆ ನಡಿತಿದ್ರು.

ಗೋಲಿ ಆಡ್ತಿದ್ದ ಹುಡುಗ್ರು ಶೆಟ್ರನ್ನ ನೋಡಿ ಒಳ್ಗೊಳ್ಗೆ ನಗ್ತಿದ್ರು. ಒಂದುಡ್ಗ

"ಶೆಟ್ಟಿ ಬಲು ಗಟ್ಟಿ
ಮುಟ್ಟಿದರೆ
ಮೂರು ಪಲ್ಟಿ" ಅಂತ ಗೇಲಿ ಮಾಡ್ದ.

ಶೆಟ್ರು ಗರಕ್ಕಂತ ಹಿಂದಿಕ್ತಿರ್ಗಿ ನೋಡಿ ಪಿಸ್ಗುಟ್ಟಿ "ಯೇಡು ಕೊಂಡಲವಾಡ, ವೆಂಕಟರಮಣ, ಗೋವಿಂದಾ ಗೋವಿಂದಾ.." ಜಪಿಸ್ತಾ ತಲೆ ಬಗ್ಗಿಸ್ಕಂಡು ಬಿರಾಬಿರ್ನೆ ಹೆಜ್ಜೆ ಹಾಕ್ತಿದ್ರು.

ಎದುರ್ಗೆ ಸಿಕ್ದಾ ಕೃಷ್ಣಾಭಟ್ಟರು ಏದುಸಿರುಬಿಡ್ತಾ "ಅಶ್ವಥಕಟ್ಟೆ ಕಡ್ಗೆ ಪ್ರಯಾಣ ಹೊರಟಂಗದೆ?" ಕೇಳಿದ್ರು. ಅವ್ರ ಮುಖ ಜಾಲಿಗಂಟ್ನಂಗಿತ್ತು.

ಶೆಟ್ರು "ಊನ್ ಸ್ವಾಮಿ" ಹೇಳಿದ್ರು.

"ಅಲ್ಲಾ ಸ್ವಾಮಿ ಅವ್ರವ್ರ ಕೆಲ್ಸ ಅವ್ರವ್ರು ಮಾಡಿದ್ರೆ ತಾನೆ ಚೆಂದ ? ಅಲ್ನೋಡಿದ್ರೆ ಸಿಕಸಿಕ್ದೋರೆಲ್ಲಾ ಪೂಜೆ ಮಾಡ್ತಾ ಅವ್ರೆ, ಯಾರ್ಗೆ ಯಾರೂ ಹೇಳೋರಿಲ್ಲಾ, ಕೇಳೋರಿಲ್ಲಾ, ನಾನು ಈ ರಣ ರಣ ಬಿಸಿಲ್ನಾಗೆ ಹೊತ್ತಾರೆಯಿಂದ ಎರಡ್ಸಾತಿ ಮನ್ಗೂ ಆ ಅಶ್ವಥಕಟ್ಟೆಗೂ ಅಲಿತಾ ಇದ್ದೀನಿ, ನನ್ನ ಯಾವೂರೂ ದಾಸಯ್ಯ ಅನ್ನೋರಿಲ್ಲಾ, ಎಂತಾ ಕಾಲ ಬಂತು ನೋಡಿ.." ಭಟ್ಟರ ಕಂಠ ಗೋಳಾಡ್ತಿತ್ತು. ಶೆಟ್ರು ಕಾಲ್ಗೆ ಬುದ್ಧಿ ಹೇಳಿದ್ರು.



ಶೆಟ್ರು, ಹಸಿರಾವ್ನಂಗೆ ಅಶ್ವಥಕಟ್ಟೆ ಹತ್ರಿಕೆ ಹೋಗಿ ಖುಷಿಗೆ ಕೈಮುಗ್ದು, ಅಡ್ಬಿದ್ದು, ಅರಳಿ ಮರ್ದ ಕೊಂಬೆಗೆ ಗಂಟೆ ಕಟ್ಟಿ 'ಢಣ, ಢಣ' ಅಂತ ನಾಲ್ಕು ಸಾತಿ ಬಡ್ದು ಕಣ್ಮುಚ್ಚಿ ಮನಸ್ನಲ್ಲಿ ದೇವ್ರನ್ನ ಧ್ಯಾನಿಸಿದ್ರು. ''ಕೊರ್ ಕೊರ್'' ಅಂತ ಕ್ಯಾಕರ್ಸಿ ಗಂಟ್ಲು ಸರ್ಮಾಡ್ಕಂಡು ''ಎಂಥ ಪುಣ್ಯದ ಕೆಲ್ಸಗಳು ನಡಿಬೇಕು ಈ ಊರ್ನ ದೊಡ್ಮನಸ್ರು ಮುಂದೆ ಬಂದು ಇಲ್ಲಿ ಗುಡಿ ಕಟ್ಟಿಸಿದ್ರೆ ನನ್ನಕಡೆಯಿಂದ ಒಂದು ಸಾವಿರದ ಒಂದು ನೂರ ಒಂದು ರೂಪಾಯಿ ಕೊಡ್ತಿನ್ತಪ್ಪಾ'' ಹೇಳಿದ್ರು.

''ಕೊಡೆಗಳ್ಳ ಸರ್ಮಾಡ್ಕಳ್ರಪ್ಪಾ'' ಯಾರೋ ಹೇಳಿದ್ರು. ಅಲ್ಲಿದ್ದ ಜನ್ಗಳು ಅರಗಿಣಿಯಂತೆ ನಕ್ಕಿದ್ರು. ಗರಿ ಗರಿ ಬಟ್ಟೆಯವ್ರು ಒಬ್ರ ಮುಖ ಒಬ್ರು ನೋಡ್ಕಂಡು, ಒಬ್ರಾದ್ಮೇಲೆ ಒಬ್ರಂತೆ ನಾನು ಅಷ್ಟು ಕೊಡ್ತಿನಿ, ಇಷ್ಟು ಕೊಡ್ತೆನೆಂದ್ರು. ಅದ್ನೆಲ್ಲಾ ಒಬ್ರು ಗುರ್ತು ಹಾಕಂತಿದ್ರು. ಆ ಲೆಕ್ಕ ಲಕ್ಷ ದಾಟಿತ್ತು.

ಎರಡೇ ಎರಡು ದಿನ್ದಾಗೆ ಸಂಪಿಗೆ ಹಳ್ಳಿ ಅಶ್ವಥಕಟ್ಟೆ, ಆ ಋಷಿಯ ಮಹಿಮೆ ಗಾಳಿ ಬೆಳಕಿನ್ಜೊತೆ ಸೇರ್ಕಂಡು ಸುತ್ತಾ ಹತ್ತಳ್ಳಿ ಮುಟ್ಟಿತ್ತು. ಗಂಗೇತ್ನ ಆಡ್ಸೋರು, ಕೋತಿ ಕುಣಿಸೋರು, ಗಿಣಿ ಶಾಸ್ತ್ರ ಹೇಳೋರು, ಭಿಕ್ಷೆ ಬೇಡೋರು, ಗಿಡಮೂಲಿಕೆ ಮಾರೋರು, ದೇವಾನು ದೇವತೆಗಳ ಭಾವ ಚಿತ್ರಗಳನ್ನು ಮಾರೋರು, ಬಳೆ ಮಾರೋರು, ಕಣ್ಣಿಗ್ಬೇಕಾದ ತಿಂಡಿ ಪದಾರ್ಥಗಳನ್ನು ಮಾರೋರು, ಯಾವ್ಯಾವುದೋ ಭಾಷೆ ಮಾತಾಡ್ತಿದ್ದವರು ... ಸಂಪಿಗೆ ಹಳ್ಳಿ ಗೀಜುಗಳ ಗೂಡಿನ್ತರ ಗಿಜಿ ಗಿಜಿ ಅನ್ತಿತ್ತು. ಸಂಪಿಗೆ ಹಳ್ಳಿ ಜನ್ಗಳು ಬೆರ್ಗಾಗಿ, ನವ ವಧುವಿನಂತೆ ನಾಚಿದ್ರು.

ಆ ಹೊತ್ತು ಹಗಲೊಡೆಯ ಹಣ್ಣಣ್ಣು ಮುದುಕನಾಗಿದ್ದ. ಅಶ್ವಥಕಟ್ಟೆ ಪಕ್ದಾಗೆ ಒಂದುಡ್ಗ ಎರಡ್ಕಯ್ಯೂ ಜೋಡಿಸ್ಕಂಡು, ಎರಡ್ಕಣ್ಣೂ ಮುಚ್ಕೊಂಡು ನಿಂತ್ಬುಟ್ಟಿದ್ದ. ಅವ್ನ ಕಂಕ್ಳಾಗಿದ್ದ ಇಸ್ಕೋಲ ಬ್ಯಾಗ್ನ ಹಿಡಿ ಆಂಜನಯ್ಯನ ಬಾಲದಂತೆ ನೇತಾಡ್ತಿತ್ತು. ಬಡ್ಡಿ ಶಂಕ್ರಪ್ಪ ಕಳ್ಳ ಬೆಕ್ಕಿನಂತೆ ಹೆಜ್ಜೆ ಹಾಕ್ತಾ, ಆ ಹುಡುಗ್ನ ಮುಖ ನೋಡ್ದ. ಮನೆ ಆಳು ದೊಡೆಂಕ್ಟನ ಮಗ ನಂಜ!! ಬಡ್ಡಿ ಶಂಕ್ರಪ್ಪ ನಿಂತಲ್ಲೇ ಥಕಥೈ ಕುಣಿದಿದ್ದ. ಕಟಾ ಕಟ್ನೆ ಹಲ್ಲಲ್ಲು ಕಡ್ಕಂಡು ಎಗರಿಸಿದ್ದೆ ಎಡ್ಗಾಲ್ನಲ್ಲಿ ಆ ಹುಡುಗ್ನ ಸೊಂಟಕ್ಕೆ ಒದ್ದ. ಆ ಹುಡ್ಗ ಬಾಳೆ ಮರ ಕಡ್ದಂಗೆ ಬಿದ್ದೋದ. ಅವ್ನ ಹಣೆ ಅಶ್ವಥಕಟ್ಟೆಗೆ ಬಡಿದು ರಕ್ತಾ ಚೆಲ್ಲಾಡ್ಹೋಯ್ತು. ಆ ಹುಡ್ಗ ಹುಲಿಗೆ ಯದರಿ ಓಡುವ ಜಿಂಕೆಯಂತೆ ಒಡ್ತಾ ಒಡ್ತಾ ಇರ್ಬೇಕಾದ್ರೆ ಅವ್ನ ಚಡ್ಡಿ ಉದ್ರೋಯ್ತು. ಅದ್ನ ಎತ್ಕಂಡು ಹಿಂದಿಕ್ಕಿರ್ಗಿ ನೋಡದೆ ಒಂದೇ ಉಸಿರ್ಗೆ ಹಟ್ಟಿ ಮುಟ್ಟಿದ್ದ.

ದೊಡೆಂಕ್ಟ ದನ, ಕರುಗಳ ಜೊತ್ಗೆ ಗುಟ್ಟೆ ಬೆಟ್ಟ ಸುತ್ತುತ್ತಿರುವಾಗ ಅವ್ನ ಮೆದುಳಿಗೆ ಅಶ್ವಥಕಟ್ಟೆಯ ನೆನಪು, ಆ ಋಷಿಯ ಮಹಿಮೆ ಅವಾಗವಾಗ ಸುಳೀತಿತ್ತು. ಅಲ್ಲೊಂದು ಮುತ್ತುಗದ ಗಿಡ ವೈಯಾರವಾಗಿ ವಾಲಾಡ್ತಿತ್ತು. ''ನಾವು ಪೂಜೆ ಮಾಡ್ಲಾಕಾಗಲ್ಲಾ, ಕಾಣ್ಕೆ ಕೊಡಕಾಗಲ್ಲಾ, ಪ್ರಸಾದ ಅಂಚೋ ಪುಣ್ಯಾತ್ಮರಿಗೆ ಈ ಎಲೆಗಳ್ನಾದ್ರೂ, ಕಿತ್ಕೊಂ ಡೋಗಿ ಕೊಟ್ಟು ದೇವ್ರ ಸೇವೆ ಮಾಡಾನ.'' ದೊಡೆಂಕ್ಟ ಅವ್ನಿಗೆ ಅವ್ನೆ ಮಾತಾಡ್ಕಂಡು ಜಲ್ದಿ, ಜಲ್ದಿ ಮುತ್ತುಗದ ಎಲೆಗಳ್ನ ಕಿತ್ಕಂಡು, ಅದ್ನ ಉಗಣಿ ಅಂಬ್ನಿಂದ ಕಟ್ಕಂಡು ದನ, ಕರುಗಳ್ನ ತಿರುವ್ಕಂಡು ಊರ್ಕಡೆ ಮುಖ ಮಾಡ್ದ.

ಊರ್ಬಾಗ್ಲಾಗೆ ಸಿಕ್ಕ ತಿಮ್ಮಕ್ಕ ''ಯಣ್ಣೋ, ಯಣ್ಣೋ ಯಾವನೋ ಕರ್ಕೊಟುಗನನ್ಮಗ ನಮ್ಮ ಗಿಣಿರಾಮನ್ನ ಒಡೆದ್ಬುಟ್ಟವ್ನೆ, ಅವ್ನ ಕೈ ಸೇದೋಗ, ಅವ್ನ ಕೈಗೆ ಕರೆ ನಾಗ್ರಾವು ಕಡಿಯಾ...'' ಬುಸ್ಗುಟ್ಟಿದ್ಲು. ದೊಡೆಂಕ್ಟನ ಎದೆ ಢಮ ಢಮ ಬಡ್ಕಂಡ್ತು, ಜೀವ ಹೋದಂಗಾಯ್ತು. ''ಯಾರಂತೆ ? ಯಾಕಂತೆ''? ತೊದಲ್ದ.

''ಆಕಾಶದ ತುಂಬಾ ಬಂಜೆ ಮೋಡಗಳು ತುಂಬಿ ತುಳ್ಕಾಡ್ತಿದ್ರೆ ಭೂಮಿಗೆ ಬಂದ ಭಾಗ್ಯ ಏನೇಳ್ಬೇಕ್ತೆ, ಅಂಗಾಯ್ತು ನಮ್ಮೂರ್ನ ಅಶ್ವಥಕಟ್ಟೆಯ ಕಥೆ. ಅದ್ರ ತಾವ ನಮ್ಮ ಗಿಣಿರಾಮ ಕೈಮುಕ್ಕಂಡು ನಿಂತಿದ್ನಂತೆ, ಯಾವನೋ ಅಲಾಲ್‌ಕೋರ ಹಿಂದ್ಗಡೆಯಿಂದ ಒದ್ನಂತೆ. ಹಣೆ ಅಶ್ವಥಕಟ್ಟೆಗೆ ಬಡಿದು ರಕ್ತ ಬಂದ್ಬುಟ್ಟದೆ, ಹಲ್ಕಾಕ್ಷ ಕಂದಮ್ನ ಹಿಂಗೆ ಒದೆಯಾಕೆ ಆ ದೇವ್ರಾದ್ರೂ, ಯಂಗೆ ಬುದ್ಧಿ ಕೊಡ್ತಾನೋ ? ಪಾಪ್ಗೇಡಿ ನನ್ಮಕ್ಳಿಗೆ...'' ತಿಮ್ಮಕ್ನ ಗಂಟ್ಲು ಗೊರ ಗೊರಗುಟ್ಟ ಮಾತುಗಳು ಸತ್ತೋದೊ.. ದೊಡೆಂಕ್ಟನ ಕೈ ಬೆರಳುಗಳು ತಂಥಾನೇ ಸಡಿಲಗೊಂಡಿದ್ದವು. ಪೆಂಡಿ ನೆಲ ಸೇರಿತ್ತು. ಅವ್ನು ಮುತ್ತುಗದ ಪೆಂಡಿ ಮೇಲೆ, 'ಥೂ ಥೂ ಥೂ'ಅಂತ ಮುರ್ಸಾತ್ರಿ ಉಗ್ದು ಹಿಂದಿಕ್ಕಿರ್ಗಿ ನೋಡದೆ ನಡೆದ.

ಶನಿವಾರ್ದ ದಿನ ಬೈಯ್ಗಾನ್ದಾಗೆ ಅಶ್ವಥಕಟ್ಟೆಯ ತುಂಬೆಲ್ಲಾ ಬಣ್ಣ ಬಣ್ಣದ ದೀಪಗಳು ಜಗಮಗಿಸ್ತಿದ್ದವು. ಪೂಜೆ, ಮಂಗ್ಳಾರ್ತಿ ಪ್ರಸಾದ ವಿನಿಯೋಗ ಸಡಗರ ಸಂಭ್ರಮದಿಂದ ನಡೆಯುತ್ತಿದ್ದವು. ಹರಿಕಥೆ ದಾಸರು ಕೈಯಾಗೆ ಚಿಟಕಿ ಹಿಡ್ಕಂಡು ''ಶ್ರೀಮದ್ ರಮಾರಮಣ ಗೋವಿಂದಾ..'' ಹೇಳಿದ್ರೂ ಜನ್ಗಳು ''ಗೋವಿಂದಾ'' ಅಂತ ಧ್ವನಿ ಸೇರಿಸಿದ್ರು.

ಇದ್ಕಿದ್ದಂಗೆ ಒಬ್ಬ ಮುಸುಕುಧಾರಿ ಅಶ್ವಥಕಟ್ಟೆ ಮೇಲಕ್ಕೆ ನೆಗೆದ್ಬುಟ್ಟಿದ್ದೆ, ಖಾಕಿಯ ನಿಜರೂಪ ತೋರಿಸ್ತಾ ಕೈ ಬೇಡಿನ ಆ ಋಷಿಯ ಮುಂದ್ಹಿಡ್ದ. ಸಿಳ್ಳೆ ಹಾಕ್ದ, ಎಲ್ಲಿದ್ನೋ ಇನ್ನೊಬ್ಬ ದಾಂಡಿಗ 'ದುಮುದುಮು' ಅಂತ ಬಂದೇ ಬಿಟ್ಟ . ಇಬ್ರೂ ಆ ಋಷಿಯನ್ನ ಹಿಡ್ಕಂಡ್ಬುಟ್ರು. ಒಬ್ಬ ಕೈಯಿ, ಕಾಲ್ನೂ ತಿರುಗಿಸ್ತಾ ಇಲ್ಕೇಳ್ರಿ, ನೀವೆಲ್ಲಾ ತಿಳ್ಕಂಡಿರುವಂಗೆ ಇವ್ನು ಋಷಿಯಲ್ಲಾ, ಇವ್ನು ಬೆಂಗ್ಳೂರ್ನಾಗೆ ಮಾಜಿ ಮಂತ್ರಿಗಳ ಮನೆಯಲ್ಲಿ ಅಡಿಗೆ ಕೆಲ್ಸ ಮಾಡ್ಕಂಡಿದ್ದ. ಒಂದಿನ ಆ ಮಾಜಿ ಮಂತ್ರಿಗಳ ಮುದ್ದು ಮಗಳ ಕಾಲಾಗ್ನ ಒಂದು ಬೆಳ್ಳಿ ಕಡಗ ಕದ್ಕಂಡು ಊರೇ ಬಿಟ್ಟಿಟ್ಟ. ಈ ಸುದ್ದಿ ದೊಡ್ಡ ದೊಡ್ಡ ಪತ್ರಿಕೆಗಳಲ್ಲಿ ಇನ್ನೊಂದ್ಕಾಲ ಕಡಗದ ಭಾವಚಿತ್ರದ ಸಮೇತ ಬಂದ್ಬುಡ್ತು. ಇತ್ತ ವಿರೋಧ ಪಕ್ಷದವರು ''ಒಬ್ಬ ಮಾಜಿ ಮಂತ್ರಿಗಳ ಮನೆಯಲ್ಲೇ ಈ ರೀತಿ ಕಳ್ತನವಾದ್ರೆ, ಇನ್ನಾ ಜನಸಾಮಾನ್ಯರ್ಗತಿಯಂಗೆ?'' ಅಂತ ವಿಧಾನಸಭೆಯಲ್ಲಿ ಕೋಲಾಹಲ ಎಬ್ಬಿಸಿ ಆಳುವ ಪಕ್ಷದವರನ್ನಾ ಥರಾಟೆಗೆ ತೆಗೆದುಕೊಂಡು ಸಭಾಪತಿಗಳ ಪೀಠದ ಮುಂದೆ ಧರಣಿ ನಡೆಸೇಬಿಟ್ರು. ಸರ್ಕಾರ ಹೇಳಿಕೆ ನೀಡಬೇಕೆಂದು ಪಟ್ಟು ಹಿಡಿದ್ಬುಟ್ರು. ಆಗ ಗೃಹಸಚಿವರು ''ಈ ಪ್ರಕರಣವನ್ನು ಉನ್ನತ ಪೊಲೀಸ್ ಅಧಿಕಾರಿಗಳಿಂದ ತನಿಖೆ ನಡೆಸಿ ಆದಷ್ಟು ಬೇಗನೆ ಅಪರಾಧಿಯನ್ನು ಬಂಧಿಸಲಾಗುವುದೆಂದು ಆಶ್ವಾಸನೆ ನೀಡಿದರು. ಮಾನ್ಯ ಮುಖ್ಯಮಂತ್ರಿಗಳು ನಮ್ಮ ದೊಡ್ಡ ದೊಡ್ಡ ಪೊಲೀಸ್ ಅಧಿಕಾರಿಗಳ ಸಭೆ ನಡೆಸಿ ಮಂಗ್ಳಾರ್ತಿ ಮಾಡಿದ್ರು. ಇವ್ನನ್ನ ಹಿಡಿಯಾಕಂತ್ಲೆ ನಮ್ಮ ಪೊಲೀಸ್ ಕಮೀಷನರ್‌ರವರು ನನ್ನನ್ನು ನೇಮಿಸಿದ್ರು. ಇವ್ನಿಗಾಗಿ ನಾನು ಮನೆ, ಮಟ, ಹೆಂಡ್ತಿ, ಮಕ್ಳನ್ನು ಬಿಟ್ಟು ಊರೂರು ಅಲಿತಾ ಇದ್ದೀನಿ. ಇಷ್ಟು ದಿನ್ದಿಂದ ನಮ್ಮ ಕಣ್ತಪ್ಪಿಸಿದ್ನಲ್ಲಾ ಈ ನನ್ಮಗಾ. ಅಲ್ಲ ಹೋಗಿ ಹೋಗಿ ಮುರ್ಕಾಸಿನ ಒಂಟಿ ಬೆಳ್ಳಿ ಕಡಗ ಕದ್ದವ್ನಲ್ಲಾ ಇನ್ನೇನು ಸಿಕ್ಲಿಲ್ವಾ ಇವುನ್ಗೆ ?'' ಬೈಯ್ಕಂಡು ಆ ಋಷಿಯ ಕೈಗೆ ಬೇಡಿ ತೊಡಿಸಿಯೇಬಿಟ್ರು.

ಜನ್ಗಳು ಬಿರುಗಾಳಿಯಂಗೆ ನುಗ್ಗಿ ಪೊಲೀಸ್‌ರವರನ್ನು ಚಚ್ಚಿ, ಹಣ್ಣುಗಾಯಿ, ನೀರುಗಾಯಿ ಮಾಡಿದ್ರು. ಕೈಬೇಡಿ ಅರಳಿಮರ್ದ ಕೊಂಬೆಯಲ್ಲಿ ನೇತಾಡಿತ್ತು. ಪೊಲೀಸ್‌ರವರು ಕೊಚ್ಚೆಗುಂಡಿಯಲ್ಲಿ ಒದ್ದಾಡ್ತಿದ್ರು. ಆ ಋಷಿ ಕತ್ಲಲ್ಲಿ ಕರ್ಗೋಗಿದ್ದ.

ಅಶ್ವಥಕಟ್ಟೆಯ ಬೇಲಿ ಆಚೆ ಒಬ್ಬ ಕುಡುಕ ನಿಂತ್ಕಳಕಾಗ್ದೆ ಕುಂತ್ಕಳಕಾಗ್ದೆ, ತಟ್ಟಾಡ್ತಾ, ತೂರಾಡ್ತಾ, ತೊದಲ್ತಾ ಬಡಬಡಿಸಿದ್ದೋನು ಅಶ್ವಥಕಟ್ಟೆ ಹತಿರ್ಕೆ ಬಂದು

''ಕುಡುಕನ ಮಾತ್ತೆಂದು  
ಕಡೆಗಣಿಸ ಬ್ಯಾಡಿರಿ  
ಕಿವಿಗೊಟ್ಟು ಕೇಳಿರಿ  
ನನ್ನಣ್ಣ ತಮ್ಮಂದಿರೇ  
ಆಕರ್ಷಣೆ ಆಡಂಬರ  
ಸದ್ದು, ಗದ್ದಲವಿಲ್ಲದ  
ದೇವರೆಲ್ಲಿಹನು ಧರೆಯ ಮೇಲೆ ?  
ಜನ ಮರುಳೋ ? ಜಾತ್ರೆ ಮರುಳೋ ?  
ಬಲ್ಲವರೇ ಹೇಳಿರಿ...''

ಕೈ ಮೇಲೆ ಕೈ ತಾಳ ಹಾಕ್ತ ಹಾಡಿದ್ದ.

ಅಲ್ಲಿದ್ದ ಜನ್ಗಳು ಒಬ್ರ ಮುಖ ಒಬ್ರು ನೋಡ್ಕಂಡಿದ್ರು. ನಾಯ್ಗಳು ಒಂದೇ ಸಮನೆ ರೋದಿಸ್ತಿದ್ದವು. ನಾಳೆಯ ಅರುಣೋದಯಕೆ ನೂರಾರು ಮನಸ್ಸುಗಳು ಆತಂಕಗೊಂಡಿದ್ದವು.

ಲಕ್ಷ್ಮಣ್  
ಹೆಚ್. ಕೆ. ಇ. ಸಂಸ್ಥೆಯ ಶ್ರೀ ವೀರೇಂದ್ರ ಪಾಟೀಲ  
ಪದವಿಪೂರ್ವ ಮಹಾವಿದ್ಯಾಲಯ, ಸದಾಶಿವನಗರ  
ಬೆಂಗಳೂರು - ೫೬೦ ೦೮೦

## ವ್ಯಕ್ತಿ - ಶಕ್ತಿ

ತಪ್ಪಿಲ್ಲ ಏನೂ  
ಬೆಳೆಯಬೇಕೆನ್ನುವುದರಲಿ  
ದೊಡ್ಡ ಶಕ್ತಿಯಾಗಿ

ಅದಕೂ ಮೊದಲು  
ಅವಶ್ಯ ಬೆಳೆಯಬೇಕಿದೆ  
ಒಬ್ಬ ವ್ಯಕ್ತಿಯಾಗಿ

ಅ. ನಾ. ರಾವ್ ಜಾದವ್  
ಬೆಂಗಳೂರು

# ಕೋಮು ದ್ವೇಷಕ್ಕೆ ಪರಿಹಾರವಿಲ್ಲವೆ?

**ಈ**ಚೆಗೆ ಮತ್ತೆ ಗುಜರಾತಿನಲ್ಲಿ ಹಬ್ಬಿದ ಕೋಮು ದಳ್ಳುರಿ, ಅವಕ್ಕೆ ಶಾಶ್ವತವಾದ ಪರಿಹಾರವಿಲ್ಲವೇ ಎಂದು ಮಾನವೀಯತೆಯಲ್ಲಿ ಪ್ರೀತಿಯಿರುವವರನ್ನು ಚುಚ್ಚಿ ಕೇಳುತ್ತಿರುವಂತೆ ತೋರುತ್ತಿದೆ.

ಈ ದೇಶದಲ್ಲಿ ಈವರೆಗೆ 'ಹಿಂದು' ಮತ್ತು 'ಮುಸ್ಲಿಂ' ಎಂಬ ಕೋಮು ನೆಲೆಯಲ್ಲಿ ನಡೆದ ಸಾವು ನೋವು ನಷ್ಟಗಳ ಲೆಕ್ಕವಾದರೂ ನಮ್ಮನ್ನು ದಿಗಿಲುಗೊಳಿಸಬೇಕಲ್ಲವೆ? ಅದನ್ನು ಸಂಪೂರ್ಣ ನಿರ್ನಾಮ ಮಾಡಬಲ್ಲ ದಾರಿಯನ್ನು ಹುಡುಕುವುದಕ್ಕೆ ಬಡಿದೆಬ್ಬಿಸಬೇಕಲ್ಲವೆ?

ಪ್ರತಿಯಾಗಿ ಇದು ರಾಷ್ಟ್ರ ಜೀವನದ 'ದೈನಂದಿನ ವ್ಯಾಪಾರ' ಎಂದು ನಿರಾತಂಕವಾಗಿ ನೋಡುತ್ತ ಕೂರುವ ಸ್ಥಿತಿಯಾಗಿಬಿಟ್ಟಿದೆಯಲ್ಲ!

'ಕೋಮು' ವಿಭಿನ್ನ ಧರ್ಮಗಳ ನಡುವಿನ ವೈರುಧ್ಯವನ್ನು ಸಂಕೇತಿಸುವ ಪರಿಭಾಷೆಯಂತೆ ಬಳಕೆಯಾಗುತ್ತಿದೆ. ವಿಚಿತ್ರವೆಂದರೆ ಈ ವೈರುಧ್ಯಕ್ಕೆ ಗಹನವಾದ ಅರ್ಥವೇ ಇಲ್ಲ. ಏಕೆಂದರೆ ಪರಸ್ಪರ ಮುಖಾಮುಖಿಯಾಗುವ ಈ ಧರ್ಮಗಳು 'ಆಸ್ತಿಕತೆ' ಎಂಬ ಒಂದೇ ನೆಲಗಟ್ಟಿನ ಮೇಲೆ ನಿಂತಿವೆ. ಹಾಗಾಗಿ ಇದು ಆಸ್ತಿಕರ ನಡುವಿನ ವೈರುಧ್ಯ, ವೈಷಮ್ಯ ಮತ್ತು ಸಂಘರ್ಷ. ಧರ್ಮ-ದೇವರುಗಳ ವಿಷಯವನ್ನು ದೇವರ ಕೋಣೆಗಳಿಗೆ ಮಾತ್ರ ಮೀಸಲಿಡಿ; ಅವನ್ನು ಬೀದಿಗೆ ತರಬೇಡಿ; ಸಾಮಾಜಿಕ, ರಾಜಕೀಯ ಜೀವನದಲ್ಲಿ ಬೆರೆಸಬೇಡಿ ಎಂದು ಕಾಳಜಿಯಿರುವವರು ಗಂಟಲು ಹರಿದುಕೊಳ್ಳುತ್ತಿರುವುದೇ ಈ ಹಿನ್ನೆಲೆಯಲ್ಲಿ.

ನಿಜವಾಗಿ ನೋಡಿದರೆ ಇಂದಿನ ಜಗತ್ತಿನ ಗತಿಶೀಲತೆಯ ಲಕ್ಷಣ ಆಸ್ತಿಕತೆಗಳ ನಡುವಿನ ಸಂಘರ್ಷದಲ್ಲಿ ಅಲ್ಲ, ಆಸ್ತಿಕತೆ-ನಾಸ್ತಿಕತೆಗಳ ನಡುವಿನ ವೈರುಧ್ಯ ಮತ್ತು ಹೋರಾಟದಲ್ಲಿದೆ. ಆಸ್ತಿಕತೆಗಳ ನಡುವಿನ ಸಂಘರ್ಷಗಳಿಂದ ಆಯಾ ಧರ್ಮಗಳ ಬಡವರಿಗೆ ಎಳ್ಳಷ್ಟೂ ಪ್ರಯೋಜನವಾಗಲಾರದು. ಪ್ರತಿಯಾಗಿ ಅವರನ್ನು ನಿರಂತರವಾಗಿ ಶೋಷಿಸುತ್ತಿರುವ ವರ್ಗಗಳಿಗೆ ಲಾಭವಾಗುತ್ತದೆ. ಬಡತನ, ನಿರುದ್ಯೋಗ, ಹಸಿವು, ದಾರಿದ್ರ್ಯದಂಥ ಮೂಲಭೂತ ಸಮಸ್ಯೆಗಳ ವಿರುದ್ಧ ಹೋರಾಡಬೇಕಿದ್ದ ಬಡ ಜನತೆಯ ಅದಮ್ಯ ಚೈತನ್ಯಶೀಲತೆಯನ್ನು ನಿರರ್ಥಕವಾದ ಕೋಮು ಸಂಘರ್ಷದಲ್ಲಿ ತೊಡಗಿಸುತ್ತಿರುವಲ್ಲಿ ಖಂಡಿತವಾಗಿ ಬಲಪಂಥೀಯ ರಾಜಕೀಯ ಕುತಂತ್ರವಿದೆ.

ಇದು ಒಂದೆಡೆ ಹಿಂದೂ ಕೋಮುವಾದದ ಹೆಸರಿನಲ್ಲಿ 'ರಾಮ ಜನ್ಮಭೂಮಿ' ಮತ್ತು 'ಮಂದಿರ ನಿರ್ಮಾಣ'ದಂಥ ಭಾವನಾತ್ಮಕ, ಮತೀಯವಾದ ಮತ್ತು ಸೂಕ್ಷ್ಮವಾದ ಸಂಗತಿಗಳನ್ನು ಎತ್ತಿಕೊಳ್ಳುತ್ತದೆ. ಕೇಂದ್ರದಲ್ಲಿ ತನ್ನ ಪಕ್ಷದ ನೇತೃತ್ವದ ಅಧಿಕಾರವಿರುವಾಗಲೂ ಕೂಡ 'ವಿಶ್ವ ಹಿಂದೂ ಪರಿಷತ್' ಅದರ ಮಾತು ಕೇಳದೆ 'ಹಟ' ಹಿಡಿದಿದೆ. (ಅಥವಾ ಅಂಥ ನಾಟಕವಾಡಲಾಗುತ್ತಿದೆಯೋ?) ಈಚೆ ನಡೆದ ವಿಧಾನಸಭೆಗಳ ಚುನಾವಣೆಗಳ ಫಲಿತಾಂಶ ತಮಗೆ ವಿರುದ್ಧವಾಗಿರುವುದನ್ನು ತಿಳಿದು ಈ ಶಕ್ತಿ ಬುದ್ಧಿ ಕಲಿಯಬೇಕಿತ್ತು.

**ಕೋಮುವಾದಿಗಳ ಬಲಪಂಥೀಯತೆಗೂ ಮತ್ತು ಪ್ರತಿಗಾಮಿತ್ವಕ್ಕೂ ಗಾಢ ನಂಟಿದೆ. ಕ್ರೂರ ವ್ಯವಸ್ಥೆಯ ಸಂರಕ್ಷಣೆಗೆ ಕಂಕಣ ಬದ್ಧವಾಗಿರುವ ಈ ವಾದ ಜನತೆಯ ದಿಕ್ಕು ತಪ್ಪಿಸುತ್ತದೆ. ಪ್ರಯೋಜನವಿಲ್ಲದ ಕಿತ್ತಾಟಗಳಲ್ಲಿ ಜನ ಸಮುದಾಯಗಳು ತೊಡಗಿಕೊಂಡಿರುವಂತೆ ಮಾಡಲು ಸತತವಾಗಿ ಕ್ರಿಯಾಶೀಲವಾಗಿರುತ್ತವೆ.**

ಇನ್ನೊಂದೆಡೆ 'ಮುಸ್ಲಿಂ' ಕೋಮುವಾದ ಕಾಶ್ಮೀರ ಸಮಸ್ಯೆಯ ಆಧಾರದಲ್ಲಿ ಮತ್ತು ಕಾಲು ಕೆದರುತ್ತಿರುವ ಹಿಂದೂ ಕೋಮುವಾದಿಗಳ ಒತ್ತಡದಲ್ಲಿ ಕ್ರಿಯಾಶೀಲವಾಗಿದೆ. ವಿಶ್ವ ಹಿಂದೂ ಪರಿಷತ್, ಬಿ.ಜೆ.ಪಿ. ಬಜರಂಗದಳ ಮೊದಲಾದ ನೂರಾರು ಸಂಘಟನೆಗಳ ಈ ಗುಂಪಿಗೆ ಒಂದು ತಾತ್ವಿಕತೆ ಇದೆ. ಅದು ಆರ್.ಎಸ್.ಎಸ್. ಪ್ರಚಾರ ಮಾಡುವ 'ಚಿಂತನ ಗಂಗಾ'ದಲ್ಲಿ ಹೆಪ್ಪುಗಟ್ಟಿದೆ. ಅದು ಕಟ್ಟಿಕೊಳ್ಳುವ ಚರಿತ್ರೆಯಲ್ಲಿ ಮುಸ್ಲಿಮ್, ಕ್ರಿಶ್ಚಿಯನ್ ಮತ್ತು ಕಮ್ಯುನಿಸ್ಟರು ವೈರಿಗಳೆಂದು ಗುರುತಿಸುತ್ತದೆ. ಅದಕ್ಕೆ ಭಾರತದ ಬಡತನ, ದಾರಿದ್ರ್ಯ, ಅತಿ ಶ್ರೀಮಂತಿಕೆ, ಶೋಷಣೆ ಇವಾವೂ ಚರ್ಚೆಯ ವಿಷಯಗಳೇ ಅಲ್ಲ. ಅದೆಲ್ಲಕ್ಕೆ ಅವರವರ ಹಣೇ ಬರಹವೇ ಕಾರಣವೆಂಬ ಉಡಾಫೆ ಉತ್ತರ. ಹುಸಿ ರಾಷ್ಟ್ರ ಪ್ರೇಮದ ವಿಷವನ್ನು ಎಳೆತನದಿಂದಲೇ ಬಿತ್ತಿ, ಅರೆ ಸೈನಿಕ ತರಬೇತು ನೀಡಿ, ಶಿಸ್ತು ಕಲಿಸುವ ನೆಪದಲ್ಲಿ ಸಾವಿರಾರು ಕಾರ್ಯಕರ್ತರನ್ನು ಹುಟ್ಟಿಸಿ ಸನಾತನ ವೈದಿಕಶಾಹಿಯನ್ನು ಭದ್ರಗೊಳಿಸುತ್ತಿದೆ. ಇದು ಅದರ ಏಕಮುಖೀ ಸಾಂಸ್ಕೃತಿಕ ಯಜಮಾನಿಕೆ. ಈಚೆಗೆ ಪಥ ಸಂಚಲನಗಳ ನಾಟಕವೂ ವ್ಯವಸ್ಥಿತವಾಗಿ ನಡೆದು ಮಾಧ್ಯಮಗಳಲ್ಲಿ ಸಾಕಷ್ಟು ಪ್ರಚಾರ ಗಿಟ್ಟಿಸಿತು. ಇದರ ನಿಜ ಮುಖವಾಡವನ್ನು ತಿಳಿಯದ ಜನ ಮರುಳರಾದರು.

'ಚಿಂತನಗಂಗಾ'ದ ಚಾರಿತ್ರಿಕ ದೃಷ್ಟಿಕೋನ ಮತ್ತು ತಾತ್ವಿಕತೆಗಳ ಕುರಿತು ಸಾಕಷ್ಟು ಚರ್ಚೆ ಆಗಿವೆ. ಅದರಲ್ಲಿ ಯಾವ ತರ್ಕವೂ ಇಲ್ಲ. ಹುರುಳೂ ಇಲ್ಲ ಎಂದು ವಿದ್ವಾಂಸರು ಸಾಬೀತುಮಾಡಿದ್ದಾರೆ. ಇಷ್ಟೆಲ್ಲ ಆದರೂ ಪ್ರಜಾಪ್ರಭುತ್ವದ ಮೂಲ ಮಾತೃಕೆಯಂತಿರುವ ಜನಸಾಮಾನ್ಯರನ್ನು ಎಚ್ಚರಗೊಳಿಸುವ ಪ್ರಯತ್ನ ನಿರಂತರವಾಗಿ ನಡೆಯಬೇಕಿದೆ.

ಯಾವ 'ತಾತ್ವಿಕತೆಯ' ಮೂಲಕ ಜನರನ್ನು ನಾವು ತಲುಪಬೇಕಿದೆ? ವೈಜ್ಞಾನಿಕವಾದ, ಪ್ರಗತಿಪರವಾದ ಮತ್ತು ಇಡೀ ಮಾನವ ಕುಲದ ಏಳ್ಗೆಗೆ ಸಂಬಂಧಪಟ್ಟ ಅಂಥ ತಾತ್ವಿಕತೆಯಾದರೂ ಯಾವುದು? ಈ ಕುರಿತು ಗಂಭೀರವಾದ ಚಿಂತನೆ ಪ್ರಾರಂಭವಾಗಬೇಕಿದೆ. ಏಕೆಂದರೆ ಇಂದು ಭಾರತದ ಪ್ರಗತಿಗೆ ಪ್ರೇರಕವಾಗಬಲ್ಲ ಹಲವಾರು 'ಚಿಂತನೆಗಳು' ಚಾಲ್ತಿಯಲ್ಲಿರುವುದರಿಂದ ಮತ್ತು ಹಲವಾರು ಮಾರ್ಗಗಳು ರೂಪುಗೊಂಡಿರುವುದರಿಂದ, ಸಮಗ್ರ ಕಣ್ಣೋಟವನ್ನು ನೀಡಬಲ್ಲ, ಎಲ್ಲ ಸಮಸ್ಯೆಗಳಿಗೂ ಸಮಾಧಾನದ ಮತ್ತು ಸರಿಯಾದ ಉತ್ತರ ನೀಡಬಲ್ಲ ತಾತ್ವಿಕತೆಯನ್ನು ಒಪ್ಪಿಕೊಳ್ಳಬೇಕಾಗುತ್ತದೆ, ಅಪ್ಪಿಕೊಳ್ಳಬೇಕಾಗುತ್ತದೆ.

ಕೋಮುವಾದಿಗಳ ಬಲಪಂಥೀಯತೆಗೂ ಮತ್ತು ಪ್ರತಿಗಾಮಿತ್ವಕ್ಕೂ ಗಾಢ ನಂಟಿದೆ. ಕ್ರೂರ ವ್ಯವಸ್ಥೆಯ ಸಂರಕ್ಷಣೆಗೆ ಕಂಕಣಬದ್ಧವಾಗಿರುವ ಈ ವಾದ ಜನತೆಯ ದಿಕ್ಕು ತಪ್ಪಿಸುತ್ತದೆ. ಪ್ರಯೋಜನವಿಲ್ಲದ ಕಿತ್ತಾಟಗಳಲ್ಲಿ ಜನಸಮುದಾಯಗಳು ತೊಡಗಿಕೊಂಡಿರುವಂತೆ ಮಾಡಲು ಸತತವಾಗಿ ಕ್ರಿಯಾಶೀಲವಾಗಿರುತ್ತವೆ. ಇಂಥ ದುಷ್ಟ ಶಕ್ತಿಗಳ ವಿರುದ್ಧದ ಹೋರಾಟ ಎಷ್ಟು ಶಕ್ತಿಯುತವಾಗಿದ್ದರೂ ಸಾಲದು. ಪ್ರಗತಿಪರರು ಮತ್ತು ಮಾನವೀಯತೆಯಲ್ಲಿ ಕಾಳಜಿಯಿರುವವರು ತಮ್ಮಲ್ಲೆಷ್ಟೇ ಭಿನ್ನಾಭಿಪ್ರಾಯಗಳಿದ್ದರೂ ಅವನ್ನು ಬದಿಗಿಟ್ಟು ಇಂಥ ಜ್ವಲಂತ ಸಮಸ್ಯೆಗಳ ವಿರುದ್ಧದ ಹೋರಾಟದಲ್ಲಿ ಸಕ್ರಿಯರಾಗಬೇಕಾಗುತ್ತದೆ. ಇಲ್ಲದಿದ್ದರೆ ಇತಿಹಾಸ ದೆದುರು ನಾವು ಅಕ್ಷಮ್ಯರಾಗುತ್ತೇವೆ.

ಕೋಮುವಾದದ ವಿರುದ್ಧದ ಹೋರಾಟಕ್ಕೆ ನಾವು ಸೈದ್ಧಾಂತಿಕವಾಗಿ ಸಿದ್ಧರಾಗುವಲ್ಲಿ ಯಾವ ವಿವಾದಗಳೂ ಹುಟ್ಟಲಾರವೆನಿಸುತ್ತವೆ. ಏಕೆಂದರೆ 'ಮಿತ್ರರ' ನಡುವಿನ ತಾತ್ವಿಕ ಕಿತ್ತಾಟಗಳಲ್ಲಿ ಈ ಸಂಗತಿ ವಿವಾದಾತೀತವಾಗಿದೆ. ಅಂದರೆ 'ಆಸ್ತಿಕತೆ'ಯ ವಿರುದ್ಧದ ಹೋರಾಟದಲ್ಲಿ ನಾವೆಲ್ಲ ವೈಜ್ಞಾನಿಕ ಮನೋಭಾವದ ಪರವಾಗಿಯೇ ಇದ್ದೇವೆ. ಆಸ್ತಿಕತೆಯ ವಿರುದ್ಧದ ಹೋರಾಟವೆಂದರೇನು? ಇದು ಆಸ್ತಿಕರ ವಿರುದ್ಧದ ಹೋರಾಟವಲ್ಲ. ಈ ಅಂಶವನ್ನು ಮುಖ್ಯವಾಗಿ ಗಮನಿಸಬೇಕು. ಇದು ಆಸ್ತಿಕರಲ್ಲಿರುವ ಮೌಢ್ಯಗಳ ವಿರುದ್ಧದ ಹೋರಾಟ; ಆಸ್ತಿಕರಲ್ಲಿರುವ ದೈವೀ ನಂಬಿಕೆಯನ್ನು ದುರ್ಬಳಕೆ ಮಾಡಿಕೊಳ್ಳುತ್ತಿರುವ ಕುಹಕ ರಾಜಕಾರಣದ ವಿರುದ್ಧ ಹೋರಾಟ. ಈ ಬಲಪಂಥೀಯ ರಾಜಕೀಯ ಶಕ್ತಿ ಅಧಿಕಾರ ಗದ್ದುಗೆ ಹಿಡಿಯಲು ಅಡಿಪಾಯ ಮಾಡಿಕೊಂಡಿರುವುದೇ ಆಸ್ತಿಕತೆಯನ್ನು.

ದೇವರುಗಳನ್ನು ಸಂಶೋಧನೆಯ ವಸ್ತುಗಳನ್ನಾಗಿ ಮಾಡಿಕೊಂಡು ದೇವಿಪ್ರಸಾದ ಚಟ್ಟೋಪಾಧ್ಯಾಯ, ಡಿ. ಡಿ. ಕೋಸಾಂಬಿ ಅವರಂಥ ತತ್ವವೇತ್ತರು ಮತ್ತು ಚರಿತ್ರಕಾರರು ಅದ್ಭುತವಾದ ಸಂಗತಿಗಳನ್ನು ಹೊರಹಾಕಿದ್ದಾರೆ. ನಮ್ಮ ದೇಶದ ಜನಸಾಮಾನ್ಯರ ಸಂಸ್ಕೃತಿಯ ಶೋಧದಲ್ಲಿ ಈ ಪ್ರಯತ್ನಗಳ ಮಹತ್ವ ಅತ್ಯಪಾರವಾದುದೆಂದು ತೋರಿಸಿದ್ದಾರೆ. ಈ ಅರ್ಥದಲ್ಲಿ

ಎಸ್. ಎಸ್. ಹಿರೇಮಠ

ಮುಂದಿನ ಪುಟಕ್ಕೆ

# ಮೂಷಕ ಜ್ವರ

**ಹೋ**ದ ವರ್ಷ ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಭಾಗ ಗಳಲ್ಲಿ ಮೂಷಕ ಜ್ವರ ಕಂಡು ಹಾಹಾಕಾರ ಎಬ್ಬಿಸಿತ್ತು. ಮತ್ತೆ ಈ ವರ್ಷ ಅದು ತಲೆ ಎತ್ತಿದೆ. ತೀರ್ಥಹಳ್ಳಿ ಹಾಗೂ ಸುತ್ತಲಿನ ಗ್ರಾಮಗಳಲ್ಲಿ ಮೂಷಕ ಜ್ವರ ಕಂಡಿದೆ. ಅದ ರಿಂದ ಇಬ್ಬರು ಮರಣ ಹೊಂದಿರುವುದೂ ನಿಜವಂತೆ.

ಇಲ್ಲಿಯವರೆಗೆ ಈ ಜ್ವರವು ಅಂಡಮಾನ ಮತ್ತು ನಿಕೋಬಾರ ದ್ವೀಪಗಳಲ್ಲಿ ಕಾಣುತ್ತಿತ್ತು. ನಂತರ ಗುಜರಾತಿನಲ್ಲಿ, ಕೇರಳ ರಾಜ್ಯದಲ್ಲಿ, ತಮಿಳುನಾಡಿನಲ್ಲಿ ಮೂಷಕ ಜ್ವರವು ಕಾಣಿಸಿಕೊಂಡು ಮರೆಯಾಗುತ್ತಿತ್ತು. ಹೋದ ವರ್ಷ ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಕಂಡು ಹಲವು ಜೀವ ಗಳನ್ನು ಹರಣಮಾಡಿತ್ತು. ಈ ವರ್ಷ ಅದು ತೀರ್ಥಹಳ್ಳಿಯ ಸುತ್ತಲೂ ಹರಡಿದೆಯಂತೆ. ಅಲ್ಲಿಯ ವೈದ್ಯರು ರೋಗವನ್ನು ಸಂಶಯಪಟ್ಟು ತಪಾಸಣೆ ಮಾಡಿಸಿ ಇಂಥದೇ ರೋಗ ಎಂದು ಖಚಿತಪಡಿಸಿದ್ದಾರೆ. ಆದರೆ ಈ ರೋಗದ ಲಕ್ಷಣ ಗಳನ್ನು ಹೋಲುವ ಬೇರೆ ರೋಗಗಳನ್ನೂ ನಾವು ಮೂಷಕ ಜ್ವರವೆಂದೇ ಹೇಳುತ್ತೇವೆ. ಇದೇ ರೋಗ ತಮ್ಮ ಲಕ್ಷಣಗಳನ್ನು ಸ್ವಲ್ಪ ಬದಲಿಸಿದರೆ ಅದು ಮೂಷಕ ಜ್ವರವಲ್ಲ ಎಂದು ಹೇಳುತ್ತೇವೆ. ಭಾರತೀಯ ವೈದ್ಯ ಹಾಗೂ ಭಾರತೀಯ ವೈದ್ಯಕೀಯ ಶಾಸ್ತ್ರ ಇನ್ನೂ ಇದನ್ನು ಸಾಧಿಸಿಲ್ಲ. ನಮ್ಮ ಅಂಕಿ ಸಂಖ್ಯೆಗಳು ಇಂದಿಗೂ ಅಂದಾಜಿನ ನೆರಳಲ್ಲೇ ನಿಲ್ಲಬೇಕಾಗಿದೆ. ನಾವು ಇದನ್ನು ಮುಚ್ಚಿಕೊಳ್ಳಲು ಕೊಡುವ ಕಾರಣಗಳು ಹಲವು. ಆದರೆ ಅವುಗಳಲ್ಲಿ ಸತ್ಯವಿಲ್ಲ. ಅಧಿಕಾರಿಗಳು ಜಾಸ್ತಿ ದಕ್ಷರಾಗಬೇಕು. ಜಾಸ್ತಿ ನಿಷ್ಠೆಯಿಂದ ಕಾರ್ಯ ಮಾಡಬೇಕು.

**ಏನಿದು ಮೂಷಕ ಜ್ವರ ?**

ಮೂಷಕ ಜ್ವರ ಒಂದು ಪ್ರಕಾರದ ಸೋಂಕು ರೋಗ, ಇದರ ಕಾರಣ ಒಂದು ಬ್ಯಾಕ್ಟೀರಿಯಾ. ಅದರ ಹೆಸರು ಲೆಪ್ಟೋಸ್ಪೈರಾ ಇಕ್ಟೆರೋ ಹೆಮೋರೆಜಿಯಾ ಎಂದು. ಇದು ಸಾಮಾನ್ಯವಾಗಿ ಇಲಿಗಳ ಮೂತ್ರಪಿಂಡದಲ್ಲಿ ತಳವೂರಿ ಕೀವು ಹುಟ್ಟಿಸುವುದು. ಅಲ್ಲಿ ಕುಳಿತು ತನ್ನ ವಂಶದ ಅಭಿವೃದ್ಧಿಯನ್ನು ಮಾಡುವುದು. ಇಲಿಯ ಮೂತ್ರದಲ್ಲಿಂದ ಈ ಜೀವಿಗಳು ಹೊರಬರುತ್ತವೆ. ಹೊರಬಂದ ಈ ಬ್ಯಾಕ್ಟೀರಿಯಾಗಳು ಕೆಲವು ಕಾಲದವರೆಗೆ ನೀರಿನಲ್ಲಿ ಹಾಗೂ ಜವಳು ಪ್ರದೇಶದಲ್ಲಿ ಜೀವಿಸಿರುತ್ತವೆ. ಈ ಜೀವಿಗಳಿಂದ ಕಶ್ಮಲ ಗೊಂಡ ನೀರಿನಲ್ಲಿ ಯಾರಾದರೂ ಕೈಕಾಲು ಅದ್ದಿದರೆ, ಅಂಥ ಕೊಳಚೆ ನೀರಿನಲ್ಲಿ ಚಲಿಸಿದರೆ ಸಾಕು, ರೋಗದ ಸೋಂಕು ತಗಲುತ್ತದೆ. ನೀರಿನಲ್ಲಿಯ ರೋಗಾಣುಗಳು ಹೊಸ ವ್ಯಕ್ತಿಯನ್ನು ಹುಡುಕುತ್ತಲೇ ಇರುತ್ತವೆ. ಹೊಸ ವ್ಯಕ್ತಿಯ ಸುಳಿವು ಸಿಕ್ಕರೆ ಸಾಕು, ಅವು ವ್ಯಕ್ತಿಯ ತ್ವಚೆಗೆ ಅಂಟಿಕೊಂಡು ಬಿಡುತ್ತವೆ. ತ್ವಚೆಯಲ್ಲಿ ರಂಧ್ರ ಕೊರೆದು ರಕ್ತದಲ್ಲಿ ಸೇರಿಕೊಳ್ಳುತ್ತವೆ. ಒಂದು ಸಲ ರಕ್ತ ಸೇರಿದರೆ ಅವು ದೇಹದ ಎಲ್ಲ ಅಂಗಾಂಗಗಳನ್ನು ತಲುಪಿದಂತೆಯೇ ಸರಿ. ಒಂದೊಂದು ಅಂಗಾಂಗದಲ್ಲಿ ಈ ರೋಗಾಣು ಸೇರಿ ಆ ಅಂಗಾಂಗದಲ್ಲಿ ಉರಿಯಾತನೆ ತರುತ್ತವೆ. ಆಯಾ ಅಂಗಾಂಗದ ಕಾರ್ಯದಲ್ಲಿ ಅಡೆತಡೆ ಬಂದು ರೋಗ ಲಕ್ಷಣಗಳು ಪ್ರಕಟವಾಗುವುವು. ಒಂದೊಂದು ಸಲ ರೋಗ ಪ್ರಸಾರವು ಕಶ್ಮಲ ನೀರು ಸೇವಿಸುವುದರಿಂದಲೂ ಜರುಗಬಹುದು.

**ರೋಗ ಲಕ್ಷಣಗಳು**

ರೋಗಿಯಲ್ಲಿ ವಿಪರೀತ ಜ್ವರ ಕಾಣುತ್ತದೆ. ಕಣ್ಣು ಕೆಂಪಗಾಗಿ ಉರುಪು ಬರುತ್ತದೆ. ಮೂತ್ರಪಿಂಡದಲ್ಲಿಯ ಕೊಳೆಯುವಿಕೆಯಿಂದ ಮೂತ್ರದಲ್ಲಿ ರಕ್ತ ಕಾಣುವುದು. ತ್ವಚೆಯಲ್ಲಿ ರಕ್ತ ವಸರುವ ಕಲೆಗಳು ಮೂಡುವುವು. ಯಕೃತ್ತಿನಲ್ಲಿ ಕೊಳೆಯುವಿಕೆ ಹಾಗೂ ಉರಿಯಾತನೆಯಿಂದ ಕಾಮಾಲೆ, ಇತರ ಸ್ನಾಯುಗಳಲ್ಲಿ ಕೊಳೆತ ಕಂಡು ವಿಪರೀತ ನೋವು ಬರುವುದು. ಮೆದುಳುರಿತದ ಲಕ್ಷಣಗಳೂ ತೋರಬಹುದು. ರೋಗದಿಂದ ಮರಣಿಸುವವರ ಸಂಖ್ಯೆ ಕನಿಷ್ಠ ಎಂದರೂ ಪ್ರತಿಶತ ೧೫ರಷ್ಟಿರುವುದು. ಪುಪ್ಪುಸದಲ್ಲಿ ರಕ್ತ ವಸರಿ ನ್ಯೂಮೋನಿಯಾ ಪ್ರಕಟವಾಗಿ ವ್ಯಕ್ತಿಗಳು ಮರಣ ಹೊಂದುವುದು ಸಹಜ.

ರೋಗ ಉಪಚಾರ ಇಂದು ಸುಲಭವಾಗಿದೆ. ಹಲವಾರು ಮದ್ದುಗಳಿವೆ.


**ಡಾ|| ಸ. ಜ. ನಾಗಲೋಟಮಠ**

ವೈದ್ಯಕೀಯ ನಿರ್ದೇಶಕರು, ಬ.ವಿ.ವ. ಸಂಘ, ಬಾಗಲಕೋಟೆ - ೫೮೭ ೧೦೧


---

*ಹಿಂದಿನ ಪುಟದಿಂದ*

ನಾವು ಶಿವರಾಮ ಕಾರಂತರಂತೆ ನಾಸ್ತಿಕರಾಗಬೇಕು. ಆರಾಧನೆಯ ಪ್ರವೃತ್ತಿ ದೇಶದ ಪ್ರಗತಿಗೆ ಕಂಟಕಪ್ರಾಯವಾದುದು; ಸಂಶೋಧನಾ ಪ್ರವೃತ್ತಿ ಸಮಸ್ಯೆಗಳ ಶೋಧನೆಗೆ ಮತ್ತು ಪರಿಹಾರಕ್ಕೆ ಕಾರಣವಾಗುತ್ತದೆ. ಆರಾಧನಾ ಪ್ರವೃತ್ತಿ ನಮ್ಮನ್ನು ಸಂಕುಚಿತ ಮನೋಭಾವದವರನ್ನಾಗಿಸುತ್ತದೆ; ಇತರರನ್ನು ಸಂಶಯಿಸುವಂತೆ ಪ್ರೇರೇಪಿಸುತ್ತದೆ, ಮತಾಂಧತೆಯನ್ನು ಪೋಷಿಸುತ್ತದೆ.

ಪ್ರಾಕೃತಿಕ ವಿಜ್ಞಾನಗಳ (ಭೌತಶಾಸ್ತ್ರ, ರಸಾಯನ ಶಾಸ್ತ್ರ, ಜೀವಶಾಸ್ತ್ರ ಮುಂತಾಗಿ) ತಿಳುವಳಿಕೆಯನ್ನು ಸಾಮಾಜಿಕ ಸಮಸ್ಯೆಗಳ ಪರಿಹಾರಕ್ಕೂ ಬಳಸಿಕೊಳ್ಳ ಬಹುದೆಂದು ಶತಮಾನಗಳ ಹಿಂದಿನಿಂದಲೂ ವಿದ್ವಾಂಸರು ಸಾಧಿಸಿ ತೋರಿಸುತ್ತಿದ್ದಾರೆ. ಇದನ್ನೇ 'ವೈಜ್ಞಾನಿಕ ಮನೋಭಾವ'ವೆಂದು ಹೇಳುವುದು. ಉದಾಹರಣೆಗೆ – ವಸ್ತು ಮತ್ತು ಚೈತನ್ಯಗಳ (mass and energy) ಸಂಬಂಧವನ್ನು $E=Mc^2$ ಸೂತ್ರದ ಮೂಲಕ ಐನ್‌ಸ್ಟೈನ್ ಖಚಿತಗೊಳಿಸಿದ ನಂತರ ದೈವ ಸಂಬಂಧಿ ಸಾಮಾಜಿಕ ಸಮಸ್ಯೆಗಳಿಗೆ ಪರೋಕ್ಷವಾದ ಪರಿಹಾರ ದಕ್ಕಿತು. ವಸ್ತುವನ್ನು ಬಿಟ್ಟು ಶಕ್ತಿಯಿಲ್ಲ, ಶಕ್ತಿಯನ್ನು ಬಿಟ್ಟು ವಸ್ತುವಿಲ್ಲ; ವಸ್ತುವೇ ಚೈತನ್ಯವಾಗುತ್ತದೆ, ಚೈತನ್ಯವೇ ವಸ್ತುವಾಗುತ್ತದೆ ಎಂಬ ಈ ಭೌತಶಾಸ್ತ್ರೀಯ ಗ್ರಹಿಕೆ ದೇವರೆಂಬ 'ಶಕ್ತಿ'ಯ ಬಗೆಗಿನ ಗೊಂದಲಕ್ಕೆ ಪರಿಹಾರ ನೀಡಿತು. ಜಗತ್ತಿನ ಎಲ್ಲ ಧರ್ಮಗಳ ಸಾಮಾನ್ಯ ತಿಳಿವಳಿಕೆ ಏನೆಂದರೆ ವಸ್ತು ಪ್ರಪಂಚವನ್ನೆಲ್ಲ ಹುಟ್ಟಿಸಿದ ಪ್ರತ್ಯೇಕವಾದ ದೊಡ್ಡ 'ಶಕ್ತಿ'ಯೊಂದಿದೆ ಎಂಬುದು. ಹೀಗೆ ಹೇಳಿದ ಈ ಎಲ್ಲ ಧರ್ಮಗಳು ಹುಟ್ಟಿದ ಕಾಲವಾದರೂ ಯಾವುದು ? ಆ ಕಾಲದ ವೈಜ್ಞಾನಿಕ ತಿಳುವಳಿಕೆಯ ಪರಿಮಿತಿಯಿಂದಾಗಿಯೇ ಅಲ್ಲವೇ ಅಂಥ ಕಲ್ಪನೆಯನ್ನು ಅವು ಬೆಳೆಸಿಕೊಂಡದ್ದು ? ಆದರೆ ಆ ಕಾಲದಲ್ಲೇ ದೇವರ ಅಸ್ತಿತ್ವವನ್ನು ಸಂಶಯಿಸಿದ ದೊಡ್ಡ ದೊಡ್ಡ ತತ್ವಜ್ಞಾನಿಗಳು ಭಾರತ, ಗ್ರೀಸ್, ಚೀನ ಮುಂತಾದ ಪ್ರಾಚೀನ ನಾಗರಿಕ ದೇಶಗಳಲ್ಲಿ ದ್ದರು. ಇವರು ಜನತೆಯ ಪರವಾಗಿ ನಿಂತವರು.

ಆದರೆ ಇಂದು ವಿಜ್ಞಾನ ಮತ್ತು ತಂತ್ರಜ್ಞಾನಗಳ ಅಪರಿಮಿತ ಶೋಧನೆಗಳು ಮೂಲಭೂತವೆಂಬಂಥ ಹಲವಾರು ಪ್ರಶ್ನೆಗಳಿಗೆ ಸೂಕ್ತ ಉತ್ತರ ನೀಡಿವೆ. 'ಶಕ್ತಿ' ವಸ್ತುವನ್ನು ಬಿಟ್ಟು ಪ್ರತ್ಯೇಕವಾಗಿ ಎಂದೂ, ಎಲ್ಲಿಯೂ ಇರಲಾರದು. ದೇವರುಗಳ ಬಗೆಗಿನ ಸಾಮಾಜಿಕ ಮೌಢ್ಯವು ಇಂಥ ವೈಜ್ಞಾನಿಕ ಗ್ರಹಿಕೆಯಿಂದ ನಿವಾರಣೆಯಾಗುತ್ತದೆ. ಕೋಮುವಾದವು ಆಸ್ತಿಕತೆಯನ್ನು ಆಧರಿಸಿರುವುದರಿಂದ, ಆಸ್ತಿಕರಲ್ಲಿರುವ ಈ ತಪ್ಪು ಗ್ರಹಿಕೆಯನ್ನು ಹೋಗಲಾಡಿಸುವ ಮೂಲಕವಷ್ಟೇ ಅವರನ್ನು 'ಸನ್ಮಾರ್ಗ'ಕ್ಕೆ ತರಬಹುದು. ಭಾವುಕತೆಗೆ ಬಲಿಯಾಗು ವವರು, ಸಮಾಧಾನಚಿತ್ತದಿಂದ ವಿವೇಚಿಸುವಂಥ ಸಾಮಾಜಿಕ ಪರಿಸರವನ್ನು ಮೊದಲು ನಿರ್ಮಿಸಬೇಕಿದೆ. ನಂತರ ಅವರ ಮನೋಭಾವ ವೈಜ್ಞಾನಿಕ ಚಿಂತನೆಯತ್ತ ಬೆಳೆಯುವಂತೆ ಮಾಡಬೇಕಿದೆ. ಈ ನಿಟ್ಟಿನಲ್ಲಿ ಸಾರ್ವಜನಿಕರು ಆಲೋಚಿಸಿ, ಕ್ರಿಯಾಶೀಲರಾಗುವುದು ಜರೂರಲ್ಲವೆ ?


**ಎಸ್. ಎಸ್. ಹಿರೇಮಠ**

ಕನ್ನಡ ಪ್ರಾಧ್ಯಾಪಕ, ಎ.ಡಿ.ಬಿ. ಪ್ರಥಮ ದರ್ಜೆ ಕಾಲೇಜು

ಹರಪನಹಳ್ಳಿ-೫೮೩ ೧೩೧


---

## ಸಲಹೆ



ನಾನು ಯಾವ ಮುಖ ಹೊತ್ತು
ವಿದೇಶಕ್ಕೆ ತೆರಳಲಿ ? ಇದು
ಪ್ರಧಾನಿ ಪ್ರಶ್ನೆ !
ಚಿಂತೆ ಯಾಕೆ ಸ್ವಾಮಿ
ನಿಮ್ಮ ಎಲ್ಲಾ ಕೋಮು
'ಮುಖ'ವಾಡಗಳು
ದೇಶ-ವಿದೇಶದವರಿಗೂ
ಗೊತ್ತಾಗಿವೆ.
ತಾವು ತೆನಾಲಿರಾಮನ
ಮುಖವಾಡ ಧರಿಸುವುದೇ ಕ್ಷೇಮ !!


**ಸುರೇಶ ಅಂಗಡಿ**

ಹೂವಿನ ಹಡಗಲಿ




ಬಹಳ ಹಿಂದಿನಿಂದ ಧೂಮನಿಗೆ ಚುನಾವಣೆ, ಪಂಚಾಯತಿ ಎನ್ನುವ ಹೆಸರು ಕೇಳಿದರೆ ಸಿಟ್ಟು ಬರುತ್ತಿತ್ತು. ಇದೆಲ್ಲಾ ಯಾರದೋ ಫಡಾವಿಗಾಗಿ ಮಾಡುವ ಹುನ್ನಾರು ಎನ್ನುವುದು ಅವನ ಅಭಿಪ್ರಾಯ. 'ಚುನಾವಣೆ ಸಮಯದಲ್ಲಿ ಓಟಿಗಾಗಿ ಬರುತ್ತಾರೆ, ಆಮೇಲೆ ನೋಡಿದರೂ, ನೋಡದ ಹಾಗೆ ಮುಖ ಬಿಗಿದುಕೊಂಡು ಮುಂದೆ ಹೋಗುತ್ತಾರೆ.' ಹೀಗೆಲ್ಲಾ ತನ್ನ ತಲೆಯೊಳಗೆ ಬಂದ ವಿಷಯವನ್ನು ಇತರರಿಗೂ ಹೇಳಿ, ಕೆಲವರೊಡನೆ ಬೈಸಿಕೊಂಡುದೂ ಇತ್ತು. ಆದರೆ ಧೂಮ ಇದಕ್ಕೆಲ್ಲಾ ಹೆದರುವ ಕುಳುವಾರಿಯಲ್ಲ. ಕೆಲವೊಮ್ಮೆ ಅರೆ ಹುಚ್ಚನಂತೆ, ಸಲಾಂ ಬೀಡಿಯ ದಮ್ಮು ಹೊಡೆದು, ಫುಸ್ ಎಂತ ಹೊಗೆ ಬಿಟ್ಟು, ಕೈಗಳನ್ನು ಹಿಂದಕ್ಕೆ ಕಟ್ಟಿ, ಒಂದಿಷ್ಟು ಆಚೀಚೆ ಅಡ್ಡಾಡಿ, 'ಥೂ' ಎಂದು ಯಾರನ್ನೋ ಬೈದು ಮತ್ತೆ ಮೊದಲಿನಂತಾಗುತ್ತಿದ್ದ. ಯಾರಾದರೂ ''ಧೂಮ ನಿನಗೆ ಇಲೆಕ್ಷನ್ ಅಂದ್ರೆ ಅಷ್ಟೊಂದು ಸಿಟ್ಟು ಯಾಕಪ್ಪಾ?'' ಎಂದರೆ, ''ಮತ್ತೇನು? ಚುನಾವಣೆ ಬಂತಂದ್ರೆ, ಅದಕ್ಕೆ ನಿಂತವರು, ಏನೇನೋ ಪ್ರಾಮಿಶ್ ಮಾಡ್ತಾವೆ ಆಮೇಲೆ, ನಿನಗೆಲ್ಲಾಯ್ತು ? ಎಂದು ಗುರುತಿದ್ದರೂ, ಇಲ್ಲದವರ ಹಾಗೆ ಮುಂದಕ್ಕೆ ನಡೀತಾವೆ'' ಎನ್ನುತ್ತಾ ಹುಶ್ಶೆಂದು ಮನೆ ಸೇರಿ, ಮೆಟ್ಟಿಲ ಮೇಲೆ ಒರಗುತ್ತಾನೆ.

ಮೇಲ್ವಾವಡಿಯಲ್ಲಿ ಎರಡು ದಿನ ಕೂಳು ಕಾಣದ ಒಬ್ಬಳೇ ಮಗಳು, ಬಿಲ್ಲಿನಂತೆ ಬಾಗಿ, ಕಮ್ಮಾರನ ತಿದಿಯಿಂದ ಹೊರಬರುವ ಧ್ವನಿಯಂತೆ ಶ್ವಾಸ ಬಿಡುತ್ತಾ ಮಲಗಿದ ಒಬ್ಬನೇ ಮಗನನ್ನು ನೋಡಲಾಗದೆ, ಅಂಗಳಕ್ಕಿಳಿದರೂ ಮನಸ್ಸು ಶಾಂತವಾಗುವುದಿಲ್ಲ. ಕಾಲಕೆಳಗೆ ನೆಲ ಒಲೆಯ ಮೇಲಿಟ್ಟ ಕಾವಲಿಯಂತೆ ಸುಡುತ್ತಿತ್ತು. ''ಬಡವರನ್ನು ಕಂಡರೆ ಭೂತಾಯಿಗೂ ಕೋಪ'' ಎಂದು ಧೂಮ ಬೀಡಿಗಾಗಿ ಕಿಸೆಯೆಲ್ಲಾ ತಡಕಾಡಿದರೂ ಒಂದೂ ಸಿಗದಿದ್ದಕ್ಕೆ ''ಥೇ ಎಂಥ ಬದುಕು! ನೆಮ್ಮದಿಯಿಂದ ಒಂದು ಬೀಡಿ ಸೇದಲೂ ಕಾಸಿಲ್ಲದ ಬಾಳು ತನ್ನದು, ಇನ್ನುಳಿದುದು ಸಾವೊಂದೇ'' ಎನ್ನುತ್ತಾ ಊರ ಕೆರೆಯತ್ತ ಸಾಗುತ್ತಾನೆ. ಆದರೆ, ತನ್ನನ್ನು ತಾನೇ ಕೊಂದುಕೊಳ್ಳುವುದು ಪಾಪಕೃತ್ಯ ಎಂಬುದನ್ನು ಊರಿನ ಪ್ರಾಥಮಿಕ ಶಾಲೆಯ ಮೆಟ್ಟಿಲನ್ನು ಒಂದು ದಿನ ಮಾತ್ರ ಹತ್ತಿಳಿದು, ಆ ದಿನ ಮಾಸ್ತರರು ಹೇಳಿದ ನೆನಪಾಗುತ್ತದೆ. ಬಡತನದ ನೋವಿಗಿಂತ ಸಾವಿನ ನೋವೇ ಅವನಿಗೆ ಭೀಕರವೆನಿಸಿ, ಧೂಮ ಕೆರೆ ಏರಿಯಿಂದ ಹಿಂತಿರುಗುತ್ತಾನೆ. ಹಾಗೆಂತ, ಕಸುಬಿನಿಂದ ಜೀವನ ಮಾಡುವುದು ಉತ್ತಮವೆಂದು ಅವನು ತಿಳಿದಿದ್ದರೂ, ಕಸುಬು ಕೊಡುವವರು ಯಾರು ? ಎಂಬುದೇ ಅವನ ಸಮಸ್ಯೆ! ಎಲ್ಲರೂ ಅವನನ್ನು ಬಿಟ್ಟ ಕೆಲಸಗಳಿಗಾಗಿ ಕರೆಯುವವರೇ ಜಾಸ್ತಿ! ಧೂಮ, ಚಿಂತಿತನಾದ.

ಕಾಲದ ಅಂತರದಲ್ಲಿ ಅದೆಷ್ಟೋ ಸಂಗತಿಗಳು ನಡೆದು ಹೋದುವು. ಧೂಮ, ಅವರಿವರ ಬಿಟ್ಟಿ ಕೆಲಸ ಮಾಡಿ, ಸಲಾಂ ಬೀಡಿಗೆ ಬೇಕಾಗುವಷ್ಟು ಕಾಸು ಸಂಪಾದಿಸುತ್ತಿದ್ದ. ಮಗ ಬೆಳೆದು ದೊಡ್ಡವನಾಗಿ, ಕೂಲಿ ಮಾಡಿ, ಗಟ್ಟದಿಂದ ತಂದ ನಾಲ್ಕು ಕಾಸಿನಿಂದ ಮನೆಯಲ್ಲಿ ಅಂಬಲಿ ನೋಡುವಂತಾಗಿತ್ತು. ಆದರೆ, ಮಗಳು ಬೆಳೆದಿದ್ದಾಳೆ. ಅವಳ ಮದುವೆ ಮಾಡಬೇಕಲ್ಲ ! ಎಂದು ಯೋಚಿಸುತ್ತಿದ್ದಂತೆ, ಧೂಮನಿಗೆ ದೂರದಿಂದ ಚೇರ್‌ಮೆನ್ ಯಜಮಾನಪ್ಪ ಬರುತ್ತಿದ್ದುದು ಕಂಡಿತು.

ಎಲಾ ಇವನ ! ಇವತ್ತೇಕೆ ಪಟೇಲಪ್ಪ ನಮ್ಮನೆ ತಾವಾ ಬರ್ತಿದಾನೆ ? ಚುನಾವಣೆಯಂತೂ ಸದ್ಯ ಇಲ್ಲ. ನನ್ನಿಂದ ಅವನಿಗೆ ಮತ್ತೇನು ಜಂಬ್ರ ಇದ್ದೀತು? ಕಳೆದ ಇಲೆಕ್ಷನ್‌ನಲ್ಲಿ ಅವನಿಗಾಗಿ ಬಿಸಿಲಲ್ಲಿ ಓಡಾಡಿ, ನಮ್ಮವರ ಓಟು ಕೊಡಿಸಿ ಗೆಲಿಸಿದ ಮೇಲೆ, ಪಟೇಲಪ್ಪ ಹಾಕಿದ ಪಂಗನಾಮವನ್ನು ನೆನೆದು ಧೂಮನಿಗೆ ಜಿಗುಪ್ಸೆಯಾದರೂ, ತಾಳ್ಮೆಯಿಂದಿರುವುದು ಉತ್ತಮವೆಂದು ಸುಮ್ಮನಾದ. ''ಮಾತು ಆಡಿದರೆ ಹೋಯಿತು'' ಎಂಬುದನ್ನು ಅವನು ಅರಿತಿದ್ದ. ಹೇಗೂ ಊರಿನ ದೊಡ್ಡ ಮನಸಾ, ಪಂಚಾಯತಿ ಚೇರ್‌ಮೆನ್, ಸಾಲದ್ದಕ್ಕೆ ಪಟೇಲ ಬೇರೆ. ಇಂಥವರನ್ನು ಎದುರು ಹಾಕಿಕೊಂಡರೆ, ಬೆಂಕಿಯೊಡನೆ ಆಟವಾಡಿದಂತಾದೀತು ! ಇರಲಿ, ನನಗೇನಾದರೂ ಅವನಿಂದ ಪಡಾವು ಇದ್ದರೂ ಇರಬಹುದು, ಯಾರಿಗೆ ಗೊತ್ತು? ಎಂದು ಗ್ರಹಿಸಿ, ಧೂಮ ಯಜಮಾನಪ್ಪನನ್ನು ಎದುರು ಹಾಕಿಕೊಳ್ಳಲು ಒಪ್ಪಲಿಲ್ಲ. ಅಷ್ಟರಲ್ಲಿ ಪಟೇಲರ ಸವಾರಿ ಅವನೆದುರೇ ನಿಂತುದನ್ನು ನೋಡಿ,

''ಬುದ್ಧಿಯೋರ ಸವಾರಿ ಬಹಳ ಅಪರೂಪ! ಎತ್ತಿಂದ ಬಂದ್ರಿ?'' ಎಂದು ಒಣಗಿದ ಬಾಯನ್ನು ಚಪ್ಪರಿಸುತ್ತಾ, ಕೈಯನ್ನು ಮರವಟ್ಟಾದವನಂತೆ ಹಿಸುಕುತ್ತಾ, ಧೂಮ ದೂರ ನಿಂತೇ, ''ಅಪ್ಪಣೆಯಾಗಬೇಕು'' ಎಂದ.

''ಏನಿಲ್ಲ ಧೂಮ, ಸ್ವಲ್ಪ ಗುಟ್ಟಿನ ವಿಚಾರ ಇದೆ. ಸ್ವಲ್ಪ ಕೆರೆ ತಾವ ಬರ್ತೀಯಾ?'' ''ಅದಕ್ಕೇನಂತೆ ಒಡೆಯಾ ! ಬಂದೆ, ನಡೀರಿ'', ಎನ್ನುತ್ತಾ ಧೂಮ ಪಟೇಲರನ್ನು

ಹಿಂಬಾಲಿಸಿ ಕೆರೆಯತ್ತ ಸಾಗಿದ.

''ಧೂಮ, ನನ್ನ ಮಗ ಅವ್ನಲ್ಲಾ?... ಕೇಶ್ವಾ...''

''ಹೌದು, ಕೇಶ್ವಪ್ಪನಿಗೇನಾಯ್ತು? ಅವರು ಭಾಳ ಒಳ್ಳೆರಲ್ವಾ? ಬೆಂಗಳೂರಲ್ಲಿ ಒಳ್ಳೇ ಇದ್ಯೆ ಓದ್ತಾ ಇದ್ದಾರಲ್ಲಾ? ಅವರ್ಗೇನಾತು?''

''ಹೌದು ಅವನೇನೋ ಒಳ್ಳೆಯವನೇ, ಆದರೆ ಮಾಡಿದ್ದು ಮಾತ್ರ, ತಿಪ್ಪೇಗುಂಡಿ. ಅದನ್ನ ಹೇಳಿದ್ರೆ, ಅವನ್ನ ಇಲ್ಲೇ ಕೆರೆ ಮೇಲೆ, ರುಂಡ ಬಿಟ್ಟು ಹುಗಿಬೇಕು ಅಂತಿಯಾ ನೋಡು. ಆದರೆ, ನಂಗೆ ಅವನೊಬ್ಬನೇ ಮಗ, ಆದ್ರೆ, ಅವ ಮಾಡಿದ್ದೇನು ಗೊತ್ತಾ? ನಮ್ಮ ಕೆಳಗದ್ದೆ ಸೋಮನ ಮಗಳಿದ್ದಾಳಲ್ಲಾ, ಸುಬ್ಬೀ, ಅವಳನ್ನ ಇವ ಪೀರ್ತಿ ಮಾಡಿ, ಅವಳೀಗ ಮೂರು ತಿಂಗಳ ಬಸುರಿ. ಇದು ಅವಳ ಅಪ್ಪನಿಗೂ ಗೊತ್ತಿಲ್ಲ. ಮೊನ್ನೆ ಸುಬ್ಬಿ, ನನ್ನ ತಾವಾ ಬಂದು ತನ್ನನ್ನ ಸೊಸೆಯಾಗಿ ಕರ್ರೊಂಬೇಕು. ಕೇಶ್ವಪ್ಪ, ಇದಕ್ಕೆ ಒಪ್ಪಿ, ನನ್ನ, ನಿಮ್ಮ ತಾವಾ ಕಳ್ಸಿದ್ದಾನೆ. ಒಂದು ವೇಳೆ ನೀವು ಒಪ್ಪದಿದ್ರೆ, ನಾವು ಪ್ಯಾಟಿಗೆ ಹೋಗಿ ರಿಜಿಸ್ಟ್ರಿ ಮಾಡ್ಕೊಂಬೊವಾ ಅಂದಿದ್ದಾನೆ. ನಾನು ಅದೆಲ್ಲಾ ಬ್ಯಾಡಾ ಅಂತ ನಿಮ್ಮ ತಾವಾ ಬಂದಿದ್ದು ಮಾವಾ. ನನ್ನ ಕೈ ಬಿಡಬ್ಯಾಡಿ, ಎಂತ ಗೋಳೋ ಅತ್ತುಬಿಟ್ಟಳಪ್ಪಾ. ಈಗ ನೀನೇ ಹೇಳು ಧೂಮ, ನಾನೇನು ಮಾಡಬೇಕು.''

ಯಜಮಾನಪ್ಪನ ಕಣ್ಣುಗಳಿಂದ ಹನಿಹನಿಯಾಗಿ ನೀರು ಸುರಿಯಿತು. ''ಅಂದ್ಹಾಗೆ, ಈಗ ಏನು ಮಾಡ್ಬೇಕಾದೀತು? ಇದು ಕತ್ತೆಗೂ ಕುದುರೆಗೂ ಜೋಡಿ ಮಾಡಿದ್ಹಾಂಗೆ ಆಗಾಕಿಲ್ವಾ? ನಾನೇನೋ, ನೀವು ಹೇಳ್ದಾಂಗೆ ಮಾಡಲಿಕ್ಕೆ ಸಿದ್ಧ. ನಿಮ್ಮ ಅಪ್ಪಣೆಯಾಗುವುದೊಂದೇ ಬಾಕಿ'' ಎಂದ ಧೂಮ.

''ಅವಳನ್ನ ಪುಸಲಾಯಿಸಿ, ಬೇರೆ ಊರಿಗೆ ಕೊಂಡ್ಹೋಗಿ ಬಿಟ್ಟು ಬರೋದೋ, ಇಲ್ವೇ, ಯಾರಿಗಾದರೂ ವಶ ಮಾಡೋದೋ ಸಾಧ್ಯಾ ಇಲ್ವಾ? ಇಂಥವರನ್ನು ಕೊಂಬೋರು ಪೇಟೇಲಿ ಇದ್ದಾರಂತಲ್ಲಾ, ನಿನ್ನ ಅಭಿಪ್ರಾಯ ಏನು?'' ಯಜಮಾನಪ್ಪ ಧೂಮನ್ನ ಕೇಳಿದ.

''ಅದೆಲ್ಲಾ ಆಗೋ ಹೋಗೋ ಕೆಲಸವಲ್ಲ. ಯಾಕಂತೀರೋ! ಸುಬ್ಬಿ ಆಮೇಲೆ ಅಲ್ಲಿಯ ಪೊಲೀಸರಿಗೋ, ಪ್ರಾಣಿದಯಾ ಸಂಘದವರಿಗೋ, ಹೇಳಿ, ಗಲಾಟೆ ಮಾಡಿದ್ರೆ ಪೇಪರಿನವರು ಭಾರೀ ಪ್ರಚಾರ ಮಾಡುತ್ತಾರಪ್ಪೋ. ಆಮೇಲೆ ನಾವಿಬ್ಬರೂ ಕಂಬಿ ಎಣಿಸಬೇಕಾದೀತು. ಅವಳಿಗೂ ವಯಸ್ಸು ಹದಿನೆಂಟು ದಾಟದೆ. ಎಲ್ಲಾ ಕಾನೂನುಗಳು ಅವಳ ಸೈಡಿಗೇ ಇವೆ.''

''ಹಾಗಾದರೆ ಮತ್ತೇನು ಮಾಡಬೈದು?'' ಯಜಮಾನಪ್ಪ ಧೂಮನ ಸಲಹೆಗಾಗಿ ಹಾತೊರೆದ.

''ಯಾರಿಗೂ ಗೊತ್ತಾಗದ ಹಾಗೆ, ಸುಬ್ಬಿನ ಇಲ್ಲೇ ಕತಂ ಮಾಡೋದು. ಆಮೇಲೆ ಆಕ್ಸಿಡೆಂಟ್ ಅಂತ ಸರ್ಟಿಫಿಕೆಟ್ ಬರೆಸೋದು,'' ಧೂಮ ಹೇಳಿದ.

''ಅದನ್ನು ಮಾಡೋದು ಹೇಗೆ? ಯಾರಿಂದ ಮಾಡಿಸೋದು? ಯಾರಿಗಾದ್ರೂ ಗೊತ್ತಾದ್ರೆ, ನಮ್ಮ ಗತಿ ? ಈ ಕೆಲಸ ಮಾಡುವವರು 'ಭೋ' ನಂಬಿಗಸ್ತರಾಗ ಬೇಕಪ್ಪಾ! ನನಗಂತೂ, ನಿನ್ನ ಬಿಟ್ರೆ ಇನ್ನಾರಮೇಲೂ ನಂಬಿಗೆ ಇಲ್ಲ ಧೂಮ. ಏನ್ಮಾಡ್ತಿ, ಹೇಳು ಮತ್ತೆ'' ಎಂದು ಯಜಮಾನಪ್ಪ, ಧೂಮನನ್ನು ತುಂಬೆಗಿಡ ಹತ್ತಿಸುವ ಕೆಲಸಕ್ಕೆ ತೊಡಗಿದ.

''ಅದೆಲ್ಲಾ ನಂಗೆ ಬಿಟ್ಬುಡಿ'' ಎಂದ ಧೂಮನ ಕೈಯಲ್ಲಿ, ನೂರರ ನೋಟೊಂದನ್ನು ಇಟ್ಟು, ಕೆಲಸವಾದ ಮೇಲೆ ಇನ್ನೂ ಇದೆ, ಎಂದು ಯಜಮಾನಪ್ಪ ಮನೆಗೆ ಹಿಂತಿರುಗಿದ.

ಧೂಮ ಕೆರೆ ಏರಿ ಬಿಟ್ಟು, ಮನೆ ಸಮೀಪಿಸುತ್ತಿದ್ದಂತೆ, ಅವನ ದೇಹ ಭಯದಿಂದ ಬೆವರಿ, ಕಣ್ಣು ಕಟ್ಟಿದಂತಾಯಿತು. ಹಾಗೆ ಕಣ್ಣು ತಿಕ್ಕಿ ಎದುರು ನೋಡುತ್ತಿದ್ದಂತೆ, ದೂರದಲ್ಲಿ ಸುಬ್ಬಿ ಗಡಿಗೆ ಹೊತ್ತು ಹೋಗುತ್ತಿರುವುದನ್ನು ಕಂಡು ತನ್ನ ಕಾರ್ಯ ಫಲಿಸಿತೆಂದು ಉಬ್ಬಿದ. ಒಣಗಿದ ಬಾಯಲ್ಲಿ ಬಂದ ಜೊಲ್ಲನ್ನು ಕುಡಿಯುತ್ತಾ, ಓಡಿ ಹೋಗಿ ಸುಬ್ಬಿಯನ್ನು ಸಮೀಪಿಸಿದ.

''ಎಲ್ಲಿ ಹೊರಟೆ ಸುಬ್ಬೀ...?''

''ಕಾಣಾಕಿಲ್ವಾ ಮಾವಾ? ನೀರಿಗೆ ಹೊರಟಿದ್ದೀನಿ.''

''ನಾನೂ ಕೆರೆತಾವಾನೇ ಹೊರಟಿದ್ದು. ಒಳ್ಳೇ ಜೊತೆ ಸಿಕ್ಕ ಹಾಂಗಾಯ್ತು. ಹೋಗೋವಾ'' ಎಂದ ಧೂಮ.

ಕೆರೆ ಸಮೀಪಿಸಿದಾಗ ಸುಬ್ಬಿಯ ದುರಾದೃಷ್ಟವೋ ಏನೋ, ಅಲ್ಲಿ ಅವರಿಬ್ಬರನ್ನು ಬಿಟ್ಟು ಇನ್ಯಾರೂ ಇರಲಿಲ್ಲ. ಧೂಮ ಕೆರೆ ಏರಿಯ ಮೇಲೆ ನಿಂತು, ಮುಖಕ್ಕೆ ನೀರು ಹನಿಸಿಕೊಳ್ಳುವಾಗ ಸುಬ್ಬಿ ಪಕ್ಕದಲ್ಲಿ ಸೊಂಟ ಬಗ್ಗಿಸಿ, ಗಡಿಗೆಯನ್ನು ನೀರಲ್ಲಿ ಮುಳುಗಿಸುತ್ತಿದ್ದಳು. ಅವಳನ್ನು ನೋಡುತ್ತಿದ್ದಂತೆ ಧೂಮನಿಗೆ ಮತ್ತೆ ದೇಹವಿಡೀ ಕಂಪಿಸಿತು. ರೋಮಗಳು ನಿಮಿರಿ ನಿಂತುವು. ತಾನು ಮಾಡಲೆಣಿಸಿದ

ಪಾಪಕೃತ್ಯವನ್ನು ನೆನೆದು ಅವನಿಗೆ ಪಶ್ಚಾತ್ತಾಪವಾದರೂ, ದುರಾಸೆಯ ಪ್ರೇತ ಅವನನ್ನು ಆವರಿಸಿತ್ತು. ಇನ್ನು ತಡಮಾಡುವುದು ಸರಿಯಲ್ಲವೆಂದು ಧೂಮ, ಸುಬ್ಬಿಯನ್ನು ಒಂದೇ ಸಮನೆ ಬಲ ಪ್ರಯೋಗಿಸಿ ನೀರಿಗೆ ದೂಡಿದ.

''ಅಯ್ಯೋ ಸತ್ತೆ'' ಎಂದು ಕೂಗುತ್ತಾ ಸ್ವಲ್ಪ ಕಾಲ ವಿಲಿವಿಲಿ ಒದ್ದಾಡಿದ ಸುಬ್ಬಿ, ಮೇಲೇಳಲಾಗದೆ ನೀರಲ್ಲಿ ಮುಳುಗಿ ಕಾಣೆಯಾದಳು.

ಧೂಮ ಆ ಕೂಡಲೇ ಅಲ್ಲಿಂದ ಕಾಲುಕಿತ್ತು, ತನ್ನ ಸಾಹಸ ಕೃತ್ಯವನ್ನು ಯಜಮಾನಪ್ಪನಿಗೆ ತಿಳಿಸಿ, ಇನ್ನಿಷ್ಟು ದಕ್ಷಿಣೆ ಪಡೆಯುವ ಆಸೆಯಿಂದ ಅವನ ಮನೆಯ ಅಂಗಳ ಸೇರಿದ.

''ಯಜಮಾನರೇ ನಾನು ಧೂಮ! ಒಸಿ ಹೊರಬರ್ತಿರಾ ?'' ಎಂದು ಕೂಗಿದ ದನಿ ಕೇಳಿ, ಯಜಮಾನಪ್ಪ ಹೊರಬಂದ.

ಧೂಮನ ಮುಖದಲ್ಲಿ ಮೂಡಿದ ಕಿರುನಗೆ ಕಂಡು, ಯಜಮಾನಪ್ಪನಿಗೆ ಕೆಲಸವಾಗಿದೆ ಎನ್ನುವುದು ಖಾತ್ರಿಯಾಯಿತು.

''ಏನಯ್ಯಾ ಕೆಲಸ ಎಡವೊ -ಬಲವೋ?'' ಎಂದು ಸನ್ನೆ ಮಾಡಿದಾಗ,

''ಈ ಧೂಮ ಹೋದಲ್ಲಿ ಕೆಲಸ ಎಡವಟ್ಟಾಗುವುದ್ಯೆತಾ? ಎಲ್ಲಾ ಸಲೀಸಾತು,'' ಎಂದು ಮುಂದಿನ ಬಕ್ಷೀಸಿಗಾಗಿ ತಲೆಕೆರೆದುಕೊಂಡ.

''ತಗೋ,'' ಎಂದು ನೂರರ ನೋಟೊಂದನ್ನು ಅವನಿಗಿತ್ತು, ಧೂಮನ ಕಿವಿಯಲ್ಲಿ ''ಹುಸಾರು. ಇದು ನಮ್ಮಿಬ್ಬರಿಗೆ ಮಾತ್ರ ಗೊತ್ತು. ಯಾರಾದರೂ ಭಂಗಿಯ ಚಿಲಿಮೆ ಕೊಟ್ಟು, ಗುಟ್ಟು ಕೇಳಿದರೆ, ರಟ್ಟು ಮಾಡಬೇಡಾ. ಹೆಚ್ಚು ಕಡಿಮೆಯಾದರೆ, ಇಬ್ಬರಿಗೂ ನೇಣಿನ ಶಿಕ್ಷೆಯಾಗುತ್ತೆ, ಜಾಗ್ರತೆ'' ಎಂದು ಹೇಳಿ, ಯಜಮಾನಪ್ಪ ಒಳಗೆ ನಡೆದ. ಧೂಮ ಅವನ ಮನೆಯತ್ತ ಸಾಗಿದ.

ದಿನಗಳು ಕಳೆದು, ಒಂದೆರಡು ವರ್ಷಗಳೂ ಸಂದು ಹೋದುವು. ಅದರ ಗತಿಯಲ್ಲಿ ಸುಬ್ಬಿಯ ಸಾವು ಜನರ ಮತಿಯಲ್ಲಿ ಆಳಿಸಿಹೋಯಿತು.

ಅದೊಂದು ದಿನ ಪಡುವಣದಲ್ಲಿ ದೇವರು ಮುಳುಗಿ, ದಿಗಂತ ರಕುತ ಕಾರಿತ್ತು. ಧೂಮ ಎಂದಿನ ಅರಳಿಕಟ್ಟೆಯ ಮೇಲೆ ಕೂತು, ಬೀಡಿಗಳನ್ನು ಪುಂಖಾನುಪುಂಖವಾಗಿ ಸೇದಿ, ಗಾಳಿಮರದಂತೆ ಓಲಾಡುತ್ತಾ ಮನೆಯತ್ತ ನಡೆದಿದ್ದ. ಮನೆ ಮುಂದೆ ಅವನ ಬರವನ್ನೇ ನಿರೀಕ್ಷಿಸುತ್ತಾ ನಿಂತಿದ್ದ ಹೆಂಡತಿಯನ್ನು ಕಂಡು, ತನಗೇನೋ ಕಾದಿದೆ ಎಂದು ನಡಿಗೆ ನೆಟ್ಟಗೆ ಮಾಡಲು ಯತ್ನಿಸಿದ. ಮೆಲ್ಲಮೆಲ್ಲನೆ ಹರಿದು ಮನೆ ಮುಟ್ಟಿದನಷ್ಟೇ ಹೆಂಡತಿಯ ಆರ್ಭಟ ಸಿಡಿಲಿನ ಶನಿಶಕ್ತಿಯನ್ನು ಮೀರಿಸಿತ್ತು.

''ಎಲ್ಲಿ ಸತ್ತೋಗಿದ್ದೆ ? ನಿನಗೆ ಮನೆ, ಹೆಂಡ್ರು, ಮಕ್ಳು ಎಂತ ಏನಿದೆ? ಬಿಟ್ಟಿ ಕೆಲಸ, ಸಲಾಂ ಬೀಡಿಯಷ್ಟೇ ನಿನ್ನ ಸಂಪತ್ತು. ಒಳಿಕ ಬಾ. ನಿನ್ನ ರಾಜಾ ಸಂಸಾರದೊಳಗೆ, ಏನೇನು ನಡೀತಿದೆ ಎಂತ ಹೇಳ್ತೀನಿ'' ಎಂದು ಅವನ ಹರಿದ ಶರ್ಟಿನ ತೂತಿನೊಳಗೆ ಕೈ ಹಾಕಿ, ಒಳಗೆ ಎಳೆದುಕೊಂಡು ಹೋದಳು.

''ನಿನಗೆ ಮನಿಯೊಳಗೆ ಏನಾಗ್ತಿದೆ ಎಂತ ಗೊತ್ತಾ? ನಿನ್ನ ಮಗಳು ರುಕ್ಕು ನಿನ್ನೆ ರಾತ್ರಿ ಹೊರಗೆ ಹೋದವಳು ಇನ್ನೂ ಬರಲಿಲ್ಲ. ಪೂಜಾರಪ್ಪನ ಮಗ ನಿನ್ನೆ ರಾತ್ರಿ ಕತ್ತಲಲ್ಲಿ ಹೊರಗೆ ನಿಂತಿದ್ದ. ಅವನು ಸೀಟಿ ಹೊಡೆದದ್ದೇ ತಡ,




ಇವಳು ಓಡಿಹೋಗಿ, ಇಬ್ರೂ ಕತ್ಲಲ್ಲಿ ನಾಪತ್ತೆಯಾಗ್ಬಿಟ್ರು. ಇದು ಬಾಳ ದಿವ್ಸದಿಂದ ಹೀಗೇ ನಡೀತಿದೆ. ಆದರೆ ನಿನ್ನಂಥ ಮಂಕಿಗೆ ಇದೆಲ್ಲಾ ಹೇಗೆ ತಿಳೀಬೇಕು?''

ಧೂಮನಿಗೆ ಹೆಂಡತಿಯ ಮಾತು ಕೇಳಿ, ಒಂದು ಕಟ್ಟು ಬೀಡಿ ಸೇದಿದ ಅಮಲು ಕೆಳಗಿಳಿದು, ''ಹೌದಾ? ರುಕ್ಕು ಹೀಂಗ್ ಮಾಡ್ತಾಳಾ? ಬರ್ಲಿ ಅವಳನ್ನ ನೀರುಗಾಯಿ ಮಾಡ್ತೀನಿ'' ಎಂದು ಕಿರುಚಿದ. ಆ ದಿನ ಮಾತ್ರ ಧೂಮನಿಗೆ ಸಂಸಾರ ಎಂದ್ರೆ ಅದೆಷ್ಟು ಬೇಜಾರು ಅನಿಸಿದ್ದು.

ಇತ್ತ ತನ್ನ ಮಗ ಧೂಮನ ಮಗಳೊಂದಿಗೆ ಏನೋ ನಡೆಸುತ್ತಿದ್ದಾನೆ ಅಂತ ಪೂಜಾರಪ್ಪನಿಗೂ ತಿಳಿಯಿತು. ಅವಳನ್ನು ಕೊಂದೇ ಬಿಡ್ತೀನಿ ಎಂದು ಹುಚ್ಚು ಹಿಡಿದು ಹೊರಟ ಅವನನ್ನು ಹೆಂಡ್ತಿ ತಡೆದು ಅಷ್ಟೆಲ್ಲಾ ಯಾಕೆ? ಚೇರ್‌ಮೇನ್‌ರನ್ನ ಒಸಿ ಕೇಳಿ ಆಮೇಲೆ ಮುಂದಿನ ಕೆಲಸಕ್ಕೆ ಕೈಹಾಕುವುದು ಒಳ್ಳೇದಲ್ವಾ? ಎಂದಾಗ ಪೂಜಾರಪ್ಪ ಅದೂ ಸರಿ ಅನ್ನು ಎಂತ ಚೇರ್‌ಮೆನ್ನರ ಮನೆಯತ್ತ ಕಾಲು ಹಾಕಿದ.

ಪೂಜಾರಪ್ಪ, ಯಜಮಾನಪ್ಪನ ಹತ್ರ ಸಂಗತಿ ಹೇಳಿ, ''ಇದು ನನ್ನ ಮರುವಾದೆ ಪ್ರಶ್ನೆ,'' ನೀವೇನಾದರೂ ಹುನ್ನಾರು ಮಾಡಲೇಬೇಕೆಂದು ಕೇಳಿಕೊಂಡ.

ಯಜಮಾನಪ್ಪನಿಗೆ ಸಂಕಟಕ್ಕೆ ಬಂತು. ಪಿರ್ಯಾದಿಯ ಒಂದು ಬದಿಯಲ್ಲಿ ಧೂಮ, ಅವನೋ ತನ್ನ ಇಲೆಕ್ಷನ್ ಬಂಟ, ಕುಟುಂಬದ ಮರ್ಯಾದೆ ಉಳಿಸಿದ ನೆಂಟ. ಏನು ಮಾಡೋದು? ಎಂದು ಆಲೋಚನೆಗಿಳಿದ.

''ಹೇಗೂ ಇಬ್ಬರು ಪ್ರಾಯಕ್ಕೆ ಬಂದವರು. ಇಬ್ಬರೂ ಒಬ್ಬರನ್ನೊಬ್ಬರು ಲವ್ ಮಾಡೋದ್ರಿಂದ, ಲಗ್ನವಾಗುವ ಹಕ್ಕಿದೆ. ಕಾನೂನು ಹಂಗೇ ಹೇಳ್ತದೆ. ಹೋಗಲಿ ಬುಡು, ಅವರಿಬ್ಬರೂ ಲಗ್ನವಾಗಿ ಸಂದಾಗಿರಲಿ ಆಗ ಎಲ್ಲಾ ಗಲಾಟೇನೂ ತಪ್ತದೆ.''

ಇದು ಚೇರ್‌ಮೆನ್ ಯಜಮಾನಪ್ಪನ ತೀರ್ಪು. ಪೂಜಾರಪ್ಪನಿಗೆ ಇದು ಹಿಡಿಸಲಿಲ್ಲ. ಅವನು ಚೇರ್‌ಮೆನ್‌ರನ್ನು ಕೆಕ್ಕರಿಸಿ ನೋಡತೊಡಗಿದ.

''ಏನಯ್ಯಾ ಯಜಮಾನ ಮರ್ವಾದೆ ನಿಂಗೆ ಮಾತ್ರ ಬೇಕಲ್ವಾ? ನಿನ್ನ ಮರ್ವಾದೆ ಏನಂತ ನಂಗೂ ಗೊತ್ತು! ನಿನ್ನ ಮಗ ಸೋಮನ ಮಗಳಿಗೆ ಬಸುರು ಮಾಡಿದಾಗ ನೀನು ಅವರಿಬ್ಬರ ಮದುವೆ ಮಾಡಿಸಿದೆಯೋ? ಅವಳ ಜಲಸಮಾಧಿ ಮಾಡಿದ್ದು ನನಗೆ ಗೊತ್ತಿಲ್ವಾ? ಪೊಲೀಸರಿಗೆ ತಿಳಿಸಿ ನಿನ್ನ ಗುಟ್ಟನ್ನು ರಟ್ಟು ಮಾಡುತ್ತೇನೆ ನೋಡು'' ಎಂದು ಒದರಿದಾಗ, ಸದ್ಯ ಅಲ್ಲಾರೂ ಇರಲಿಲ್ಲ.

''ತಪ್ಪಾಯ್ತು ಪೂಜಾರಪ್ಪ ಒಸಿ ಸುಮ್ಮಕಿರು. ಏನಾದರು ವಿಲೆವಾರಿ ಮಾಡೋಣ ತಡಿ. ಎಡವಟ್ಟು ಆಗುವ್ಹಾಂಗಿದ್ರೆ, ಅವಳನ್ನು ಖುಲಾಸು ಮಾಡೋದೇ. ನಮ್ಮ ಹತ್ರ ಅಂಥ ಜನರಿದ್ದಾರೆ ಹೆದರಬೇಡಾ'' ಎಂದು ಪೂಜಾರಪ್ಪನಿಗೆ ಧೈರ್ಯ ಹೇಳಿ ಕಳುಹಿಸಿದ.

ಆಮೇಲಿನ ಎರಡು ದಿನಗಳಲ್ಲಿ ಊರಲ್ಲಿ ಸುದ್ದಿ ಹರಡಿತು. ಧೂಮನ ಮಗಳು ರುಕ್ಕು ಊರಿನ ಕೆರೆಯಲ್ಲಿ ಕಾಲು ಜಾರಿ ಬಿದ್ದು ಸತ್ತು ಹೋದಳೆಂದು ಸಮಾಚಾರ ಹರಡಿತು. ಗ್ರಾಮಸ್ಥರು ದೈವದ ಮನೆಯಲ್ಲಿ ಪೂಜೆ ನಡೆಸಿ ಪ್ರಶ್ನೆ ಕೇಳಿದಾಗ, ಇದೆಲ್ಲಾ ದೈವದ ಉಪದ್ರವ; ಊರವರೆಲ್ಲಾ ಸೇರಿ ದೈವಕ್ಕೆ ಭೋಗ ಕೊಡದಿದ್ದರೆ ಇಂಥ ಸಾವುಗಳು ಮತ್ತೆ ನಡೆಯುವ ಸಾಧ್ಯತೆ ಇದೆ ಎಂದು ಪೂಜಾರಪ್ಪ ದೈವದ ಪರವಾಗಿ ಊರ ಪಂಚಾಯತಿಗೆ ಹೇಳಿಕೆ ನೀಡಿದ.

ಇತ್ತ ಅರಳಿ ಕಟ್ಟೆಯ ಕೆಳಗೆ ಸಲಾಂ ಬೀಡಿಯ ದಮ್ಮು ಹೊಡೆಯುತ್ತಾ, ಮಗಳ ಸಾವನ್ನು ಮರೆಯುವ ಸಾಹಸದಲ್ಲಿದ್ದ ಧೂಮನಿಗೆ ಹೆಣ್ಣು ಮಕ್ಕಳ ಸಾವಿನ ಬಗ್ಗೆ ಸತ್ಯ ಏನೆಂದು ತಿಳಿದಿತ್ತು. ಈ ಕಾಲ ಕೆಲವರಿಗೆ ಬದುಕುವುದಕ್ಕಲ್ಲ. ಸಾಯುವುದಕ್ಕೇ ಮಾತ್ರ! ತಾನು ಯಜಮಾನಪ್ಪನ ಕೆಲಸ ಮಾಡಬಾರದಾಗಿತ್ತು. ''ಮಾಡಿದ್ದುಣ್ಣೋ ಮಹಾರಾಯಾ'' ಎಂದು ಯಾರೋ ಹೇಳುತ್ತಿದ್ದ ಗಾದೆ ಮಾತು ಅವನ ಸ್ಮರಣೆಗೆ ಬಂತು.

ಯಜಮಾನಪ್ಪ ಕೊಲೆಗಾರನಾದರೂ ಬದುಕಬಲ್ಲ. ಯಾಕಂದ್ರೆ, ಅವನಲ್ಲಿ ಎಲ್ಲಾ ತರದ ತಾಕತ್ತಿದೆ. ಆದರೆ, ತಾನು? ಇತರರ ಮರ್ವಾದೆ ಉಳಿಸ ಹೋಗಿ ಸಾಯ ಹೊರಟವ!

ಧೂಮನಿಗೆ, ಮಗಳ ಸಾವಿನ ನೆನಪು ಮರುಕಳಿಸಿ ಕಣ್ಣಿಗೆ ಕತ್ತಲು ಕವಿಯಿತು. ಹಿಂದಿನ ರಾತ್ರಿ ಬಯಲಾಟ ಕಂಡು, ನಿದ್ದೆಗೆಟ್ಟು, ಎರಡು ಕಟ್ಟು ಬೀಡಿ ಸೇದಿ, ತೇಲುತ್ತಾ, ತೊದಲುತ್ತಾ ಮನೆಕಡೆಗೆ ಹೊರಟ ಅವನಿಗೆ ತಲೆ ತಿರುಗಿದಂತಾಗಿ, ಅಲ್ಲೇ ನೆಲಕ್ಕೊರಗಿದ.

ಎಷ್ಟು ಹೊತ್ತಾದರೂ ಧೂಮ ಮೇಲೇಳದಿದ್ದಾಗ, ಅವನ ಕಡೆಯ ಕೆಲವರು ಅವನ ಮೈಮೇಲೆ ಪರೀಕ್ಷೆ ಮಾಡಿದಾಗ, ಧೂಮ ಆಗಲೇ ಸತ್ತುಹೋಗಿದ್ದಾನೆ ಎನ್ನುವ ತೀರ್ಮಾನಕ್ಕೆ ಬಂದರು.

ಕೆಲವರು, ಅವನು ಹೇಗೆ ಸತ್ತ, ಎಂದು ಚರ್ಚೆಗಿಳಿದಾಗ ಅವನನ್ನು ಬಲ್ಲವರೊಬ್ಬರು, ಸತ್ಯ ಸಂಗತಿಯನ್ನು ಹೊರಗೆಡವಿದರು.

''ಧೂಮ ಕಾಹಿಲೆ ಕಸಾಲೆ ಎಂತ ಸಾಯುವ ಕುಳುವಾರಿ ಅಲ್ಲ! ಬಹುಶಃ ಮುಂದೆ ಬದುಕುವುದು ಹೇಗೆ? ಎಂಬ ಭೀತಿಯಿಂದ ಅವನ ಹಾರ್ಟು ಫೇಲಾಗಿ ಸತ್ತಿರಬೇಕು'' ಎಂಬ ನಿರ್ಧಾರಕ್ಕೆ ಬಂದರು.

# ದೇವಚಂದ್ರನ ಹಾಸ್ಯ ವಿನೋದ

ಪ್ರೊ|| ಶಿವರಾಮಯ್ಯ

'ರಾಜಾವಳಿ ಕಥಾಸಾರ'ವೆಂಬ ಕೃತಿಯನ್ನು ಬರೆದ ದೇವಚಂದ್ರನು (೧೭೭೦ - ೧೮೪೧) ಈಗಿನ ಚಾಮರಾಜನಗರ ಜಿಲ್ಲೆಯ ಕನಕಗಿರಿ ಅಥವಾ ಮಲೆಯೂರಿನವನು. 'ಜೈನ ಸಾಹಿತ್ಯ ಚರಿತ್ರೆ' ಎಂದು ಹೆಸರಾಗಿರುವ ಈತನ ಕೃತಿಯು ಮೂಲತಃ ವಸಾಹತುಶಾಹಿ ಕಾಲದಲ್ಲಿ ಹುಟ್ಟಿದ ಒಂದು ಅಪರೂಪದ ಪಠ್ಯವೆನಿಸಿದೆ. ಕರ್ನಲ್ ಮೆಕಂಜಿ ಎಂಬ ಬ್ರಿಟಿಷ್ ಅಧಿಕಾರಿಯ ಆದೇಶಾನುಸಾರವಾಗಿ ರಾಜಾವಳಿ ಕಥೆಯನ್ನು ರಚಿಸಿದೆ ಎಂದು ಕವಿಯೇ ಹೇಳಿಕೊಂಡಿದ್ದಾನೆ. ಈ ಕೃತಿಯ ವೈಶಿಷ್ಟ್ಯವೆಂದರೆ ಆ ಕಾಲದಲ್ಲಿ ಪ್ರಚಲಿತವಿದ್ದ ಮೌಖಿಕ ಪರಂಪರೆಯ ಅನೇಕ ಐತಿಹ್ಯಗಳನ್ನು, ಪುರಾಣಗಳನ್ನು, ದಂತಕತೆಗಳನ್ನು ಆಕರವನ್ನಾಗಿ ಬಳಸಿಕೊಂಡು ರಚನೆಯಾಗಿರುವುದು. ಇದರಲ್ಲಿ ಕರ್ನಾಟಕದ ಅನೇಕ ಪಂಥಗಳ, ಮತಧರ್ಮಗಳ, ಆಳಿದ ರಾಜರುಗಳ, ಜನಸಮುದಾಯಗಳ ಬಗ್ಗೆ ಕುತೂಹಲಕರ ದಾಖಲಾತಿ ಹಾಗೂ ವಿಶ್ಲೇಷಣೆ ಇದೆ. ಮೈಸೂರು ಅರಸರು, ಹೈದರ್- ಟಿಪ್ಪು ಸುಲ್ತಾನರು ಮತ್ತು ಬ್ರಿಟಿಷರ ನಡುವಿನ ಸ್ನೇಹ ತಿಕ್ಕಾಟ ಕಲಹಗಳ ನಡುವೆ ಈ ಕೃತಿ ರಚನೆಯಾದುದರಿಂದ ಆ ಸಂಕ್ರಮಣ ಕಾಲದ ದಕ್ಷಿಣ ಕರ್ನಾಟಕದ ರಾಜಕಾರಣವನ್ನು ಇದರ ಮೂಲಕ ವಿಶ್ಲೇಷಣೆ ಮಾಡಲು ಮಹತ್ವದ ಮಾಹಿತಿಗಳನ್ನು ಇದು ಒಳಗೊಂಡಿದೆ. ಸಾಹಿತ್ಯಿಕವಾಗಿ ಇದರ ಗದ್ಯ ರೂಪವು ಹಳಗನ್ನಡ ನಡುಗನ್ನಡ ಮತ್ತು ಹೊಸಗನ್ನಡ ಪ್ರಯೋಗಗಳಿಂದ ಕೂಡಿ ಕುತೂಹಲಕಾರಿಯಾಗಿದೆ. ರಾಜಾವಳಿ ಕಥಾಸಾರವು ಚಾರಿತ್ರಿಕ, ಧಾರ್ಮಿಕ, ಸಾಹಿತ್ಯಕ ಹಾಗೂ ಜಾನಪದ ದೃಷ್ಟಿಯಿಂದ ಅಧ್ಯಯನ ಮಾಡುವವರಿಗೆ, ಸಂಶೋಧನೆ ಮಾಡುವವರಿಗೆ ವಿಪುಲ ಸಾಮಗ್ರಿಯನ್ನು ತನ್ನಲ್ಲಿ ಹುದುಗಿಸಿಕೊಂಡಿದೆ. ಇದನ್ನು ರಾಜಾವಳಿ ಎಂದು ಕರೆದಿದ್ದರೂ ಧರ್ಮಾವಳಿ ಹಾಗೂ ಪ್ರಜಾವಳಿ ಕಥಾಸಾರವನ್ನೇ ಮುಂದೊತ್ತಿ ಇಲ್ಲಿ ಹೇಳಲಾಗಿದೆ. ಇಂಥ ಒಂದು ಕೃತಿ ಇದುವರೆಗೆ ಕನ್ನಡ ಓದುಗರಿಂದ ಅಲಕ್ಷ್ಯಕ್ಕೆ ಗುರಿಯಾಗಿರುವುದು ಒಂದು ಚಿದಂಬರ ರಹಸ್ಯ. ಆದರೆ ಈಚೆಗೆ (೨೪-೨-೨೦೦೨) ಹಂಪೆಯ ಕನ್ನಡ ವಿಶ್ವವಿದ್ಯಾನಿಲಯವು ರಾಜಾವಳಿ ಕಥಾಸಾರದ ಬಗ್ಗೆ ಒಂದು ಸಂವಾದ ಕಾರ್ಯಕ್ರಮವನ್ನು ಹಮ್ಮಿಕೊಂಡು ಈ ಕೃತಿಯನ್ನು ಚರ್ಚೆಗೆ ಎತ್ತಿಕೊಂಡದ್ದು ಎಷ್ಟೋ ಸಮಾಧಾನಕರ ಸಂಗತಿಯಾಗಿದೆ, ಅದಿರಲಿ.

ನಾನಿಲ್ಲಿ ಪರಿಚಯಿಸಲು ಹೊರಟಿರುವುದು ದೇವಚಂದ್ರ ಕವಿಯ ಹಾಸ್ಯ ವಿನೋದವನ್ನು ಕುರಿತು ಮಾತ್ರ. ಇದಕ್ಕೆ ಪೂರ್ವಭಾವಿಯಾಗಿ ಹಾಸ್ಯ ಎಂದರೇನು ಎಂಬುದರ ಬಗ್ಗೆ ಕೆಲವು ಲಕ್ಷಣಗಳನ್ನು ಇಲ್ಲಿ ಪ್ರಸ್ತಾಪಿಸುವುದು ಸೂಕ್ತ: "ಮಾನವನ ಮನೋಧರ್ಮದಲ್ಲಿ ಹಾಸ್ಯ ಒಂದು ಸ್ಥಾಯೀಪ್ರಜ್ಞೆ. ಹಾಸ್ಯಕ್ಕೆ ಸಮಾನವಾದ ಇಂಗ್ಲಿಷ್ ಪದಕ್ಕೆ ಲ್ಯಾಟಿನ್ ಭಾಷೆಯಲ್ಲಿ ಕಂಪು, ರುಚಿ ಎಂಬ ಅರ್ಥಗಳಿವೆ. ಈ ಬಗೆಯ ಹಾಸ್ಯ ದೃಷ್ಟಿ ಬೆಳೆದರೆ ಲೋಕದಲ್ಲಿ ವಸ್ತುವಿನ ಆವರಣವನ್ನು ಕಳಚಿ ಪ್ರತ್ಯಕ್ಷವಾಗಿ ನೋಡುವ ಒಂದು ಹದವಾದ ಮನಸ್ಸಿನ ವೇದಿಕೆ ಸಿದ್ಧವಾಗುತ್ತದೆ. ವಿಕಾರವಾದ ಅನ್ಯರ ವೇಷಾಲಂಕಾರಗಳು, ನಾಚಿಕೆಗೇಡಿನ ಸ್ವಭಾವ, ವಿಷಯ ಚಾಪಲ್ಯ, ಕುಚೇಷ್ಟೆ, ಅಂಗವೈಕಲ್ಯ, ಕೆಟ್ಟ ಮಾತು, ದೋಷಾರೋಪಣೆ ಮೊದಲಾದ ವಿಭಾವಗಳಿಂದ ಹಾಸ್ಯ ಉದಯಿಸುತ್ತದೆ. ದೊಡ್ಡ ವಸ್ತುಗಳಲ್ಲಿರುವ ಸಣ್ಣತನವನ್ನೂ ಭವ್ಯವಾದವುಗಳಲ್ಲಿರುವ ಹುಳುಕನ್ನೂ ಕಾಣಿಸಿಕೊಡುವ ಶಕ್ತಿ ಹಾಸ್ಯ ಮನೋಧರ್ಮಕ್ಕುಂಟು. ಆದ್ದರಿಂದ ಹಾಸ್ಯವನ್ನು ಮಾನವ ಸ್ವಭಾವದ ಬಹಿರಂಗ ವಿಚಾರಣೆಯ ಚಾವಡಿ ಎನ್ನುತ್ತಾರೆ. ಬಿಡುವಾದ ಮನಸ್ಸನ್ನು ರಂಜನಗೊಳಿಸತಕ್ಕ ವಿಕಟಕಾಂತಿ ಇರುವಂತೆಯೇ ಹಾಸ್ಯಕ್ಕೆ ಎಲ್ಲ ಸಮಸ್ಯೆಗಳ ಬುಡದಲ್ಲೂ ಹಾಯಬಲ್ಲ ಉನ್ನತ ಪ್ರಜ್ಞೆಯೂ ಉಂಟು." (ಕನ್ನಡ ವಿಶ್ವಕೋಶ. ಸಂಪುಟ ಮೂರು. ಪು. ೭೮೬).

ಹಳಗನ್ನಡದಲ್ಲಿ ಹಾಸ್ಯ ಪ್ರಧಾನವಾದ ಕೃತಿ ರಚನೆಯ ಪ್ರಯತ್ನ ನಡೆದಿಲ್ಲವಾದರೂ ಇಂಥ ಹಾಸ್ಯ ದೃಷ್ಟಿ ಅಲ್ಲಲ್ಲಿ ಮಿಂಚಿದೆ. ಪಂಪನ ಕಾವ್ಯ ಎಲ್ಲೆಲ್ಲಿ ದೇಸಿಯೊಳ್ ಪುಗುವುದೋ ಅಲ್ಲಿ ಹಾಸ್ಯ ವಿನೋದದ ಸೆಳೆ ಮಿಂಚುಗಳು ಹೊಳೆಯುವುವು. ಇದಕ್ಕೆ ಅನೇಕ ನಿದರ್ಶನಗಳನ್ನು ಇಲ್ಲಿ ಎತ್ತಿಕೊಡಬಹುದು. ಒಂದು ಸಂದರ್ಭವನ್ನು ಉಲ್ಲೇಖಿಸುವುದಾದರೆ ಪಂಪ ಭಾರತದಲ್ಲಿ ವರ್ಣಿತವಾಗಿರುವ ವೇಶ್ಯಾವಾಟಿಕೆ (ನಾಲ್ಕನೇ ಆಶ್ವಾಸ)ಯನ್ನು ಕುರಿತ ಕೆಲವು ಪದ್ಯಗಳು. ಸುಮಾರು ಮುನ್ನೂರು ಬಗೆಯ ಮದ್ಯಗಳನ್ನು ಹೆಸರಿಸುವ ಪಂಪ ಆ ಕಳ್ಳು ಕುಡಿದು ಸೊಕ್ಕಿದ ಗಂಡು ಹೆಣ್ಣುಗಳ ವಿಲಾಸವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾನೆ. ಮುಂದೆ ಬಂದ ರನ್ನ, ಜನ್ನ, ಹರಿಹರ, ರಾಘವಾಂಕರು ಹಾಸ್ಯ ವಿನೋದಗಳನ್ನು ಮನಂಬುಗುವಂತೆ ಚಿತ್ರಿಸುತ್ತಾರೆ. ರತ್ನಾಕರವರ್ಣಿಯ ಭರತೇಶ ವೈಭವವಂತೂ ಹಾಸ್ಯ ವಿನೋದದ ರಸದೂಟವನ್ನೇ ಬಡಿಸುತ್ತದೆ. ಹರಿಹರನ ನಂಬಿಯಣ್ಣನ ರಗಳೆಯಲ್ಲಿ ಕಂಡುಬರುವ ವೃದ್ಧ ಮಹೇಶ್ವರನ ಪ್ರಸಂಗವನ್ನಂತೂ ಓದಿದವರು ಮರೆಯುವಂತಿಲ್ಲ. ಕುಮಾರವ್ಯಾಸನ ಉತ್ತರನ ಪೌರುಷದ ವರ್ಣನೆ ಯಾರಿಗೆ ತಿಳಿದಿಲ್ಲ! ಅಲ್ಲದೆ ಕನ್ನಡ ಸಾಹಿತ್ಯದಲ್ಲಿ ಮೂಡಿ ಬಂದಿರುವ ಧಾರ್ಮಿಕ ಪುರಾಣ ಕಾವ್ಯಗಳಲ್ಲಿ ಮತೀಯ ವಿಕಾರ, ಪುರಾಣ ಕಲ್ಪನೆ, ತತ್ವಕ್ಕೂ ಆಚರಣೆಗೂ ನಡುವಣ ಭೇದ ಮುಂತಾದುವನ್ನು ಕುರಿತು ಸ್ವಾರಸ್ಯವೂ ಹಾಸ್ಯಪೂರ್ಣವೂ ಆದ ರೀತಿಯಲ್ಲಿ ಬರೆದ ಕವಿಗಳುಂಟು. ಅವರಲ್ಲಿ ಮುಖ್ಯರಾದವರು ನಯಸೇನ (ಧರ್ಮಾಮೃತ, ೧೧೧೨), ಬ್ರಹ್ಮಶಿವ (ಸಮಯ ಪರೀಕ್ಷೆ ೧೧೨೫), ವೃತ್ತ ವಿಲಾಸ (ಧರ್ಮಪರೀಕ್ಷೆ ೧೧೬೦) ಮುಂತಾದವರು. ಇವರದ್ದು ಶುದ್ಧ ಹಾಸ್ಯವಲ್ಲ, ನಂಜುನಗೆ, ವಿಡಂಬನೆ. ವೈದಿಕ ಮತದ ಅವಹೇಳನ ಮಾಡುವಲ್ಲಿಯೇ ಇವರ ಸತ್ವ ಕರಗಿಬಿಡುತ್ತದೆ. ಇಂಥಲ್ಲಿ ನಾವು ದೇವಚಂದ್ರನ (೧೭೭೦-೧೮೪೧) ಕಡೆಗೆ ತಿರುಗಿದರೆ ಅವನ ಸಮಾಜೋಸೌಹಾರ್ದಯುತ ಧಾರ್ಮಿಕ ದೃಷ್ಟಿಯ ಮಹತ್ವ ಅರಿವಿಗೆ ಬರುತ್ತದೆ.

ಇಡೀ ರಾಷ್ಟ್ರವೇ ಗುಲಾಮಗಿರಿಗೆ ಒಡ್ಡಿಕೊಂಡಿರುವ ಸಮಯದಲ್ಲಿ ದೇವಚಂದ್ರ ಅದಕ್ಕೂ ಅಸಹ್ಯಕರವಾದ ಮಾನಸಿಕ ಮತೀಯ ಮೌಢ್ಯತೆಯಿಂದ ಬಿಡುಗಡೆಯಾಗಬೇಕೆಂದು ವೈಚಾರಿಕತೆಯ ಕಿಡಿ ಹತ್ತಿಸಲು ಹೊರಟವನು. ಇಪ್ಪತ್ತೊಂದನೇ ಶತಮಾನದ ಹೊಸ್ತಿಲಿನಲ್ಲಿ ನಿಂತಿರುವ ನಮಗೂ ಬೆರಗು ಬಡಿಯುವಂತಿದೆ ಅವನ ವೈಚಾರಿಕ ಪ್ರಜ್ಞೆ. ಈತ ಯಾರಿಗೂ ಎಲ್ಲಿಯೂ ರಾಜಿ-ಕಬೂಲಿ ಮಾಡಿಕೊಂಡವನಲ್ಲ. ವಾಸ್ತವವಾಗಿ ಯಜ್ಞ ಯಾಗಾದಿ ಕರ್ಮಕಾಂಡಗಳ ಸುತ್ತ ಗಿರಕಿ ಹೊಡೆಯುವ ವೈದಿಕ ಬ್ರಾಹ್ಮಣಶಾಹಿಯ ವಿರುದ್ಧ ಪ್ರತಿಭಟನಾ ಸ್ವರೂಪದಲ್ಲಿ ಮೂಡಿಬಂದ ಅಹಿಂಸಾಪರವಾದ ಜೈನ ಧರ್ಮದ ಬಗ್ಗೆ ಲೇಖಕನಿಗೆ ಪ್ರೀತಿ ಆದರಗಳು ಇದ್ದಾಗ್ಯೂ ಅದರ ನ್ಯೂನಾತಿರೇಕಗಳನ್ನು ಎತ್ತಿ ಆಡದೆ ಬಿಟ್ಟವನಲ್ಲ ಈತ. ಸಂಸ್ಕೃತಿ ಸಂದರ್ಭದಲ್ಲಿ ನಾವೀಗ ಗುರುತಿಸಿಕೊಂಡಿರುವ ಶಿಷ್ಟ-ಪರಿಶಿಷ್ಟ ಈ ಎರಡರ ನಡುವೆ ಇರುವ ಅಂತರವನ್ನು ಪಠ್ಯ, ನಡಾವಳಿ, ಸಾಮಾಜಿಕ ವ್ಯವಸ್ಥೆ ಹಾಗೂ ಪುರಾಣಾಖ್ಯಾನ ಎಂಬೀ ನಾಲ್ಕೂ ನೆಲೆಗಳಲ್ಲಿ ತುಂಬಿಕೊಂಡಿರುವ ಅಸಾಂಗತ್ಯಗಳನ್ನು, ವೈರುಧ್ಯಗಳನ್ನು, ದೇವಚಂದ್ರ ಅತ್ಯಂತ ಮಾರ್ಮಿಕವಾಗಿ ವಿಡಂಬಿಸುತ್ತಾನೆ. ಯಾವುದನ್ನು ನಾವು ಇವತ್ತು ಅಖಂಡ ಭರತಖಂಡದ ಹೆಮ್ಮೆಯ ಸಂಸ್ಕೃತಿ ಎಂದು ಉದ್-ಘೋಷಿಸಿಕೊಳ್ಳುತ್ತಾ ಬಂದಿದ್ದೇವೆಯೋ ಆ ಬೇರು ಸತ್ತ ಸಂಸ್ಕೃತಿಯನ್ನು ಸ್ವವಿಮರ್ಶೆಯ ನಿಕಷಕ್ಕೆ ಒಡ್ಡಿ ತೀಡಿಬಿಡುತ್ತಾನೆ. ಇದು ದೇವಚಂದ್ರನ ರಾಜಾವಳಿ ಕಥೆಯ ವೈಶಿಷ್ಟ್ಯ.

ಬಾಯಲ್ಲಿ ಜಾತ್ಯತೀತತೆಯ ಮಂತ್ರ, ಕೈಯಲ್ಲಿ ಜಾತಿ ರಾಜಕಾರಣ ಕರಪತ್ರ. ಇದು ಇವತ್ತಿಗೆ ಹೊಸದೇನಲ್ಲ ಎಂಬುದನ್ನು ಆತನ ಕೃತಿಯಿಂದ ಗ್ರಹಿಸಬಹುದು. ಜನರು ತಾವು ಕಟ್ಟಿದ ಶಾಸ್ತ್ರ ಪುರಾಣಗಳ ಕಟ್ಟಿಗೆ ಒಳಪಟ್ಟು ಹತ್ತಿರ ಬಾರದಿದ್ದಾಗ ತಮ್ಮ ಸಂಖ್ಯಾಬಲವನ್ನು ವೃದ್ಧಿಸಿಕೊಳ್ಳುವುದಕ್ಕಾಗಿ ಬಲಾತ್ಕಾರದ ಮತಾಂತರಗಳನ್ನು ಮಾಡಿಸುತ್ತಿದ್ದರು. ಮಧ್ಯಯುಗೀನ ಮತ ಧರ್ಮಗಳು, ಬ್ಯಾಂಕಿನವರು ಪಶುಗಳಿಗೆ ಬ್ಯಾಡ್ಜ್ ಹಾಕುವಂತೆ, ಜನರನ್ನು ಬಲಾತ್ಕರಿಸಿ ತಂತಮ್ಮ ಲಾಂಛನಗಳನ್ನು ಹಾಕುತ್ತಿದ್ದರು. ನಾಮಲಿಂಗ, ಮುದ್ರೆಗಳು ಒತ್ತಲ್ಪಡುತ್ತಿದ್ದವು. ಇಂಥಲ್ಲಿ ಪ್ರತಿಭಟಿಸಿದವರ ಚಿತ್ರಗಳನ್ನು ಜನಜನಿತ ಕಥೆಗಳಿಂದ ಲೇಖಕ ಕೊಡುತ್ತಾನೆ. ವೈದಿಕರ ಪ್ರಾಬಲ್ಯದಲ್ಲಿ ನಾಯಿಗೂ ವೇದ ಓದಲು ಬರುತ್ತಿತ್ತು ಎಂದೂ, ವೀರಶೈವ ಕಾಲದಲ್ಲಿ ನಾಯಿ ಕುನ್ನಿಗೂ ಲಿಂಗಧಾರಣೆ ಮಾಡಿದರೆಂದೂ ಶ್ರೀವೈಷ್ಣವರ ಪ್ರಾಬಲ್ಯದಲ್ಲಿ ಸಿಕ್ಕಿ ಸಿಕ್ಕಿದವರಿಗೆಲ್ಲ ಹಿಡಿದು ನಾಮ ಹಾಕಿದರು, ಮುದ್ರೆ ಒತ್ತಿದರು ಎಂಬುದಾಗಿಯೂ ರಾಜಾವಳಿ ದಾಖಲಿಸುತ್ತದೆ. ಅಲ್ಲದೆ ಲಿಂಗ ಜಂಗಮರು ಮಿಂಡರಾಗಿದ್ದರೂ ಸುಖೀ ಜಂಗಮರೆಂದೇ ಪೂಜಿಸಲ್ಪಟ್ಟರು ಎಂದೂ ವಿಡಂಬಿಸಲಾಗಿದೆ. ಇಲ್ಲೆಲ್ಲಾ ಉತ್ಪ್ರೇಕ್ಷೆಗಳೇನೇ ಇರಲಿ, ಅದರ ಹಿಂದಿರುವ ಜನಜನಿತ ಭಾವ ಸತ್ಯವನ್ನಂತೂ ಯಾರೂ ಕಡೆಗಾಣಿಸುವಂತಿಲ್ಲ.

ಶ್ರೀವೈಷ್ಣವರು ಚಿಕ್ಕದೇವರಾಜನ ಕಾಲದಲ್ಲಿ ಪ್ರಬಲರಾಗಿ ನಾಮವಿಲ್ಲದವರ ಮುಖ ನೋಡಬಾರದೆಂದು ರಾಜಾಜ್ಞೆಯನ್ನು ಮಾಡಿಸಿದರು. ಆದುದರಿಂದ ಅನೇಕ ಜನ ನಾಮಧಾರಿಗಳಾದರು. ಕೆಲವು ಜೈನ ಪಂಡಿತರು ವೈಷ್ಣವರೊಡನೆ ನಂಟನ್ನು ಬೆಳೆಸಿ ರಾಜನ ದಯಕ್ಕೆ ಪಾತ್ರರಾಗಿ ಬಹಳ ಸಿರಿವಂತರಾದರು. ಅಲ್ಲದೆ "ಸ್ಥಳ ಪರಸ್ಥಳದ ಜನರಿಗೆಲ್ಲ ಬಲತ್ಕಾರದಿಂದ ನಾಮವನ್ನು ಹಾಕುತ್ತಿರಲು ಕೆಲವರು ಒಪ್ಪಿದರು; ಒಪ್ಪದ ಕೆಲವರು

ಎದುರುಬಿದ್ದು ಸರ್ವಥಾ ಆಗದೆಂದರು. ಬಲತ್ಕಾರದಿಂದ ಇಕ್ಕಿದರೆ ಉಜ್ಜಿಬಿಟ್ಟರು. ಕೆಲವರು ಇಕ್ಕಿದರೇನು ? ಎಂದು ಹೊಳೆಯಲ್ಲಿ ತೊಳೆದುಹೋದರು, ಮತ್ತೆ ಕೆಲವರನ್ನು ಹಿಡಿದು ಮುದ್ರಾಧಾರಣೆ ಮಾಡುವಾಗ ಅಯ್ಯೋ ಎಂದು ಪ್ರಲಾಪಿಸಿ ಬಿಡಿಸಿಕೊಂಡು ಓಡಿದರು. ಒಬ್ಬಿಬ್ಬರು ಇಷ್ಟಕ್ಕೆ ಸಾಕೆಂದು ಒಂದು ನಾಮದಲ್ಲಿಯೇ ಓಡಿದರು. ಕೆಲವರು ಭುಜವನ್ನೇಕೆ ಸುಡುವುದು ? ಈ ಹೊಟ್ಟೆಗೋಸ್ಕರ ತಾನೆ ? ಎಂದು ಡೊಳ್ಳನ್ನು ಮುಂದೊಡ್ಡಿದರು. ಹೀಗೆ ಅನೇಕ ರೀತಿಯಾಗಿ ಬಾಯಿಗೆ ಬಂದಂತೆ ಹೇಳಿಹೋದರು. ಭಾಗ್ಯವನ್ನು ಪಡೆವೆವೆಂಬ ಆಸೆಯಿಂದ ನಾಮವಿಕ್ಕಿಸಿಕೊಂಡ ಜನರನ್ನು ಯಾರೂ ಆದರಿಸದೆ ವಿಚಾರಿಸದೆ ಹೋದುದರಿಂದ ನಾಮವನ್ನು ಹಾಕಿಕೊಂಡು ಕೆಟ್ಟರು. ಕಾರ್ಯವನ್ನು ಕೆಡಿಸಿದರೂ ನಂಬಿಸಿ ಕೊಡದಿದ್ದರೂ 'ನಾಮವಿಕ್ಕಿದ'ನೆಂಬ ಮಾತು ಲೋಕಪ್ರಸಿದ್ಧಿಯಾಯಿತು.'' (ಪು-೨೮೬). ಆರ್ಥಿಕ ಆಮಿಷಗಳನ್ನು ಒಡ್ಡಿ ಜನಸಮುದಾಯವನ್ನು ಬಲಾತ್ಕಾರ ಮತಾಂತರಕ್ಕೆ ಒತ್ತಾಯಿಸುತ್ತಿದ್ದ ರಾಜರ ಹಾಗೂ ಪುರೋಹಿತವರ್ಗದ ಹುನ್ನಾರಗಳು ಹೇಗಿರುತ್ತವೆ ಎಂಬುದಕ್ಕೂ ಅಂಥ ಆಮಿಷಗಳಿಗೆ ಬಲಿ ಬೀಳುವ ಅಮಾಯಕ ಜನರ ಕರುಣಾಜನಕ ದೀನ ಬಾಳು ಹೇಗಿರುತ್ತದೆ ಎಂಬುದಕ್ಕೂ ಈ ಒಂದು ನಿದರ್ಶನ ಸಾಕು.







ಹೀಗೆ ಜನ ಸಮುದಾಯಗಳನ್ನು ಎಲ್ಲ ಮತಧರ್ಮಗಳೂ ತಮ್ಮತ್ತ ಸೆಳೆಯಲು ಪೈಪೋಟಿ ಮಾಡಿವೆ. ಮಧ್ಯಕಾಲೀನ ಶೈವ, ವೈಷ್ಣವ, ಬೌದ್ಧ, ಜೈನ ಹಾಗೂ ಮುಸಲ್ಮಾನ ಮತ ಸಂಪ್ರದಾಯಗಳು ತಮ್ಮ ತಮ್ಮ ಮೇಲ್ಮೈಗಾಗಿ ನಡೆಸಿರುವ ಧರ್ಮಯುದ್ಧ (ಜೆಹಾದ್, ಕ್ರುಸೇಡ್ಸ್)ಗಳು ಅನೇಕ. ಇಂಥ ಸಂಘರ್ಷಗಳಲ್ಲಿ ಗೆಲುವು ಸಾಧಿಸಿದ ಮತಸ್ಥರು ಉಳಿದವರ ಪೂಜಾ ಮಂದಿರಗಳನ್ನು ಹಾಳುಮಾಡಿ, ಅವರ ಮತೀಯ ಲಾಂಛನಗಳನ್ನು ಲೇವಡಿ ಮಾಡಿ, ವಿಧಿ ಆಚರಣೆಗಳನ್ನು ಅಪಾರ್ಥಮಾಡಿ, ಸಾಮಾಜಿಕ ವ್ಯವಸ್ಥೆಯನ್ನು ಪ್ರಶ್ನಿಸಿ ಪುರಾಣಾಖ್ಯಾನಗಳನ್ನು ಪುಡಿಗುಟ್ಟುತ್ತಾ ತಂತಮ್ಮ ಮತ ಸಂಪ್ರದಾಯಗಳೇ ಸರ್ವಶ್ರೇಷ್ಠವೆಂದು ಜಾಹೀರುಪಡಿಸಿರುವುದು ಸರ್ವೇಸಾಮಾನ್ಯ. ಜಾತ್ಯತೀತ ನಿಲುವಿನ ದೇವಚಂದ್ರನಿಗೆ ಇದೆಲ್ಲ ಸರಿ ಬೀಳುವುದಿಲ್ಲ. ವಿನೋದದ ಧಾಟಿಯಲ್ಲಿಯೇ ಇದನ್ನೆಲ್ಲ ಖಂಡಿಸುವ ಅವನ ಕಲ್ಪನಾ ಫ್ಯಾಂಟಸಿಗೆ ಒಂದು ಉದಾಹರಣೆ : ''ಶಿವನು ಎಲ್ಲಾ ಜಾತಿಯನ್ನೂ ತೂಗಿ ನೋಡಿದನು. ಕೆಲವರು ಬಹಳ ಕಡಿಮೆ ತೂಕದವರಾಗಲು ಅವರಿಗೆ ಲಿಂಗವೆಂದು ಕಲ್ಲನ್ನು ಕಟ್ಟಿದನು. ಕೆಲವರು ಇನ್ನೂ ಸ್ವಲ್ಪ ಕಡಿಮೆ ತೂಕದವರಾಗಿರಲು ಅವರಿಗೆ ಜನಿವಾರ ದಾರವನ್ನು ಹಾಕಿದನು. ಮತ್ತೆ ಉಳಿದ ಜಾತಿಗಳೆಲ್ಲಕ್ಕೂ ಅವರವರಿಗೆ ಒಂದೊಂದು ಚಿಹ್ನೆಯನ್ನು ಕೊಟ್ಟು ಸಮ ಮಾಡಿದನು. ತುರುಕರನ್ನು ತೂಗಲು ಅವರು ಎಲ್ಲರಿಗಿಂತ ಅಧಿಕ ತೂಕವಿರಲು ಸರ್ವ ಸಮಾನವಾಗಬೇಕೆಂದು ಸ್ವಲ್ಪ ಚರ್ಮವನ್ನು ಕತ್ತರಿಸಿ ತೆಗೆದು ಮುಂಜಿಯನ್ನು ಮಾಡಿ ಸಮ ಮಾಡಿದನು.'' (ಪು. ೧೯೧). ಕಥೆಗಾರನ ಜಾಣತನದ (witticism) ಈ ಬಗೆಯ ಸರಸೋಕ್ತಿಗೆ ತಲೆತೂಗದವರಾರು ?

ದೇವಚಂದ್ರನ ವ್ಯುತ್ಪತ್ತಿ ಜ್ಞಾನಕ್ಕೆ, ವೈನೋದಿಕ ಪ್ರಜ್ಞೆಗೆ, ವೈಚಾರಿಕ ನಿಲುವಿಗೆ ನಿದರ್ಶನವಾಗಿ ಶಿವನ ಪ್ರಜಾಪತಿ (ಶಿಶ್ನ) ಪ್ರಸಂಗವನ್ನು ಇಲ್ಲಿ ಉದಾಹರಿಸಬಹುದು. ಹಗಲೂ ರಾತ್ರಿ ಪಾರ್ವತಿಯೊಡನೆ ಕಾಮ ಸೇವೆಯಲ್ಲಿರುತ್ತಿದ್ದ ಪರಶಿವನು ಒಮ್ಮೆ ದಾರುಕ ವನಕ್ಕೆ ಹೋಗಿ ಅಲ್ಲಿದ್ದ ತಾಪಸಿಯೊಬ್ಬನ ಪತ್ನಿಯಲ್ಲಿ ಮೋಹಿತನಾದನು. ಕ್ರಮೇಣ ಆಕೆಯನ್ನು ಒಲಿಸಿಕೊಂಡು ಕಾಮಕ್ರೀಡೆಯಲ್ಲಿ ಇರುತ್ತಿದ್ದನು. ಒಮ್ಮೆ ಅವಳ ಪತಿ ಇವರಿಬ್ಬರು ಜೊತೆಯಾಗಿದ್ದುದನ್ನು ಕಂಡು ಕೋಪದಿಂದ ಈತನ ನಿಡುಲಿಂಗವು ಸಂದಿಗೆ ಹರಿದು ಬೀಳಲೆಂದು ಶಾಪವಿತ್ತನು. ಆಗ ಕೋಪಗೊಂಡ ಶಿವನು ಹರಿದುಬಿದ್ದ ಲಿಂಗವು ಆ ತಾಪಸಿಯ ಹಣೆಯಲ್ಲಿ ನಿಲ್ಲುವುದೆಂದು ನಿಯಮಿಸಿದನು. ಈತನು ಈಶ್ವರನೆಂದು ಅರಿತ ತಾಪಸಿಯು ತನ್ನ ಅಪರಾಧವನ್ನು ಮನ್ನಿಸಿ ಎಂದು ದೈನ್ಯದಿಂದ ನಮಸ್ಕರಿಸಲು, ಅದನ್ನು ಹೊತ್ತು ಕೈಲಾಸಕ್ಕೆ ಬನ್ನಿ ಎಂದು ಹೇಳಿ ಹೊರಟುಹೋದನು. ತಾಪಸಿ ಶಿವಲಿಂಗವನ್ನು ಹೊರಲಾರದೆ ತತ್ತರಿಸುತ್ತಿರಲು ಇತರ ತಾಪಸರು ಅದನ್ನು ಹೊತ್ತು ಕೈಲಾಸಕ್ಕೆ ಹೊರಟರು. ಅದು ಬೆಳೆಯುತ್ತಲೇ ಇತ್ತು. ಅದನ್ನೆಲ್ಲ ನೋಡಿದ ಪಾರ್ವತಿ ಅಟ್ಟಹಾಸದಿಂದ ನಗುತ್ತಿದ್ದಳು. ಈಶ್ವರನು ಕಂಡು ಸಂತುಷ್ಟನಾಗಿರಲು ಅವರು ಲಿಂಗವನ್ನು ತಂದು ಇಳುಹಿದರು. ಆದರೆ ಅದು ಕೈಲಾಸ ಪರ್ವತದಿಂದ ಚರಾಚರವನ್ನೆಲ್ಲ ಪುಡಿಗುಟ್ಟಿ ಅರೆಯುತ್ತ ಉರುಳುತ್ತಿದ್ದಿತು. ಇದನ್ನು ಕಂಡು ಎಲ್ಲರೂ ಮೊರೆಯಿಡಲು ಶರ್ವಾಣಿಯು ಕರುಣೆಯಿಂದ ಅದನ್ನು ತನ್ನ ಯೋನಿಯಲ್ಲಿ ಸ್ಥಾಪಿಸಿ ಪೂಜಿಸುವುದೆಂದು ಹೇಳಿದಳು. ಈ ಕ್ರಮದಿಂದ ಲಿಂಗಪೂಜೆ ಯಾಗುತ್ತಿದೆ. ಅದೇ ಬಗೆಯಲ್ಲಿ ಶಿವನ ಪ್ರಜಾಪತಿ ವಧೂಟಿಯ ಶಾಪ ನಿಮಿತ್ತ ಆರು ತುಂಡಾಗಿ, ನಾಲ್ಕು ಅಂಗುಲ ಉಳಿದು, ಇನ್ನೂ ಐದು ತುಂಡುಗಳು ಧರೆಗೆ ಬಿದ್ದು ಶಂಕರಲಿಂಗ ರಾಮಲಿಂಗ ಮೊದಲಾಗಿ ಪೂಜೆಗೊಂಡವು. ಇನ್ನುಳಿದ ಶಿವನ ನಾಲ್ಕಂಗುಲ ಪ್ರಮಾಣವು ಪ್ರಜೋತ್ಪತ್ತಿಗೆ ಕಾರಣವಾಗಲು ಮನುಷ್ಯರಲ್ಲಿ ನಿಂತು ಪ್ರಜಾಪತಿಯೆಂಬ ಹೆಸರಾಯಿತು. ಇದು ಲಿಂಗ ಪ್ರಪಂಚ. ದೇವಚಂದ್ರನ ಈ ಕಥಾ ಕೈಚಳಕವನ್ನು ಕಂಡು ಆಧುನಿಕ ಮಾನವ ಶಾಸ್ತ್ರಜ್ಞರೂ ತಲೆದೂಗಬೇಕು. ಶಿವ ಪಾರ್ವತಿಯರು ಜಗತಃ ಮಾತಾಪಿತೃಗಳಷ್ಟೆ. ಲಿಂಗಪೂಜೆಯು ಫಲವತ್ತತೆಯ ಪ್ರತೀಕ. ಶಿವ ಪಾರ್ವತಿಯರ ಸುತ್ತ ಇಂಥ ಶಿಷ್ಟ-ಪರಿಶಿಷ್ಟ ಪುರಾಣಗಳು ಲೆಕ್ಕವಿಲ್ಲದಷ್ಟು. ಆ ಹಿರಿಯಜ್ಜನ ಜಾರ-ಚೋರತನಗಳಲ್ಲಿ, ಕಾಮ ಕ್ರೀಡೆಗಳಲ್ಲಿ, ಅಟ್ಟಹಾಸ, ಹಾವ ಭಾವ ಭಂಗಿಗಳಲ್ಲಿ ಸಮುದಾಯಗಳು ತಮ್ಮನ್ನು ತಾವೇ ಹೇಗೆ ಗುರ್ತಿಸಿಕೊಂಡಿವೆ ಎಂಬುದನ್ನು ಕಥೆಗಾರ ಮನೋಜ್ಞವಾಗಿ ಚಿತ್ರಿಸುತ್ತಾನೆ. ಇಲ್ಲಿ ಶೀಲ-ಅಶ್ಲೀಲದ ಪ್ರಶ್ನೆಯೇ ಇಲ್ಲ. ಅತ್ಯಂತ ಸ್ವಾಭಾವಿಕವೂ, ರೋಚಕವೂ, ಉದ್-ಬೋಧಕವೂ ಆದ ಶೈಲಿಯಲ್ಲಿ ನಿರೂಪಿಸುತ್ತಾನೆ. ಹೀಗೆ ಶಿಷ್ಟರ ಪುರಾಣಗಳನ್ನು ಪುಡಿಗುಟ್ಟುತ್ತಾ ಪರಿಶಿಷ್ಟರ ಜನಜನಿತ ಕಥೆಗಳನ್ನು ತನ್ನ ಕೃತಿ ಲೋಕಕ್ಕೆ ಎತ್ತಿಕೊಳ್ಳುತ್ತ ಸಾಗುತ್ತಾನೆ. ಈ ಬಗೆಯ ಪುರಾಣಾಖ್ಯಾನಗಳು ವಿಪುಲವಾಗಿವೆ ಇಲ್ಲಿ.

ದೇವಚಂದ್ರನದು ಸಾಮುದಾಯಿಕ ಪ್ರತಿಭೆ. ಮಲೆಯೂರಿನ ಜಗಲಿಕಟ್ಟೆಯ ಮೇಲೆ ಕುಳಿತು ಜಾಗತಿಕ ಸತ್ಯಗಳನ್ನು ಹಿಡಿಯಲು ಹವಣಿಸುತ್ತಾನೆ. ಆಗ ಅವನ ಕೃತಿ [illegible] ಜನಜನಿತ ಕಥೆಗಳು, ದಂತ ಕಥೆಗಳು, ಐತಿಹ್ಯಗಳು, ಪುರಾಣಗಳು ನುಗ್ಗಿ ಬರುತ್ತವೆ.

ಜನಪದರು ಇಲ್ಲಿ ಜಾತ್ರೆ ನೆರೆದು ನಾಮುಂದು ತಾಮುಂದು ಎಂದು ಕಥೆ ಕೇಳಲು, ಕಥೆ ಹೇಳಲು ಉತ್ಸುಕರಾಗುತ್ತಾರೆ. ಈ ಕಥಾ ಕಣಜದಲ್ಲಿ ಇನ್ನೂ ಕೆಲವನ್ನು ಇಲ್ಲಿ ಎತ್ತಿ ಹೇಳಬಹುದು. ಇವುಗಳಲ್ಲಿ ಕುಂಟು ದೈವ ಕುರುಡು ದೈವಗಳ ಕಥೆ ಒಂದು : ಸ್ಥೂಲಕಾಯನಾದ ಹರಿದಾಸನಿಗೆ ಒಂದು ದಿನ ಎಲ್ಲಿಯೂ ಭಿಕ್ಷೆ ಸಿಗಲಿಲ್ಲ. ಆತ ದಾರಿಯ ಬದಿಯಲ್ಲಿರುವ ಒಂದು ಆಲದ ಮರದ ಕೆಳಗೆ ಕುಳಿತು ತನ್ನ ತಂಬೂರಿಯನ್ನು ತಾರಸ್ವರದಲ್ಲಿ ಮೀಟಲು ಆರಂಭಿಸಿದ. ಆ ಅಪಸ್ವರವನ್ನು ಕೇಳಿ ಸಹಿಸಲಾರದೆ ವೃಕ್ಷ ದೇವತೆಯಾದ ಕುಂಟು ದೈವವು ಬಂದು 'ಏನು ಕಾರಣ ಹೀಗೆ ಘೋರವಾದ ನಾದವನ್ನು ಮಾಡುವೆ' ಎಂದಿತು. ಅದಕ್ಕೆ ದಾಸನು 'ಆಹಾರಕ್ಕೇನೂ ಇಲ್ಲದುದರಿಂದ' ಎನ್ನಲು 'ಗ್ರಾಸವೆಷ್ಟು ಹೇಳು' ಎಂದು ಕೇಳಲು, 'ನಮಗೆ ಒಂದು ಖಂಡುಗ ಭತ್ತವಾದರೆ ನಡೆಯುತ್ತದೆ' ಎಂದನು. ಅದಕ್ಕೆ ಕುಂಟು ದೈವವು 'ತಿಂಗಳಿಗೆ ಒಂದು ಖಂಡುಗ ಭತ್ತವನ್ನು ನಿಮಗೆ ತಂದುಹಾಕುತ್ತೇನೆ, ನಿಮ್ಮ ಗೃಹದಲ್ಲಿರಿ' ಎಂದು ಭಾಷೆ ಕೊಟ್ಟು ಅದೇ ಪ್ರಕಾರ ನಡೆದುಕೊಂಡು ಹೋಗುತ್ತಿತ್ತು. ಹೀಗಿರುವಾಗ ಅದರ ಭಾವಮೈದ ಕುರುಡು ದೈವವು ನಂಟುತನಕ್ಕೆ ಬಂದನು. ಕುಂಟನು ಕೂಲಿಗೆ ಹೋಗುವುದನ್ನು ಕಂಡು ಅತ್ಯಂತ ಕೋಪದಿಂದ 'ದೈವವಾಗಿದ್ದೂ ಮನುಷ್ಯನಿಗೆ ಆಳಾಗಿರುವುದನ್ನು ನಿನ್ನಲ್ಲಿ ಕಂಡೆನು. ಇಂತಹ ಹೀನ ಕೆಲಸವನ್ನು ಬಿಡು' ಎಂದನು. ಅದಕ್ಕೆ ಕುಂಟು ದೈವವು 'ಕೊಟ್ಟ ಭಾಷೆಯನ್ನು ಹೇಗೆ ಬಿಡಲು ಸಾಧ್ಯ' ಎಂದನು. ಕುರುಡು ದೈವವು 'ಹಾಗಾದರೆ ನಾನು ಹೋಗಿ ಆತನನ್ನು ಭಯಗೊಳಿಸಿಬಿಡಿಸುತ್ತೇನೆ' ಎಂದು ಅವನ ಗೃಹ ಸಮೀಪದಲ್ಲಿ ಬಂದು ಅಪಸ್ವರದಿಂದ ತಂಬೂರಿಯನ್ನು ಮೀಟುತ್ತಿರಲು ಅದಕ್ಕಂಜಿ ದಾಸನು ತಲೆವಾಗಿಲೊಳಿದ್ದನು. ಅಷ್ಟರಲ್ಲಿ ಅವನ ಗೋವುಗಳು ಬಂದವು. ಅವುಗಳಲ್ಲಿ ಒಂದು ಕುಂಟಿ ಒಂದು ಕುರುಡಿ ಹಸುಗಳಿದ್ದವು. ಅವೆರಡು ಗುದ್ದಾಡುತ್ತಿರಲು ದಾಸನು 'ಕುಂಟಿಯನ್ನು ಬಿಟ್ಟು ಕುರುಡಿಯನ್ನು ಕಟ್ಟು' ಎಂದು ಉಚ್ಚ ಸ್ವರದಿಂದ ತನ್ನ ಹೆಂಡತಿಗೆ ಹೇಳಿದನು. ಇದನ್ನು ಕೇಳಿದ ಕುರುಡು ದೈವವು ಭಯದಿಂದ ನಡುಗುತ್ತಾ ಸಾಷ್ಟಾಂಗ ಪ್ರಣತನಾಗಿ 'ನಾನು ಕುಂಟು ದೈವದ ಭಾವಮೈದ, ನಿಮಗೆ ಒಂದು ಖಂಡುಗ ಅಕ್ಕಿ ಬೇಕೋ? ಅಥವಾ ಒಂದು ಖಂಡುಗ ಭತ್ತವನ್ನೇ ಕೊಡಲೋ' ಎಂದು ಕೇಳಲು ದಾಸನು 'ಅಕ್ಕಿಯನ್ನು ತಂದುಕೊಡು' ಎಂದು ಹೇಳಲು ಹಾಗೆಯೇ 'ಕುಂಟು ದೈವ ಕುರುಡು ದೈವ' ಎರಡೂ ಸೇರಿ ಕೂಲಿ ಮಾಡಿ ಭತ್ತವನ್ನು ಪಡೆದು ಅಕ್ಕಿಯನ್ನು ಮಾಡಿ ದಾಸನಿಗೆ ಕೊಡುತ್ತಿದ್ದವು. – ಇಲ್ಲಿ ಭಕ್ತಿ ಪರಂಪರೆಯ ದೇವಾದಿದೇವತೆಗಳ ಅವತಾರಗಳನ್ನೂ ಕಷ್ಟ ಕೋಟಲೆಗಳನ್ನೂ ನಿರುದ್ವಿಗ್ನವಾಗಿ ಬಿಂಬಿಸಲಾಗಿದೆ. ಮೇಲುನೋಟಕ್ಕೆ ಕಟ್ಟುಕಥೆಯಂತಿದ್ದರೂ ಒಳಹೊಕ್ಕು ನೋಡಿದರೆ ಅಷ್ಟಾದಶ ಪುರಾಣಗಳ ಕಟ್ಟು ಕಥೆಗಳನ್ನು ಒದರಿಹಾಕಲಾಗಿದೆ. ಇತ್ತ ಮನುಷ್ಯನ ಪ್ರಚಂಡ ಬುದ್ಧಿ ಚಾತುರ್ಯವನ್ನು ಅಂಗೆಯಲ್ಲಿಟ್ಟು ನೋಡಲಾಗಿದೆ. ಸೋಮಾರಿತನ, ದುರಾಸೆ, ಪಾಪದವರು ಸಿಕ್ಕಿದರೆ ಸುಲಿಗೆ ಮಾಡುವ ನಿಷ್ಕಾರುಣ್ಯ ಒಂದು ಕಡೆಗಾದರೆ, ಶೋಷಣೆಗೆ ಸಿಲುಕಿದ ದೀನಾನಾಥ ಜನರ ನೈತಿಕ ಸತ್ಯ ನಿಷ್ಠೆಯನ್ನು ಇನ್ನೊಂದು ಮಗ್ಗುಲಿನಿಂದ ಕೊಂಡಾಡಲಾಗಿದೆ. ದೇವರು, ದೆವ್ವ, ಏನೇ ಸಿಕ್ಕಿದರೂ ಪುಕ್ಕಟೆ ದುಡಿಸಿಕೊಳ್ಳಬಲ್ಲ ಶೋಷಕ ಪ್ರವೃತ್ತಿಗೆ ಹಿಡಿದ ಪ್ರತಿಮಾತ್ಮಕ ಕಥಾಚಿತ್ರ ಇದು (ಪು. ೨೨೨). ವೈದಿಕ ದೈವಗಳ ಪಾಡು ಇದೇ ಅಲ್ಲವೆ ?

ರಾಜಾವಳಿ ಕಥಾಸಾಗರದಲ್ಲಿ ಹೀಗೆ ವೈವಿಧ್ಯಮಯವಾದ ಅನೇಕ ಕಥೆಗಳುಂಟು. ಅವು ಗಳಲ್ಲಿ ಕೆಲವು, ರಾಜನ ಅವಿವೇಕವನ್ನು ತಿಳಿಸಿಕೊಡುವ ಕಳ್ಳನ ಕಥೆ; ಬಂಧು ಸತ್ಕಾರದಲ್ಲಿ ಕಪಟ ನಡತೆಯನ್ನು ತೋರಿಸುವ ಎಡಶ್ರುತಿಯ ಕಥೆ; ಅಪ್ರಬುದ್ಧನಾದ ಕೇತಗೌಡನ ಕಥೆ : ಅತ್ತೆ ಸೊಸೆಯರ ಕಥೆ, ಗೊಲ್ಲರ ಹೆಣ್ಣಿನ ಕಥೆ, ಕಾದಿರಲಿಂಗನ ಪ್ರಸಂಗ, ಕೊಡಲಿ ಏಟಿಗೆ ಹೆದರಿ ಸೌದೆ ಹೊರೆಯನ್ನು ತಮೂದ ದಿನಂಪ್ರತಿ ಕೃಷೀವಲನಿಗೆ ಒಪ್ಪಿಸುವ ಮಾರಿಯ ಕಥೆ ಇತ್ಯಾದಿ. ಇಷ್ಟಲ್ಲದೆ ಅನೇಕಾನೇಕ ಜಾರ ಚೋರ ಸ್ತ್ರೀ ಪುರುಷರ ಕಥೆಗಳು ಇಲ್ಲುಂಟು. ಒಟ್ಟಾರೆ ಜಾನಪದ ಜಗತ್ತಿನ ಚಂಡಪ್ರಚಂಡರು ಇಲ್ಲಿ ಮಂಡೆ ಬಗ್ಗಿಸಿ ಬಂದು, 'ಸ್ವಾಮಿ, ದೇವಚಂದ್ರರೇ ನಮ್ಮ ಬಗ್ಗೆ ಲೋಕಕ್ಕೆ ಏನಾದರೂ ಮಾಹಿತಿ ಹೇಳಲುಂಟೆ ?' ಎಂದು ವಿನೀತರಾಗುತ್ತಾರೆ.

ದೇವರು ಎಂಬುವವನು ಒಬ್ಬನಿದ್ದು ಈ ಪ್ರಪಂಚವನ್ನು ಸೃಷ್ಟಿಸಿದನೋ ಬಿಟ್ಟನೋ ಅದನ್ನು ಯಾರೂ ಇಷ್ಟೇ ಎಂದು ಹೇಳಲು ಬರುವುದಿಲ್ಲ. ಆದರೆ ದೇವರು ಧರ್ಮ ಶಾಸ್ತ್ರಗಳನ್ನು ಸೃಷ್ಟಿಸಿದವನು ಮಾತ್ರ ಮನುಷ್ಯನೇ. ಎಂದರೆ ಪುರಾಣ ಪ್ರಪಂಚವೆಲ್ಲ ಅಪೌರುಷೇಯವೇನಲ್ಲ. ಹೀಗಿರುವಾಗ ಮನುಷ್ಯ ತಾನಿರುವ ಮರ್ತ್ಯವ್ಯಾಪಾರಗಳನ್ನೆಲ್ಲ ತಾನು ಸೃಷ್ಟಿಸಿದ ದೈವಕ್ಕೂ ಆರೋಪಿಸಿದ್ದು ವಿಶೇಷವೇನಲ್ಲ. ಆದ್ದರಿಂದ ಹರಿ, ಹರ, ವಿರಂಚಿ ಆದ್ಯರು ಸಹ ಮನುಷ್ಯ ಲೋಕದ ಕಷ್ಟ ಸುಖಗಳನ್ನು ಬಲ್ಲವರೇ. ಈ ಪ್ರಕಾರ ಮಕ್ಕಳ ಲಾಲನೆ ಪಾಲನೆಯ ಸುಖ ದುಃಖ ದೇವತೆಗಳಿಗೂ ಉಂಟು. ಈ ಮಾತಿಗೆ ನಿದರ್ಶನವಾಗಿ ರಾಜಾವಳಿ ಕಥಾಸಾರದಲ್ಲಿ ದೇವತೆಗಳಿಗೂ... ಉಂಟು. ಈ ಮಾತಿಗೆ ನಿದರ್ಶನವಾಗಿ ರಾಜಾವಳಿ ಕಥಾಸಾರದಲ್ಲಿ ವ್ಯಕ್ತವಾಗಿರುವ ಗಜಾನನನ ಈ ಪ್ರಸಂಗವನ್ನು ನೋಡಬಹುದು : ವನಭೋಜನಕ್ಕೆಂದು ಪರಶಿವನ ಕುಟುಂಬ ಒಮ್ಮೆ ವನಕ್ಕೆ ಹೋಗಿದೆ. ಅಲ್ಲಿ ಪಾರ್ವತಿ ಅಡಿಗೆಗೆ ಸಿದ್ಧತೆ ಮಾಡುತ್ತಿರುವಾಗ ವಿನಾಯಕ ಅಲ್ಲಿ ಇಲ್ಲಿ ಸಿಕ್ಕಿದ ಹಣ್ಣು ಹಂಪಲು ನೋಡಿ ತಿನ್ನುತ್ತ ಗಜಾಸುರನ ಖಾಸಗೀ ತೋಟಕ್ಕೆ ನುಗ್ಗುವನು. ಗಜ ಭಕ್ಷಣಕ್ಕಾಗಿ ಅತ್ತಬಂದ ಗಜಾಸುರನು ಈ ಲಂಬೋದರನನ್ನು ಕಂಡು ಇದೊಂದು ವಿಚಿತ್ರವಾದ ಆನೆ ಮರಿಯೆಂದು ತಿಳಿದು, ಇಂದಿನ ಗ್ರಾಸಕ್ಕಾಯಿತು ಎಂದು ಹಿಡಿದು ಹೆಗಲೇರಿಸಿಕೊಂಡು ಪುರಕ್ಕೆ ಹೋದನು. ಉಪ್ಪರಿಗೆಯಿಂದ ತಂದೆಯ ಹೆಗಲಲ್ಲಿದ್ದ ಆನೆ ಮರಿಯನ್ನು ಕಂಡ ಅವನ ಮಗಳು ಅದರ ಮೇಲೆ ಮೋಹಗೊಂಡು ಅದನ್ನು ಬೇಡಿಕೊಂಡು ತನ್ನ ಸೌಧದಲ್ಲಿರಿಸಿಕೊಂಡಳು. ಗಜಾನನಿಗೆ ಬೇಕು ಬೇಕಾದ ಆಹಾರ ನೀಡಿ ಅವನ ನರ್ತನ ಕಂಡು ಇನ್ನೂ ಕುಣಿಸುತ್ತಿದ್ದಳು. ಇತ್ತ ಮಗನನ್ನು ಕಾಣದೆ ಮೂರು ಲೋಕದ ತಾಯಿ ಪಾರ್ವತಿ ದುಃಖಭರಿತಳಾದಳು. ಎಷ್ಟು ಹುಡುಕಿಸಿದರೂ ಸಿಗಲಿಲ್ಲ. ಕಡೆಗೆ ಲೋಕಸಂಚಾರಿಯಾದ ನಾರದನಿಗೆ ತಿಳಿದು ಆತ ಗಜಾಸುರನ ಪುರಕ್ಕೆ ಹೋಗಿ ವಿನಾಯಕನನ್ನು ಕರೆತರುತ್ತಾನೆ. ಹೀಗೆ ಕಥೆ ಸುಖಾಂತವಾಗಿ ಮುಗಿಯುತ್ತದೆ. ಇಲ್ಲಿರುವ ಮಧುರ ಹಾಸ್ಯವಂತೂ ಮನಂಬುಗುವಂತಿದೆ. (ಪು. ೨೬೦).

ಹೀಗೆ ನಗೆಯ ಬುಗ್ಗೆ ಉಕ್ಕುವಂತಹ ಅನೇಕ ಸಂಗತಿಗಳು ದೇವಚಂದ್ರನಲ್ಲಿ ಕಥೆಯಾಗಿವೆ. ಅಂಥ ಒಂದು ಪ್ರಸಂಗ ಮೈಸೂರು ರಾಜಗೌಡರ ಶ್ಯಾನುಭೋಗ ದೊಡ್ಡ ಶಾಂತಯ್ಯನು ಶ್ರೀರಂಗಪಟ್ಟಣದ ಶ್ರೀರಂಗರಾಯನನ್ನು ತನ್ನ ಒಡೆಯನ ಪರವಾಗಿ ನೋಡಲು ಹೋದದ್ದು. ಶ್ರೀರಂಗರಾಯ ರಾಜಗೌಡನನ್ನು ಬರಹೇಳಿದ್ದ. ಆದರೆ ಗೌಡನು ಯಾಕೋ ಹೆದರಿ ತನ್ನ ಶ್ಯಾನುಭೋಗನನ್ನು ಕಳುಹಿಸಲು ರೋಷಗೊಂಡ ಶ್ರೀರಂಗರಾಜ ''ಏನೋ ನಿನ್ನ ಗೌಡಂಗೆ ಕುಂಡೆ ಕಡಿಯುತ್ತಿದೆಯೇ ? ಹೇಳಿ ಕಳುಹಿಸ್ದರೆ ಬಾರದೆಯಿದ್ದಾನೆ ?'' ಎಂದನು. ಬುದ್ಧಿಮತಿಯಾದ ಶ್ಯಾನುಭೋಗನು ''ಹೌದು ಮಹಾಸ್ವಾಮಿ ಬಡತನದ ಪ್ರಯುಕ್ತ ಹಾರಕದ ಅಕ್ಕಿ ಅನ್ನ ಹುರುಳಿ ಹಾಲು ಹಣ್ಣು; ತಿಂದುದರಿಂದ ಅವರಿಗೆ ತುರಿಕೆ ಉಂಟಾಗಿ ತಮ್ಮ ಸನ್ನಿಧಿಗೆ ಬಾರದವರಾಗಿದ್ದಾರೆ'' ಎಂದು ಸಮರ್ಥಿಸಿಕೊಳ್ಳುವನು. 'ಇದು ಸತ್ಯವಲ್ಲ' ಎಂದ ಶ್ರೀರಂಗರಾಯ ರೋಷಾವೇಷದಿಂದ 'ತಾಮ್ರದ ಕೊಪ್ಪರಿಗೆಯನ್ನು ಕಾಸಿ ಈತನನ್ನು ಕುಳ್ಳಿರಿಸಿ' ಎಂದನು. ರಾಜ ಸೇವಕರು ಸಿದ್ಧತೆ ನಡೆಸಿದರು. ಶಾಂತಯ್ಯನು ಸಭೆಗೆ ಅಭಿಮುಖವಾಗಿ ಬಗ್ಗಿದನು. ತನ್ನ ಪೃಷ್ಠಭಾಗವು ರಾಯನಿಗೆ ಎದುರಾಗಲು ಅಂತರೀಯ ವಸ್ತ್ರವನ್ನು ಸೊಂಟದಿಂದ ಮೇಲೆತ್ತಿ ಕುಂಡೆಯನ್ನೂ ವೃಷಣವನ್ನೂ ತೋರಿಸುತ್ತಾ ಬಗ್ಗಿದನು. ರಾಯನ ಸನ್ನೆಯಿಂದ ಕಟ್ಟೆಗೆಯವರು ಅದನ್ನು ಮುಚ್ಚೆಂದು ದಂಡದಿಂದ ಹೊಡೆದರು. ಯಾಕೆ ಹೀಗೆ ಮಾಡಿದೆ ಎಂದು ಪ್ರಶ್ನಿಸಲು 'ಈ ಅಳಿವ ದೇಹವೂ ತಿಕವೂ ಬೆಂದರೆ ಅವುಷಧಿಯಿಂದ ಮಾಯಿಸಬಹುದು ಅಥವಾ ಮಾಯದಿದ್ದರೆ ತನಗೇ ಅಪಕೀರ್ತಿ ಹೋಗುವುದು, ಆದ್ದರಿಂದ ಎತ್ತಿದೆನು' ಎನ್ನಲು ರಾಜನು ದರಹಸಿತವದನನಾಗಿ ಗೌಡನಿಗೂ ಆತನ ಶಾನುಭೋಗನಿಗೂ ನಿಜವಾಗಿಯೂ ಬಡತನವಿದೆಯೆಂದು ಭಾವಿಸಿದವನಾಗಿ ಅವರಿಗೆ ಸಾಕಷ್ಟು ಉಂಬಳಿ ಉಡುಗೊರೆಯನ್ನು ಮಂಜೂರು ಮಾಡಿ ನಿರೂಪವನ್ನು ಬರೆಸಿಕೊಟ್ಟನು. (ಪು. ೨೧೫). ಪ್ರತ್ಯುತ್ಪನ್ನ ಮತಿಗಳಾದ ಮನುಷ್ಯರು ತಮ್ಮ ಪ್ರಾಣಾಂತಿಕ ಸನ್ನಿವೇಶದಲ್ಲೂ ಹಾಸ್ಯ ಸ್ವಭಾವವನ್ನು ರೂಢಿಸಿಕೊಂಡಿದ್ದರೆ ಒಳ್ಳೆಯದಾದೀತು ಎಂಬ ನೀತಿ ಇದರಿಂದ ತಿಳಿದುಬರುತ್ತದೆ.

ವಿನೋದ ಹಾಸ್ಯವು ಮನುಷ್ಯನ ಮನಸ್ಸಿಗೆ ಟಾನಿಕ್ ಇದ್ದ ಹಾಗೆ. ಮನುಷ್ಯ ಎಂಥೆಂಥದೋ ಟೆನ್ಷನ್‌ನಿಂದ ಒದ್ದಾಡುತ್ತಿರುತ್ತಾನೆ. ಆದರೆ ದೇವಚಂದ್ರನು ಉಲ್ಲೇಖಿಸುವಂತಹ ಜನಪದರ ಕಥೆಗಳನ್ನು ಕೇಳಿದರೆ ಅವು ಟೆನ್ಷನ್ ರಿಲೀಜ್ ಟ್ರೀಟ್‌ಮೆಂಟ್ ಇದ್ದಹಾಗೆ ನಮ್ಮ ಮನಸ್ಸನ್ನು ಉಲ್ಲಸಿತಗೊಳಿಸುತ್ತವೆ. ನಮ್ಮ ಸುತ್ತಮುತ್ತ ಇಂಥ ಅನೇಕ ಸಂಗತಿಗಳು ಜರುಗುತ್ತಿಲ್ಲವೆ ? ಇಲ್ಲಿ ಕೆಲವನ್ನು ನೋಡಿ : ಒಲ್ಲದ ನಂಟರು ಬಂದರೆ ಎಡ ಶ್ರುತಿ ದಂಪತಿಗಳಂತೆ, ಮೇಲೆ ಮೇಲೆ ಊಟೋಪಚಾರಕ್ಕೆ ಅಣಿ ಮಾಡುವವರಂತೆ ನಟಿಸಿ ಕಾರ್ಯತಃ ಏನೂ ಮಾಡದೆ ಬಂದ ನಂಟರು ತಾವಾಗಿಯೇ ಹೊರಟು ನಿಲ್ಲುವಂತೆ ಮಾಡುವ ಜಾಣರಿಲ್ಲವೆ ? ಆದರೂ ಇಂಥವರ ಮನೆಗೆ ಬಂದ ಜಗಮಂಡ ನೆಂಟರು ಅವರ ಎಲ್ಲ ಕಪಟಗಳನ್ನೂ ಮುಗ್ಧರಂತೆ ಇದ್ದುಕೊಂಡು ಬಯಲು ಮಾಡಿ ಉಂಡು ಹೋಗುವವರೂ ಇದ್ದಾರಲ್ಲವೆ ? (ಪು. ೨೩೭). ಅತ್ತೆಗೆ ಕಾಣದಂತೆ ಸೊಸೆ, ಸೊಸೆಗೆ ಕಾಣದಂತೆ ಅತ್ತೆ ಉಂಡು ತೇಗುವ ಮಂದಿ ಅಪರೂಪವೇನಲ್ಲ. ಅತ್ತೆ ಚಾಪೆ ಕೆಳಗೆ ತೂರಿದರೆ ಸೊಸೆ ರಂಗೋಲಿ ಕೆಳಗೆ ತೂರುತ್ತಾಳೆ. ಅತ್ತೆ ಮುಚ್ಚಳದಲ್ಲಿ ತಿಂದರೆ ಸೊಸೆ ಕೈಬಟ್ಟಲಿನಲ್ಲಿ ಕದದ ಹಿಂದೆ ತಿನ್ನುತ್ತಾಳೆ (ಪು. ೨೩೭). ಇಂಥ ಒಂದು ಸುಂದರ ಕಥೆ ಇಲ್ಲಿದೆ. ಅತ್ತೆ ಸೊಸೆಯರ ಕಿತ್ತಾಟವನ್ನೇ ಕಂಡ ನಮಗೆ ಎಷ್ಟೋ ರಿಲೀಫ್ ! ಈ ಕೆಲವು ಸ್ಯಾಂಪಲ್ಲುಗಳು ಇಲ್ಲಿ ಸಾಕು. ವಾಸ್ತವವಾಗಿ ಭಾರತೀಯರು ಸೀರಿಯಸ್ ಎಂಬ ಆಪಾದನೆ ಇದೆ. ಇದಕ್ಕೆ ಅಪವಾದ ದೇವಚಂದ್ರ.

**ಪ್ರೊ. ॥ ಶಿವರಾಮಯ್ಯ**
ನಂ. ೧೭೨, ಐಸಾಕ್ ರೋಡ್, ಟೀಚರ್ಸ್ ಕಾಲೋನಿ,
ನಾಗರಬಾವಿ, ಬೆಂಗಳೂರು-೫೬೦೦೭೨

# ಸಮಾರೋಪಗೊಂಡ ಪುಸ್ತಕ ವರ್ಷ

ಕೇಂದ್ರ ಸರ್ಕಾರ ೨೦೦೧-೨೦೦೨ ವರ್ಷವನ್ನು ಪುಸ್ತಕ ವರ್ಷ ಎಂದು ಘೋಷಣೆ ಮಾಡಿತ್ತು. ಈಗ ಆ ವರ್ಷ ಸಮಾರೋಪಗೊಂಡಿದೆ. ''ಎಲ್ಲರಿಗಾಗಿ ಪುಸ್ತಕಗಳು ಹಾಗೂ ಪುಸ್ತಕಗಳಿಗಾಗಿ ಎಲ್ಲರೂ'' ಎಂಬ ಘೋಷಣೆ ಮಾತ್ರ ಸಮಾರೋಪವಾಗಬಾರದು. ಪುಸ್ತಕ ಜೀವದ ಗೆಳೆಯ, ಪುಸ್ತಕಗಳು ನಮ್ಮನ್ನು ಬೆಳೆಸುತ್ತವೆ. ಆ ಕಾರಣದಿಂದ ನಾವು ಅದರ ಬೆಳವಣಿಗೆಗೆ ಸಹಕಾರಿಯಾಗಬೇಕು, ದೀಪದಿಂದ ದೀಪ ಬೆಳಗುವಂತೆ. ಒಳ್ಳೆಯ ಪುಸ್ತಕಗಳು ನಮ್ಮ ಜ್ಞಾನದ ದೀವಿಗೆಯನ್ನು ಬೆಳಗುತ್ತವೆ. ಜ್ಞಾನ ದಿಗಂತದತ್ತ ನಮ್ಮನ್ನು ಕರೆದೊಯ್ಯುತ್ತವೆ. ನಮ್ಮ ವ್ಯಕ್ತಿತ್ವವನ್ನು ಬೆಳೆಸುವಲ್ಲಿ ಪುಸ್ತಕದ ಹುಚ್ಚು ಸಹಕಾರಿಯಾಗುತ್ತದೆ.

ಆಕಾಶವಾಣಿ ಬಂದಾಗ ಓದುಗರ ಸಂಖ್ಯೆ ಕುಸಿಯುತ್ತದೆ ಎಂಬ ಹೆದರಿಕೆ ಉಂಟಾಗಿತ್ತು, ಆದರೆ ಹಾಗೆ ಆಗಲಿಲ್ಲ. ಕೇಳುಗರು ಓದುಗರಾದರು, ಓದುಗರು ಕೇಳುಗರಾದರು. ಆಮೇಲಿನ ದಿನಗಳಲ್ಲಿ ದೂರದರ್ಶನ ಬಂದಾಗ ಆಕಾಶವಾಣಿ, ಪುಸ್ತಕ ಎರಡೂ ಹೆದರಿಕೊಂಡವು. ಅಲ್ಲೂ ನಿರೀಕ್ಷೆಗಳು ಸುಳ್ಳಾದವು. ಆಮೇಲಿನ ದಿನಗಳಲ್ಲಿ ಕಂಪ್ಯೂಟರ್ ಬಂದಾಗ ಇಂಟರ್ ನೆಟ್, ಈ-ಮೇಲ್ ಹುಟ್ಟಿಕೊಂಡಾಗ ಪುಸ್ತಕದಂಗಡಿಯ ಬಾಗಿಲು ಊಟದ ಹೊತ್ತಿಗಿಂತ ಅದೆಷ್ಟೋ ಮುಂಚೆ ಮುಚ್ಚತೊಡಗಿದವು. ಆಗಲೇ ಅರಿವಾಗತೊಡಗಿತು, ಪುಸ್ತಕದ ಹುಚ್ಚು ಹಿಡಿದವನ ವ್ಯಕ್ತಿತ್ವ ಬೆಳೆಯುತ್ತದೆ ಎಂದು. ಮಾಯಾಪೆಟ್ಟಿಗೆ ನಮ್ಮನ್ನೇ ಮಾಯ ಮಾಡಿಬಿಡುತ್ತದೆ ಎಂದು ಸಹ ಅರಿವಾಗತೊಡಗಿತು.

ಇಂದು ಕನ್ನಡ ಪುಸ್ತಕ ಲೋಕವನ್ನು ನೋಡಿದರೆ ಹೊಸ ಹೊಸ ಪ್ರಕಾಶನ ಸಂಸ್ಥೆಗಳು ಬೆಳಕಿಗೆ ಬರುತ್ತಲೇ ಇವೆ. ಲೇಖಕರು ಪ್ರಕಾಶಕರಾಗುತ್ತಿದ್ದಾರೆ. ಕನ್ನಡ ಪುಸ್ತಕ ಪ್ರಾಧಿಕಾರದ ಅಂಕಿ ಸಂಖ್ಯೆಗಳ ವಿವರಗಳ ಪ್ರಕಾರ ಪ್ರತಿ ವರ್ಷ ೧೫೦೦ಕ್ಕೂ ಹೆಚ್ಚು ಕನ್ನಡ ಪುಸ್ತಕಗಳು ಪ್ರಕಟವಾಗುತ್ತಿವೆ. ಈ ವಿವರಗಳನ್ನು ನೀಡುವಷ್ಟರ ಮಟ್ಟಿಗೆ ಪ್ರಾಧಿಕಾರದ ಕಾರ್ಯ ಮುಗಿದುಹೋಗುತ್ತದೆ, ಅದರ ಮುಂದಿನ ವಿವರಗಳನ್ನು ನೀಡುವ ಗೋಜಿಗೆ ಪ್ರಾಧಿಕಾರ ಹೋಗುವುದಿಲ್ಲ. ನಮ್ಮಲ್ಲಿ ಪುಸ್ತಕವನ್ನು ಪೂಜಿಸುವ ಜನರಿದ್ದಾರೆಯೇ ಹೊರತು ಅದರ ಮೇಲೆ ನಿಜವಾದ ಪ್ರೀತಿ ವಾತ್ಸಲ್ಯವನ್ನು ತೋರಿಸುವ ಮಂದಿ ಕಡಿಮೆ ಇದ್ದಾರೆ.

ಕೆಲ ಪತ್ರಿಕೆಗಳಂತೂ ಪುಸ್ತಕಗಳ ಬಗ್ಗೆ ದಿವ್ಯ ನಿರ್ಲಕ್ಷ್ಯ ತಾಳಿವೆ. ಒಂದು ಸಣ್ಣ ಅಂಕಣವನ್ನು ಪುಸ್ತಕಕ್ಕಾಗಿ ಮೀಸಲಿಡದ ಪತ್ರಿಕೆಗಳು ನಮ್ಮಲ್ಲಿವೆ. ಇನ್ನು ಕೆಲ ಪತ್ರಿಕೆಗಳಲ್ಲಿ ವಿಮರ್ಶೆ ಅಂಕಣಗಳು ತುಂಬ ಶೀಘ್ರಗತಿಯಲ್ಲಿರುತ್ತವೆ. ಕಳೆದ ವಾರ ಬಂದ ಪುಸ್ತಕ ಈ ವಾರ ವಿಮರ್ಶೆಗೆ ಒಳಗಾಗುತ್ತದೆ. ಈ ನೀತಿ ಬದಲಾಗಬೇಕು. ಓದುಗನೇ ಪುಸ್ತಕದಂಗಡಿಗೆ ತೆರಳಿ ಪುಸ್ತಕ ನೋಡಿ ಖರೀದಿ ಮಾಡಬೇಕು. ಆತ ತನ್ನೊಳಗೆ ವಿಮರ್ಶಕನಾಗಬೇಕು. ವಿಮರ್ಶೆ ಬೇಗ ಬಂದಲ್ಲಿ ಓದುಗ ವಿಮರ್ಶೆಯನ್ನು ಅವಲಂಬಿಸುತ್ತಾನೆ. ವಿಮರ್ಶೆ ಯಾವಾಗಲೂ ನಿಧಾನವಾಗಿ ಬರಬೇಕು. ಆವಾಗ ನಮ್ಮಲ್ಲಿ ಪುಸ್ತಕ ಸಂಸ್ಕೃತಿ ಬೆಳೆಯಬಹುದು, ಉಳಿಯಬಹುದು.

ಈಗ ನಮ್ಮಲ್ಲಿ ನಾವೇ ಪ್ರಶ್ನೆ ಮಾಡಿಕೊಳ್ಳಬಹುದು: ಪುಸ್ತಕ ವರ್ಷದಲ್ಲಿಯಾದರೂ ಪುಸ್ತಕದ ಓದುಗರು ಬೆಳೆದಿದ್ದಾರೆಯೇ, ಬೆಳೆಯಬಹುದೇ ಎಂದು. ''ಎಲ್ಲರಿಗಾಗಿ ಪುಸ್ತಕಗಳು ಹಾಗೂ ಪುಸ್ತಕಗಳಿಗಾಗಿ ಎಲ್ಲರೂ'' ಎನ್ನುವ ಘೋಷಣಾ ವಾಕ್ಯ ವಾಕ್ಯವಾಗಿಯೇ ಉಳಿಯುತ್ತದೋ ಅಥವಾ ವಾಕ್ಯದಂತಹ ಬದುಕು ಎದುರಾಗಬಹುದೋ ಎನ್ನುವ ಕಾತುರ ಎಲ್ಲರಿಗಿದೆ.

ಕಾಲೇಜು ಗ್ರಂಥಾಲಯದ ಸ್ಥಿತಿ ಕೂಡ ಇದೇ. ಗ್ರಂಥಪಾಲಕನಿಲ್ಲದ ಕಾಲೇಜುಗಳಲ್ಲಿ ಪುಸ್ತಕ ಗೆದ್ದಲು ಹಿಡಿದದ್ದು ಇದೆ. ಕೆಲವರು ಪುಸ್ತಕ ಜಾಗೃತಿಯ ಸಲುವಾಗಿ ಇವತ್ತು ಕೊಂಡುಹೋದ ಪುಸ್ತಕ ನಾಳೆ ಕಪಾಟು ಸೇರಬೇಕು ಎಂದವರು ಇದ್ದಾರೆ. ಇಂತಹ ಅಪ್ಪಣೆಗಳು ವಿದ್ಯಾರ್ಥಿಗಳನ್ನು ಓದುಗರನ್ನಾಗಿಸದು. ಕನ್ನಡ ಪುಸ್ತಕಗಳ ಮಟ್ಟಿಗೆ ಹೇಳುವುದಾದರೆ ಅನುದಾನಿತ ಖಾಸಗಿ ಪ್ರಾಥಮಿಕ ಶಾಲೆಗಳಲ್ಲಿ ಫಲಿತಾಂಶದ ನೆವ ಹಿಡಿದು ಪಠ್ಯೇತರ ಪುಸ್ತಕ ಓದಬಾರದು ಎನ್ನುವ ಕಟ್ಟಪ್ಪಣೆ ವಿಧಿಸಿ ಪುಸ್ತಕದ ಬದನೆಕಾಯಿಯಾಗಿಸುವ ಅಧ್ಯಾಪಕರು ಇದ್ದಾರೆ. ನನ್ನ ಅನುಭವಕ್ಕೆ ಬಂದ ಒಂದು ಪ್ರಸಂಗದಲ್ಲಿ ಆಂಗ್ಲ ಮಾಧ್ಯಮ ಶಾಲೆಯ ಅಧ್ಯಾಪಿಕೆಯೊಬ್ಬರು ಪುಸ್ತಕ ಆಯ್ಕೆ ಮಾಡಿಕೊಳ್ಳುವ ಸಂದರ್ಭದಲ್ಲಿ ''ನಮಗೆ ಕನ್ನಡ ಪುಸ್ತಕ ಬೇಡ, ನಮ್ಮ ವಿದ್ಯಾರ್ಥಿಗಳಿಗೆ ಕನ್ನಡ ಪುಸ್ತಕವೆಂದರೆ ಅಲರ್ಜಿ; ಅವರು ಕನ್ನಡ ಪುಸ್ತಕ ಮುಟ್ಟಿ ನೋಡುವುದಿಲ್ಲ'' ಎಂದಿದ್ದರು. ನಾನು ಮನದಲ್ಲೇ ಗುಣುಗಿಕೊಂಡೆ: ಇವರು ಕರ್ನಾಟಕದಲ್ಲಿ ಹುಟ್ಟಿದ್ದು ಒಂದು ದೊಡ್ಡ ದುರಂತ ಎಂದು.

ಒಟ್ಟಿನಲ್ಲಿ ನೋಡುವುದಾದರೆ ಪುಸ್ತಕ ವರ್ಷದಲ್ಲಿ ಸಹ ಇದು ಪುಸ್ತಕ ವರ್ಷ ಎಂದು ಶಾಲೆ ಕಾಲೇಜುಗಳಿಗೆ ತಿಳಿಯಲೇ ಇಲ್ಲ. ನಮ್ಮ ಯುವಜನತೆಗೆ ಪುಸ್ತಕಗಳನ್ನು ಮುಟ್ಟಿಸುವ ಕ್ರಮವನ್ನೂ ಸಮಗ್ರವಾಗಿ ರೂಪಿಸಬೇಕಾಗಿದೆ.

ಎ. ರಾಧಾಕೃಷ್ಣ
ಆನೆಗುಂಡಿ ಮನೆ, ಕೈರಂಗಳ ಅಂಚೆ, ಬಂಟ್ವಾಳ ತಾ॥
ದ. ಕ. ಜಿಲ್ಲೆ - ೫೭೪೧೫೩

# ಈ ಮನ್ವಂತರದ ಬಂಡಾಯಗಾರ ಗಾಂಧೀಜಿ

ಭಾರತೀಯ ವಿದ್ಯಾಭವನದ ಆಶ್ರಯದಲ್ಲಿ ನೀಡಿದ ಒಂದು ಉಪನ್ಯಾಸವನ್ನಾಧರಿಸಿದ ಲೇಖನ ಇದು.

**ಎಚ್. ಎಸ್. ದೊರೆಸ್ವಾಮಿ**

**ಈ** ಬಂಡಾಯಗಾರ ಗಾಂಧಿ ಬೇರೆಯವರಿಗಿಂತ ಭಿನ್ನರಾದ ಒಬ್ಬ ಕ್ರಾಂತಿಕಾರಿ. ಗಾಂಧೀಜಿ ಯೋಗ್ಯ ಕಾನೂನುಗಳನ್ನು ಪಾಲಿಸುವವರಾಗಿದ್ದರು. ಅನ್ಯಾಯ ಎಲ್ಲೇ ಇರಲಿ, ಅದನ್ನು ವಿರೋಧಿಸುವವರಾಗಿದ್ದರು.

ಗಾಂಧೀಜಿ ಒಬ್ಬ ಕ್ರಿಯಾಶಾಲಿತ್ವದ ವ್ಯಕ್ತಿತ್ವ ಉಳ್ಳವರು. ಎಲ್ಲರನ್ನೂ ಮೆಚ್ಚಿಸಬೇಕೆಂಬ ಆಶಯ ಅವರದ್ದಾಗಿರಲಿಲ್ಲ. ಬಡವರ ಪ್ರತಿನಿಧಿಯಾಗಿ ಉಳಿಯಲು ಸರಳ ಜೀವನ ನಡೆಸಿದರು. ಬಡತನ ಭಾರತದಲ್ಲಿ ನೀಗುವವರೆಗೆ ತಾನೂ ಸ್ವಯಂ ಪ್ರೇರಣೆಯಿಂದ ಬಡತನ ಅಪ್ಪಿಕೊಳ್ಳುವುದಾಗಿ ಹೇಳಿದರು. ಹಾಗೆಂದ ಮಾತ್ರಕ್ಕೆ ಗಾಂಧೀಜಿ ಬಡತನದ ಆರಾಧಕರಾಗಿದ್ದರೆಂದು ಭಾವಿಸಬಾರದು. ಬಡತನ ಒಂದು ಅಭಿಶಾಪ ಎಂದು ಅವರು ತಿಳಿದಿದ್ದರು. ಹಾಗೆ ನೋಡಹೋದರೆ, ಅವರು ಸ್ವಾತಂತ್ರ್ಯ ಬೇಕೆಂದು ಬಯಸಿದ್ದೇ ಬಡತನವನ್ನು ಭಾರತದಿಂದ ತೊಲಗಿಸುವುದಕ್ಕಾಗಿ.

ಸ್ವಾತಂತ್ರ್ಯ ಬಂದು ೫೪ ವರ್ಷ ಕಳೆದರೂ ಸರ್ಕಾರ ಬಡತನ ನಿರ್ಮೂಲನ ಮಾಡುವುದಕ್ಕೆ ಯಾವುದೇ ಪರಿಣಾಮಕಾರಿ ಯೋಜನೆಯನ್ನೂ ಹಾಕಿಕೊಂಡಿಲ್ಲ. ಅಷ್ಟೇ ಅಲ್ಲ, ಸ್ವಾತಂತ್ರ್ಯ ಬಂದ ಮೇಲೆ ಬಡತನದ ಸೀಮಾರೇಖೆಯ ಕೆಳಗಿರುವವರ ಸಂಖ್ಯೆ ಭಾರತದ ಜನಸಂಖ್ಯೆಯ ಶೇ. ೪೦ರಷ್ಟಕ್ಕೆ ಬೆಳೆದಿದೆ.

ಗಾಂಧೀಜಿ ಬಾಲ್ಯದಲ್ಲಿ ಬಹಳ ಅಂಜು ಬುರುಕರಾಗಿದ್ದರು. ರಾತ್ರಿ ವೇಳೆ ಒಬ್ಬರೇ ಮನೆಬಿಟ್ಟು ಹೊರಗೆ ಹೋಗಲು ಹೆದರುತ್ತಿದ್ದರು. ರಾತ್ರಿ ವೇಳೆ ಮನೆಯಿಂದ ಹೊರಗೆ ಹೋಗಬೇಕಾದ ಅನಿವಾರ್ಯತೆ ಒದಗಿದಾಗ, ಕಸ್ತೂರಿ ಬಾ ಅವರನ್ನೂ ಜೊತೆಗೆ ಬರಲು ಕಾಡಿದ್ದೂ ಉಂಟು. ಕಸ್ತೂರಿ ಬಾ ಜೊತೆಗೆ ಅವರ ಮದುವೆ ಆದಾಗ ಅವರಿಗೆ ೧೨ ವಯಸ್ಸು. ಕಸ್ತೂರಿ ಬಾಗೆ ೯ ವರ್ಷ. ಗಾಂಧೀಜಿ ಇಂಗ್ಲೆಂಡಿನಲ್ಲಿ ವ್ಯಾಸಂಗ ಮಾಡುವಾಗಲೂ ಅಂಜುಪುರಕರಾಗಿದ್ದರು, ಸಂಕೋಚ ಪ್ರಕೃತಿಯವರಾಗಿದ್ದರು.

ಬಾರ್-ಅಟ್-ಲಾ ಆಗಿ ಭಾರತಕ್ಕೆ ಬಂದು ವಕೀಲರಾಗಿ ಬೊಂಬಾಯಿಯಲ್ಲಿ ವೃತ್ತಿ ಆರಂಭಿಸಿದ ಹೊಸದರಲ್ಲಿ ತಾವು ಹಿಡಿದ ಮೊದಲ ಕೇಸನ್ನು ನ್ಯಾಯಾಧೀಶರ ಮುಂದೆ ಮಂಡಿಸುವ ಸಂದರ್ಭದಲ್ಲಿ ಅವರು ಬೆವತು ಹೋದರು. ಕೈಕಾಲುಗಳು ನಡುಗ ಲಾರಂಭಿಸಿದವು. ಮಾತು ಹೊರಡ ದಾಯಿತು. ಮುಂದೆ ಅವರು ನ್ಯಾಯಾಲಯಕ್ಕೆ ಹೋಗುವುದನ್ನೇ ಕೈಬಿಟ್ಟರು. ತಮ್ಮ ಕಚೇರಿಯಲ್ಲಿ ಕೂತು ಕಕ್ಷಿದಾರರಿಗೆ ಕೇಸಿಗೆ ಸಂಬಂಧಪಟ್ಟಂತೆ ಅರ್ಜಿ ಬರೆದುಕೊಡುವುದರಲ್ಲೇ ಅವರು ತೃಪ್ತಿಪಟ್ಟುಕೊಂಡರು.

ಇಂತಹ ಅಂಜುಬುರಕ ಗಾಂಧೀಜಿ ದಕ್ಷಿಣ ಆಫ್ರಿಕಾದಲ್ಲಿ ಭಾರತೀಯರನ್ನು ಸರ್ಕಾರ ನಡೆಸಿಕೊಳ್ಳುತ್ತಿದ್ದ ರೀತಿಗೆ ರೋಸಿ, ಬಿಳಿಯರ ಸರ್ಕಾರದ ವಿರುದ್ಧವಾಗಿ ಅಲ್ಲಿದ್ದ ಭಾರತೀಯರ ಸಂಘಟನೆ ಮಾಡಿ, ಸರ್ಕಾರದ ವಿರುದ್ಧ ಸಮರ ಸಾರಿ, ಆ ಅನ್ಯಾಯಗಳನ್ನು ಸರ್ಕಾರ ಸರಿಪಡಿಸುವವರೆಗೆ ಹೋರಾಟ ನಡೆಸಿದರು. ಈ ಶಕ್ತಿ ಅವರಿಗೆ ಹೇಗೆ ಬಂತು ?

ದಕ್ಷಿಣ ಆಫ್ರಿಕಾದಲ್ಲಿ ನೆಲೆಸಿ ವ್ಯಾಪಾರದಲ್ಲಿ ತೊಡಗಿದ್ದ ಅಬ್ದುಲ್ಲಾ ಎನ್ನುವ ಭಾರತೀಯ ಅಲ್ಲಿಯ



ನ್ಯಾಯಾಲಯ ಒಂದರಲ್ಲಿ ತಮ್ಮದೊಂದು ಖಟ್ಲೆಯಲ್ಲಿ ತಮ್ಮ ಪರವಾಗಿ ವಾದ ಮಾಡಲು ಬರಬೇಕೆಂದು ಕೋರಿದರು. ಅದರಂತೆ ಗಾಂಧೀಜಿ ದಕ್ಷಿಣ ಆಫ್ರಿಕಕ್ಕೆ ಹೋದರು. ನ್ಯಾಯಾಲಯಕ್ಕೆ ವಕೀಲರಾಗಿ ರುಮಾಲು ಸುತ್ತಿಕೊಂಡು ಹೋದ ಗಾಂಧಿಯವರನ್ನು 'ರುಮಾಲೆ ತೆಗೆಯಿರಿ, ಹ್ಯಾಟ್ ಹಾಕಿಕೊಂಡು ಕೋರ್ಟಿಗೆ ಬನ್ನಿ' ಎಂದು ನ್ಯಾಯಾಧೀಶರು ರೇಗಿ ಹೇಳಿದರು. ತಮಗಾದ ಅವಮಾನದ ಬಗೆಗೆ ಆಲೋಚನೆ ಮಾಡುತ್ತಿರುವಾಗ ಅಲ್ಲಿರುವ ಭಾರತೀಯರೆಲ್ಲರಿಗೂ ಈ ಬಗೆಯಲ್ಲಿ ಅವಮಾನಗೊಳಿಸುವ ಅನೇಕ ಕಾಯ್ದೆಗಳು ಅಡ್ಡ ಬರುತ್ತಿವೆ ಎಂಬ ಅರಿವಾಯಿತು ಗಾಂಧೀಜಿಗೆ. ತಮ್ಮ ದಂಧೆಗೆ ಎಲ್ಲಿ ಅಡ್ಡಿ ಬರುವುದೋ ಎಂಬ ಭಯದಿಂದ ಅವರೆಲ್ಲ ಆ ಎಲ್ಲ ಅಪಮಾನಗಳನ್ನು ನುಂಗಿಕೊಂಡು ದಿನ ನೂಕುತ್ತಿರುವ ವಿಚಾರವೂ ಅವರ ಗಮನಕ್ಕೆ ಬಂತು.

ಒಮ್ಮೆ ಅಬ್ದುಲ್ಲಾನ ಕೇಸಿಗೆ ಸಂಬಂಧಿಸಿದಂತೆ ಡರ್ಬಾನ್‌ನಿಂದ ಜೋಹಾನ್ಸ್‌ಬರ್ಗ್‌ಗೆ ಹೋಗ ಬೇಕಾಗಿತ್ತು. ಅಬ್ದುಲ್ಲಾ ಒಂದು ಮೊದಲನೆಯ ತರಗತಿಯ ರೈಲ್ವೆ ಟಿಕೆಟ್ ತೆಗೆದುಕೊಟ್ಟು, ಅವರನ್ನು ರೈಲಿನಲ್ಲಿ ಕೂಡಿಸಿದರು. ಒಂದೆರಡು ಸ್ಟೇಷನ್ ದಾಟುವದರಲ್ಲಿ ಮೊದಲನೆ ದರ್ಜೆ ಡಬ್ಬಿಯಲ್ಲಿ ಇವರೊಡನೆ ಕುಳಿತಿದ್ದ ಇಬ್ಬರು ಮೂವರು ಬಿಳಿಯರು ಗಾಂಧೀಜಿಯನ್ನು ಬೇರೆ ಡಬ್ಬಿಯಲ್ಲಿ ಹೋಗಿ ಕುಳಿತು ಕೊಳ್ಳುವಂತೆ ತಾಕೀತು ಮಾಡಿದರು. ಇದು ಗಾಂಧೀಜಿಗೆ ಅಸಮಾಧಾನ ಉಂಟು ಮಾಡಿತು. 'ನನ್ನ ಹತ್ತಿರಲೂ ಮೊದಲ ತರಗತಿಯ ಟಿಕೆಟ್ ಇದೆ' ಎಂದರು. ಆ ಬಿಳಿಯರು ''ಇದ್ದರೇನಂತೆ, ಬೇರೆ ಕಡೆ ಹೋಗಿ ಕುಳಿತುಕೊಳ್ಳಿ'' ಎಂದು ಆಗ್ರಹಪಡಿಸಿದರು. ಗಾಂಧೀಜಿ ಸೀಟು ಬಿಟ್ಟು ಕದಲಲಿಲ್ಲ. ರೈಲು ಮುಂದಿನ ಸ್ಟೇಷನ್‌ನಲ್ಲಿ ನಿಂತ ಒಡನೆ, ನಡುರಾತ್ರಿಯಲ್ಲಿ ಆ ಬಿಳಿಯರು ಗಾರ್ಡ್‌ನನ್ನು ಕರೆದು ಇವರನ್ನು ಹೊರಗೆ ಹಾಕಲು ಹೇಳಿದರು. ಅವನು ಪೊಲೀಸರನ್ನು ಕರೆಸಿದ. ಪೊಲೀಸರು ಗಾಂಧೀಜಿಯನ್ನು ಎಳೆದುಕೊಂಡು ಹೋಗಿ ರೈಲಿನಿಂದ ಬಲವಂತವಾಗಿ ಇಳಿಸಿ, ಅವರ ಹಾಸಿಗೆ ಪೆಟ್ಟಿಗೆಗಳನ್ನು ಪ್ಲಾಟ್ ಫಾರಂಗೆ ಎಸೆದರು. ತನಗೆ ಆದ ಅವ ಮಾನದ ನೋವನ್ನು ಅನುಭವಿಸುತ್ತಾ ಪ್ಲಾಟ್‌ಫಾರಂನ ಮೇಲೆ ಕುಳಿತರು. ಡಿಸೆಂಬರ್ ಛಳಿಯಿಂದ ನಡುಗುತ್ತಿದ್ದ ಗಾಂಧೀಜಿಗೆ ಪೆಟ್ಟಿಗೆ ಯಲ್ಲಿದ್ದ ಶಾಲು ತೆಗೆದುಕೊಂಡು ಹೊದ್ದುಕೊಳ್ಳಲೂ ಮನಸ್ಸಾಗಲಿಲ್ಲ. ಕುಳಿತು ಯೋಚನೆ ಮಾಡಿದರು. 'ಇಲ್ಲಿ ದಿನನಿತ್ಯ ಆಗುವ ಅಪಮಾನಗಳನ್ನೆಲ್ಲ ಹೇಗೆ ಸಹಿಸು ವುದು ? ಇರುವುದು ಎರಡೇ ದಾರಿ ಭಾರತಕ್ಕೆ ಕೂಡಲೇ ಹಿಂತಿರುಗುವುದು

ಅಥವಾ ಈ ಅನ್ಯಾಯಗಳ ವಿರುದ್ಧ ಸತತವಾಗಿ ಹೋರಾಟ ಮಾಡುವುದು ?' ಪಲಾಯನ ಸೂತ್ರ ಅವರಿಗೆ ಸರಿ ಕಾಣಲಿಲ್ಲ. ಆದ್ದರಿಂದಲೇ ಇಲ್ಲೇ ಇದ್ದು ಅನ್ಯಾಯಗಳನ್ನು ಎದುರಿಸುವುದು ಎಂಬ ತೀರ್ಮಾನಕ್ಕೆ ಬಂದರು. ಅಂದು ರಾತ್ರಿ ಗಾಂಧೀಜಿ ಅವರ ಸತ್ಯಾಗ್ರಹದ ಉಗಮವಾಯಿತು. ಗಾಂಧೀಜಿಯು ಮನ್ವಂತರದ ಬಂಡಾಯಗಾರ ರಾಗಲು ತೀರ್ಮಾನಿಸಿದರು. ಈ ಬಂಡಾಯಗಾರ ಎಲ್ಲ ಬಂಡಾಯಗಾರರಂತಲ್ಲ. ಅನ್ಯಾಯದ ಕಾನೂನುಗಳನ್ನು ವಿರೋಧಿಸುವುದು, ಯೋಗ್ಯವಾದ ಕಾನೂನುಗಳನ್ನು ಮಾನ್ಯ ಮಾಡುವುದು ಈ ಬಂಡಾಯಗಾರನ ನೀತಿಯಾಗಿತ್ತು. ಕೇವಲ ಅಬ್ದುಲ್ಲಾನ ಪರವಾಗಿ ಅವನು ಹೂಡಿದ ಕೇಸನ್ನು ನಡೆಸುವುದಕ್ಕಾಗಿ ಕೆಲಕಾಲ ಇರಲು ಬಂದ ಗಾಂಧೀಜಿ, ಒಬ್ಬ ಬಂಡಾಯಗಾರನಾಗಿ ೨೨ ವರ್ಷಗಳ ಕಾಲ ದಕ್ಷಿಣ ಆಫ್ರಿಕಾದಲ್ಲಿ ಉಳಿಯ ಬೇಕಾಯಿತು. ಅವರು ಅಲ್ಲಿ ಭಾರತೀಯರನ್ನೆಲ್ಲ ಸಂಘಟನೆ ಮಾಡಿದರು. ಅವರನ್ನು ಹೋರಾಟಕ್ಕೆ ಅಣಿ ಮಾಡಿದರು. ಭಾರತೀಯರ ಹಿತಾಸಕ್ತಿಗೆ ಧಕ್ಕೆ ತರುವ ಸರ್ಕಾರದ ಒಂದೊಂದು ಕೆಟ್ಟ ಕಾನೂನಿನ ವಿರುದ್ಧವಾಗಿ, ಮುಂಚೂಣಿಯಲ್ಲಿ ನಿಂತು ಹೋರಾಡಿ ದರು. ಸೆರೆಮನೆಗೆ ಹೋದರು. ಈ ಅವ್ಯಾಹತ ಹೋರಾಟದ ಫಲವಾಗಿ ಭಾರತೀಯರ ವಿರುದ್ಧವಾಗಿ ಹೇರಲಾಗಿದ್ದ ಎಲ್ಲ ದುಷ್ಟ ಶಾಸನಗಳನ್ನು ಸರ್ಕಾರ ಹಿಂದೆಗೆದು ಕೊಳ್ಳುವುದು ಅನಿವಾರ್ಯವಾಯಿತು. ದಕ್ಷಿಣ ಆಫ್ರಿಕಾದಲ್ಲಿದ್ದ ಭಾರತೀಯರು ತಲೆ ಎತ್ತಿಕೊಂಡು ಓಡಾಡುವಂತಾಯಿತು. ಒಪ್ಪಂದದ ಕಾರ್ಮಿಕರಾಗಿ ದಕ್ಷಿಣ ಆಫ್ರಿಕಾಕ್ಕೆ ಹೊಟ್ಟೆಪಾಡಿಗಾಗಿ ಹೋದ ಬಡಜನತೆಗೂ ನ್ಯಾಯ ದೊರಕಿ ಅವರ ಮೇಲೆ ದಿನನಿತ್ಯ ಆಗುತ್ತಿದ್ದ ಅತ್ಯಾಚಾರ ಅನಾಚಾರಗಳು ಕೊನೆಗೊಂಡವು. ಗೌರವಯುತ ಪ್ರಜೆಗಳನ್ನಾಗಿ ಅವರನ್ನೂ ದಕ್ಷಿಣ ಆಫ್ರಿಕದ ಜನತೆ ಮತ್ತು ಸರ್ಕಾರ ನಡೆಸಿಕೊಳ್ಳುವ ಸತ್‌ಸಂಪ್ರದಾಯ ಜಾರಿಗೆ ಬಂತು.

ಮುಂದೆ ೧೯೧೬ರಲ್ಲಿ ಬಂಡಾಯಗಾರ ಗಾಂಧೀಜಿ ದಕ್ಷಿಣ ಆಫ್ರಿಕದಿಂದ ಭಾರತಕ್ಕೆ ಬಂದರು. ಭಾರತದಲ್ಲಿ ಸ್ವಾತಂತ್ರ್ಯ ಸಂಗ್ರಾಮಕ್ಕೆ ಧುಮುಕುವ ಮೊದಲು ಅವರು ಅವರ ರಾಜಕೀಯ ಗುರು ಗೋಪಾಲ ಕೃಷ್ಣ ಗೋಖಲೆಯವರ ಆಣತಿಯ ಮೇರೆಗೆ ಭಾರತವನ್ನೆಲ್ಲ ಸುತ್ತಿಬಂದರು. ತಾವು ದೇಶದ ನಾಯಕತ್ವ ವಹಿಸುವ ಮುನ್ನ ಮುಂದೆ ತಮ್ಮ ಹಿಂಬಾಲಕರಾಗುವ ಜನರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಪರಿಸ್ಥಿತಿ ಏನು ಎಂಬುದರ ಅಧ್ಯಯನ ನಡೆಸಿದರು. ಬ್ರಿಟಿಷರ ಆಡಳಿತದ ಫಲವಾಗಿ ಭಾರತೀಯ ಜನಜಂಗುಳಿ ಬಡತನ, ಅಜ್ಞಾನಗಳಲ್ಲಿ ಅದ್ದಿ ಹೋಗಿರುವುದನ್ನೂ ಗಾಂಧೀಜಿ ಈ ಪ್ರವಾಸ ದಲ್ಲಿ ಕಂಡುಕೊಂಡರು. ತಾನು ಬಡತನದಲ್ಲಿ ತೊಳ ಲಾಡುವ ಜನರ ಪ್ರತಿನಿಧಿ ಎನಿಸಬೇಕಾದರೆ, ತಾನೂ ಸ್ವಪ್ರೇರಣೆಯಿಂದ ಬಡತನವನ್ನಪ್ಪಿಕೊಳ್ಳಬೇಕೆಂಬ ತೀರ್ಮಾನಕ್ಕೆ ಬಂದರು. ತುಂಡುಮುಂಡು ಧರಿಸಿ,



### ಚುಟುಕು

ಚುಟುಕು
ಇಬ್ಬನಿಯ ಹಾಗೆ
ಇರುವುದು ಹುಲ್ಲಿನ ದಳದ ಮೇಲೆ
ಪ್ರತಿಫಲಿಸುವುದು ಸೂರ್ಯನನ್ನು !

ಎಂ. ವಿ. ಚಕ್ರಪಾಣಿ
೧/೧೬೦, ಕುರುದಗಡ್ಡಿ, ಹೌಸಿಂಗ್ ಬೋರ್ಡ್ ಕಾಲನಿ
ಹಗರಿಬೊಮ್ಮನಹಳ್ಳಿ-೫೮೩ ೨೧೨

ಬಡತನದ ಜೀವನಕ್ರಮವನ್ನು ತಮ್ಮದಾಗಿಸಿಕೊಂಡರು.

ಕಾಂಗ್ರೆಸ್‌ನ ಚುಕ್ಕಾಣಿ ಹಿಡಿಯುವ ಮೊದಲೆರಡು ಮೂರು ವರ್ಷಗಳ ಕಾಲ ಅವರು ಗುಜರಾತಿ ನಲ್ಲಿದ್ದುಕೊಂಡು ಭಾರತೀಯ ರೈತರು, ಕಾರ್ಮಿಕರು ಎದುರಿಸುತ್ತಿರುವ ಸಮಸ್ಯೆಗಳ ಅಧ್ಯಯನ ಮಾಡಿದರು.

ಬಿಹಾರದ ಚಂಪಾರಣ್ ಜಿಲ್ಲೆಯ ನೀಲಿ ಬೆಳೆಗಾರರನ್ನು ಇಂಗ್ಲಿಷ್ ಕಂಪೆನಿಗಳವರು ಶೋಷಣೆಗೆ ಒಳಗು ಮಾಡಿದ್ದರು. ರೈತರು ತಾವು ತಮ್ಮದೇ ಜಮೀನಿನಲ್ಲಾಗಲಿ, ಲೀಸ್ ಮೇಲೆ ಪಡೆದ ಜಮೀನಿನಲ್ಲಾಗಲಿ ಇಂತಿಷ್ಟು ನೀಲಿ ಬೆಳೆಯನ್ನು ಬೆಳೆದು ಕೊಡಬೇಕೆಂದೂ, ತಾವು ನಿರ್ಧರಿಸಿದ ಬೆಲೆಯಲ್ಲಿ ನೀಲಿಯನ್ನು ರೈತರು ತಮಗೆ ಮಾರಾಟ ಮಾಡಬೇಕೆಂದೂ ಒತ್ತಾಯದ ಒಪ್ಪಂದ ಮಾಡಿ ಕೊಂಡಿದ್ದರು. ಇದನ್ನೆಲ್ಲ ಅಧ್ಯಯನ ಮಾಡಿದ ಗಾಂಧೀಜಿ ನೀಲಿ ಬೆಳೆಗಾರರನ್ನು ಸಂಘಟನೆ ಮಾಡಿ ಅವರ ಪರವಾಗಿ ಹೋರಾಡಲು ನಿರ್ಧಾರ ಮಾಡಿದರು. ನೀಲಿ ಉದ್ಯಮಿಗಳು ಬೆಳೆಗಾರರನ್ನು ಪ್ರತಿನಿಧಿಸಲು ನೀವ್ಯಾರು ಎಂದು ಗಾಂಧೀಜಿಯನ್ನು ಪ್ರಶ್ನಿಸಿದರು. ಗಾಂಧೀಜಿಯನ್ನು ಕೊಲೆ ಮಾಡುವ ಸಂಚು ನಡೆದಿದೆ ಎಂಬ ಸುದ್ದಿಯೂ ಹೊರಬಿತ್ತು. ಗಾಂಧೀಜಿಗೆ ಈ ಸುದ್ದಿ ತಿಳಿದಾಗ ರಾತ್ರಿ ೭-೩೦ ಘಂಟೆ. ಅವರು ತಾವೊಬ್ಬರೇ ಒಂದು ಲಾಟೀನ್ ಹಚ್ಚಿ ತೆಗೆದುಕೊಂಡು, ನೇರವಾಗಿ ಇಂಗ್ಲಿಷರ ಕಾಲೊನಿಗೆ ಹೋದರು. ಪ್ರಮುಖರ ಮನೆಯ ಮುಂದೆ ಹೋಗಿ 'ನೀವು ನನ್ನನ್ನು ಕೊಲ್ಲಲು ಉದ್ದೇಶಿಸಿರುವುದಾಗಿ ಸುದ್ದಿ ತಿಳಿಯಿತು. ನಾನೊಬ್ಬನೇ ಈಗ ನಿಮ್ಮಲ್ಲಿಗೆ ಬಂದಿದ್ದೇನೆ. ಕೊಲೆ ಮಾಡುವುದಿದ್ದರೆ ಮಾಡ ಬಹುದು' ಎಂದರು. ಆ ಮಾತನ್ನು ಕೇಳಿದ ಇಂಗ್ಲಿಷ್ ಸಾಹೇಬ ಬೆವತುಹೋದ. 'ಅಂತಹ ವಿಚಾರ ಮಾಡಿಲ್ಲ, ಕ್ಷಮಿಸಿ' ಎಂದ.

ಈ ಬಂಡಾಯಗಾರ ಗಾಂಧಿಯ ಅಸ್ತ್ರ ನಿರ್ಭಯತೆಯಾಗಿತ್ತು. ಈ ಪ್ರಸಂಗ ನಡೆದ ನಂತರ ನೀಲಿ ಉದ್ಯಮಿಗಳು ಗಾಂಧೀಜಿಯನ್ನೇ ರಾಜಿ ಸಂಧಾನಗಳಿಗೆ ಕರೆದರು. ಗಾಂಧೀಜಿ ರೈತರಿಗೆ ನ್ಯಾಯ ದೊರಕಿಸುವ ಒಪ್ಪಂದ ಮಾಡಿಸಿದರು. ಗಾಂಧೀಜಿ ಬಹುಮುಖೀ ಕ್ರಿಯಾಶೀಲರಾಗಿದ್ದರು. ಇದಕ್ಕೆ ನಿದರ್ಶನವಾಗಿ ಕೆಲ ಘಟನೆಗಳನ್ನು ಸ್ಮರಿಸಬಹುದು.

೧೯೨೦ರಲ್ಲಿ ಗಾಂಧೀಜಿಯ ಮೇಲೆ ರಾಜದ್ರೋಹದ ಆಪಾದನೆ ಹೊರಿಸಿ, ಬ್ರಿಟಿಷ್ ಸರ್ಕಾರ ಅವರನ್ನು ದಸ್ತಗಿರಿ ಮಾಡಿತು. ಬ್ರೂಮ್ ಫೀಲ್ಡ್ ಎನ್ನುವ ಬ್ರಿಟಿಷ್ ನ್ಯಾಯಾಧೀಶರ ಮುಂದೆ ಗಾಂಧೀಜಿಯನ್ನು ಹಾಜರುಪಡಿಸಲಾಯಿತು. ನ್ಯಾಯಾಧೀಶರು ಗಾಂಧೀಜಿ ದಕ್ಷಿಣ ಆಫ್ರಿಕ ದಲ್ಲಿ ಭಾರತೀಯರ ಪರವಾಗಿ ಹೋರಾಡಿ ಆಡಳಿತಗಾರರಾದ ಬಿಳಿಯರನ್ನು ಹಣ್ಣು ಮಾಡಿದ್ದ ಸಂಗತಿಯನ್ನು ಬಲ್ಲವರಾಗಿದ್ದರು.

ಅವರಿಗೆ ಗಾಂಧೀಜಿಯ ಬಗೆಗೆ ಮೆಚ್ಚುಗೆ ಇತ್ತು. ನ್ಯಾಯಾಲಯದ ಕಟಕಟೆಗೆ ಪೊಲೀಸರು ಗಾಂಧೀಜಿ ಯನ್ನು ಕರೆತರುತ್ತಿದ್ದಂತೆಯೇ ನ್ಯಾಯಾಧೀಶರು ಗಾಂಧೀಜಿಯವರ ಗೌರವಾರ್ಥವಾಗಿ ಎದ್ದು ನಿಂತರು. ಗಾಂಧೀಜಿಗೆ ಕೂಡಲು ಒಂದು ಕುರ್ಚಿ ಕೊಡಲು ನ್ಯಾಯಾಲಯದ ನೌಕರನಿಗೆ ಹೇಳಿದರು. ಬಂಡಾಯಗಾರ ಗಾಂಧಿ, ತಾನು ಅಪರಾಧಿ ಸ್ಥಾನದಲ್ಲಿರುವುದರಿಂದ ಕುರ್ಚಿಯ ಮೇಲೆ ಕೂಡುವ ಹಕ್ಕು ತನಗಿಲ್ಲವೆಂದೂ, ತಾನು ಕಟಕಟೆಯಲ್ಲಿ ನಿಂತೇ ಕೋರ್ಟ್ ನಡೆವಳಿಕೆಯಲ್ಲಿ ಭಾಗವಹಿಸುವು ದಾಗಿಯೂ ಹೇಳಿದರು. 'ನಿಮ್ಮ ಮೇಲೆ ರಾಜ ದ್ರೋಹದ ಆಪಾದನೆ ಮಾಡಲಾಗಿದೆ. ಇದನ್ನು ನೀವು ಒಪ್ಪುವಿರಾ ? ಇಲ್ಲವೇ ನೀವು ಇದನ್ನು ನಿರಾಕರಿಸು ತ್ತೀರಾ ?' ಎಂದು ನ್ಯಾಯಾಧೀಶರು ಗಾಂಧೀಜಿ ಯನ್ನು ಕೇಳಿದರು. ಗಾಂಧೀಜಿ 'ಹೌದು, ರಾಜ ದ್ರೋಹ ಮಾಡಿದ್ದೇನೆ. ನನ್ನನ್ನು ನೀವು ಬಿಡುಗಡೆ ಮಾಡಿದರೆ ಮತ್ತೆ ಮತ್ತೆ ಅದನ್ನೇ ಮಾಡುತ್ತೇನೆ. ಬ್ರಿಟಿಷ್ ಸರ್ಕಾರ ನಮ್ಮ ದೇಶದಿಂದ ಕಾಲ್ತೆಗೆಯುವವರೆಗೂ ಅದನ್ನೇ ಮಾಡುತ್ತಿರುತ್ತೇನೆ' ಎಂದರು. ನ್ಯಾಯಾ ಧೀಶರು, ನಿಮಗೆ ಕಾನೂನಿನ ಪ್ರಕಾರ ೬ ವರ್ಷ ಕಠಿಣ ಸಜೆ ವಿಧಿಸಿದ್ದೇನೆ ಎಂದಾಗ ''ಬಾಲಗಂಗಾಧರ ತಿಲಕರಿಗೆ ವಿಧಿಸಿದಷ್ಟೇ ಶಿಕ್ಷೆಯನ್ನು ನನಗೂ ವಿಧಿಸಿ ನನಗೆ ಗೌರವ ತಂದುಕೊಟ್ಟಿದ್ದೀರಿ'' ಎಂದು ಹೇಳಿ ನ್ಯಾಯಾಲಯದಲ್ಲಿದ್ದವರೆಲ್ಲ ಬಂಡಾಯ ಗಾರ ಗಾಂಧೀಜಿಯ ಧೈರ್ಯಕ್ಕೆ ಬೆರಗಾಗುವಂತೆ ಮಾಡಿದರು.

ಗಾಂಧೀಜಿ ಅಹ್ಮದಾಬಾದಿನ ಬಟ್ಟೆ ಕಾರ್ಖಾನೆಗಳ ಕಾರ್ಮಿಕರ ಸಂಘವನ್ನು ರಚಿಸಿದ್ದರು. ಬಹುಶಃ ಅಲ್ಲಿಯವರೆಗೆ ಭಾರತದಲ್ಲಿ ಕಾರ್ಮಿಕರ ಸಂಘಟನೆ ಎಲ್ಲೂ ಆಗಿಯೇ ಇರಲಿಲ್ಲ. ಒಮ್ಮೆ ಬಟ್ಟೆ ಕಾರ್ಖಾನೆ ಕಾರ್ಮಿಕರಿಗೆ ಎರಡು ತಿಂಗಳ ಬೋನಸ್ ನೀಡಬೇಕೆಂದು ಗಾಂಧೀಜಿ ಮಾಲೀಕರಲ್ಲಿ ಬೇಡಿಕೆ ಇಟ್ಟರು. ಮಾಲೀಕರು ಈ ಬೇಡಿಕೆಗೆ ಒಪ್ಪಲಿಲ್ಲವಾಗಿ ಕಾರ್ಮಿಕರು ಸತ್ಯಾಗ್ರಹ ಆರಂಭಿಸಿದರು. ಸತ್ಯಾಗ್ರಹ ವನ್ನು ಹೇಗಾದರೂ ಮಾಡಿ ಮುರಿಯಬೇಕೆಂದು ಆಲೋಚಿಸಿದ ಮಾಲೀಕರು ಕಾರ್ಮಿಕರ ವಸತಿಗಳಿಗೆ ಹೋಗಿ 'ಗಾಂಧೀಜಿ ನಿಮ್ಮ ಕೈಲಿ ಸಂಪು ಆರಂಭ ಮಾಡಿಸಿ, ನಿಮ್ಮನ್ನೆಲ್ಲ ಉಪವಾಸ ಕೆಡವಿದ್ದಾರೆ. ಅವರು ಆಶ್ರಮದಲ್ಲಿ ಊಟ ಮಾಡಿ ದಿನ ಬಂದು ಹಸಿದ ನಿಮಗೆ ಸಂಪನ್ನು ಮುಂದುವರೆಸಲು ಬೋಧನೆ ಮಾಡುತ್ತಾರೆ. ಹಸಿದು ಬಳಲುವವರು ನೀವು.

ಕೂಡಲೇ ನಾವು ಹೇಳುವ ಮಾತಿಗೆ ಒಪ್ಪಿಗೆ ನೀಡಿ, ಕೆಲಸಕ್ಕೆ ಹಾಜರಾಗಿ' ಎಂದು ಕಾರ್ಮಿಕರ ಹಿತರಕ್ಷಕರಂತೆ ಉಪದೇಶ ಮಾಡಿದರು. ಕಾರ್ಮಿಕರಲ್ಲಿ ಕೆಲವರು, ಮಾಲೀಕರು ಹೇಳುವ ಮಾತು ಸುಳ್ಳಲ್ಲ ಎಂದು ತಮ್ಮತಮ್ಮಲ್ಲೇ ಮಾತನಾಡಿಕೊಂಡರು. ಗಾಂಧೀಜಿ ಕಿವಿಗೆ ಈ ಸುದ್ದಿ ಮುಟ್ಟಿತು. ಅವರು ಕಾರ್ಮಿಕರ ಸಭೆ ಕರೆದು 'ಹೌದು, ಮಿಲ್ ಮಾಲೀಕರು ಹೇಳಿದ ಮಾತು ನಿಜ. ನಾನು ದಿನವೂ ಊಟ ಮಾಡಿ ಬಂದು ನಿಮಗೆ ಬೋಧೆ ಮಾಡುತ್ತೇನೆ. ಇದು ಸರಿಯಲ್ಲವೆಂದು ಈಗ ನನಗನಿಸಿದೆ. ನಾಳೆಯಿಂದ ನಿಮ್ಮೊಡನೆ ಕೂಡಿಕೊಂಡು ಹೋರಾಟ ಮುಗಿಯುವವರೆಗೆ ನಾನೂ ಉಪವಾಸ ಮಾಡಲು ನಿಶ್ಚಯಿಸಿದ್ದೇನೆ' ಎಂದರು. ಗಾಂಧೀಜಿ ಉಪವಾಸ ಮಾಡುವ ಸುದ್ದಿ ಪತ್ರಿಕೆಗಳಲ್ಲಿ ಪ್ರಕಟಗೊಂಡಿತು. ಅದು ಕಾಳ್ಗಿಚ್ಚಿನಂತೆ ಹರಡಿತು. ಗಾಂಧೀಜಿ ಉಪವಾಸ ಕೈಗೊಂಡದ್ದರಿಂದ ಕೂಡಲೇ ಮಾಲೀಕರು ಒಪ್ಪಂದ ಮಾಡಿಕೊಳ್ಳಲು ಮುಂದಾಗಬೇಕಾಗುವುದು ಅನಿವಾರ್ಯವಾಯಿತು. ಎರಡು ತಿಂಗಳ ಸಂಬಳವನ್ನು ಬೋನಸ್ ಆಗಿ ನೀಡುವುದಾಗಿ ಮಾಲೀಕರು ಘೋಷಣೆ ಮಾಡಿದರು. ಸಂಪು ಮುಕ್ತಾಯವಾಯಿತು.

ಈ ಮಧ್ಯೆ ಅಹಮದಾಬಾದಿನ ಒಬ್ಬ ಆಡಿಟರ್ ಪತ್ರಿಕೆಗೆ ಹೇಳಿಕೆ ನೀಡಿ 'ಗಾಂಧೀಜಿ ಎರಡು ತಿಂಗಳ ಸಂಬಳವನ್ನು ಬೋನಸ್ಸಾಗಿ ಕಾರ್ಮಿಕರಿಗೆ ಕೊಡಿಸಿದ್ದಾರೆ. ಎರಡು ತಿಂಗಳ ಸಂಬಳದಷ್ಟು ಬೋನಸ್ ಕೊಡಿಸಿರುವ ಗಾಂಧೀಜಿ ಯಾವ ಆಧಾರದ ಮೇಲೆ ಈ ಬೇಡಿಕೆ ಇಟ್ಟಿದ್ದಾರೆ ? ಅವರು ಮಿಲ್ ಮಾಲೀಕರ ಲಾಭನಷ್ಟದ ತಖ್ತೆಯನ್ನು ಪರಿಶೀಲಿಸಿ ಅದರ ಆಧಾರದ ಮೇಲೆ ೨ ತಿಂಗಳ ಬೋನಸ್ ಕೇಳಿದ್ದಾರೆಯೇ' ಎಂದು ಪ್ರಶ್ನಿಸಿದ್ದರು.

ಆ ಹೇಳಿಕೆಯನ್ನು ನೋಡಿದ ಗಾಂಧೀಜಿ ಆ ಆಡಿಟರ್‌ನ್ನು ಸಂಧಿಸಿ '೨ ತಿಂಗಳ ಸಂಬಳವನ್ನು ಬೋನಸ್ಸಾಗಿ ಕೊಡಿ ಎಂದು ಮಿಲ್ ಮಾಲೀಕರನ್ನು ಕೇಳುವಾಗ ನಾನು ಮಿಲ್ ಮಾಲೀಕರ ಆಡಿಟ್ ಆದ ಲೆಕ್ಕ ಪತ್ರಗಳನ್ನು ಕೇಳಿ ಪಡೆದು ಕೊಂಡಿಲ್ಲ. ಆಡಿಟರೇ, ಆ ಲೆಕ್ಕ ಪತ್ರಗಳನ್ನು ನೋಡಿ, ನಾನು ಕೇಳಿರುವ ಬೋನಸ್ ಮೊಬಲಗು ಹೆಚ್ಚೋ ಕಡಿಮೆಯೋ ಎಂಬುದನ್ನು ಪರಿಶೀಲಿಸಬೇಕು. ಹಾಗೆ ಪರಿಶೀಲಿಸಿ ದಾಗ, ನಾನು ಕೇಳಿರುವ ಮೊತ್ತ ಹೆಚ್ಚು ಎಂದು ಅವರಿಗನ್ನಿಸಿದರೆ ಒಂದೇ ತಿಂಗಳ ಸಂಬಳದ ಮೊತ್ತವನ್ನು ಬೋನಸ್ ಆಗಿ ಪಡೆಯಲು ನಾನು ಕಾರ್ಮಿಕರನ್ನು ವಿನಂತಿಸಿಕೊಳ್ಳುತ್ತೇನೆ' ಎಂದರು. ಆಡಿಟರ್ ಲೆಕ್ಕ ನೋಡಿ, 'ನೀವು ೩ ತಿಂಗಳ ಸಂಬಳವನ್ನು ಬೋನಸ್ ಆಗಿ ಕೇಳಬಹುದಾಗಿತ್ತು' ಎಂದರು. ಗಾಂಧೀಜಿ ಎರಡು ತಿಂಗಳ ಬೋನಸ್ ಮಾತ್ರ ಕಾರ್ಮಿಕರು ಪಡೆಯುವುದಾಗಿ ಆಡಿಟರಿಗೆ ತಿಳಿಸಿದರು.

ಬಂಡಾಯಗಾರ ಗಾಂಧಿ ಎಂತಹ ಸಂದರ್ಭದಲ್ಲೂ ನ್ಯಾಯ ಬಿಟ್ಟು ಹೋದವರಲ್ಲ. ತನ್ನ ತಪ್ಪನ್ನು ಯಾರೇ ತೋರಿದರೂ ಅದನ್ನು ತಿದ್ದಿಕೊಳ್ಳಲು ಸದಾ ಸಿದ್ಧವಾಗಿದ್ದರು.

೧೯೪೭ರಲ್ಲಿ ಸ್ವಾತಂತ್ರ್ಯ ಪ್ರಾಪ್ತವಾಗುವುದಕ್ಕೆ ಸ್ವಲ್ಪ ಮೊದಲು, ಪಂಜಾಬ್ ಮತ್ತು ಬಂಗಾಳಗಳಲ್ಲಿ ಹಿಂದು - ಮುಸ್ಲಿಂ ದಂಗೆ ನಡೆದವು. ಆಗಿನ ವೈಸ್‌ರಾಯ್ ಪಂಜಾಬಿಗೆ ಶಾಂತಿ ಸ್ಥಾಪನೆಗಾಗಿ ೫೫೦೦೦ ಸಶಸ್ತ್ರ ಪೊಲೀಸರನ್ನು ಕಳುಹಿಸಿಕೊಟ್ಟರು. ಬಂಡಾಯಗಾರ ಗಾಂಧಿ ಬಂಗಾಳದಲ್ಲಿ ಶಾಂತಿ ಸ್ಥಾಪನೆಗಾಗಿ ಅಹಿಂಸೆ ವ್ರತ ತೊಟ್ಟ ೨೦ ಆಯ್ದ ಕಾರ್ಯಕರ್ತರನ್ನು ಕೂಡಿಕೊಂಡು ಹೊರಟರು. ನೌಖಾಲಿಯ ಸುತ್ತಮುತ್ತಣ ಹಳ್ಳಿಗಳಲ್ಲಿ ಹಿಂದೂಗಳ ಸಾಮೂಹಿಕ ಕೊಲೆ ಆಗಿತ್ತು, ಹಿಂದೂಗಳೂ ಸಂಘಟನೆ ಮಾಡಿ ಕೊಂಡು ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳ ತೊಡಗಿದ್ದರು. ಹಿಂದು ಮುಸ್ಲಿಮರು ಬಂದೂಕು, ಕತ್ತಿ, ಚಾಕು, ಬಾಕು, ಮಚ್ಚು ಝಳಪಿಸುತ್ತಾ ಮುಗ್ಧ ಜನರ ಮೇಲೆ ದಾಳಿ ಮಾಡುತ್ತಿದ್ದರು. ಅಸಹಾಯಕ ಸ್ತ್ರೀಯರ ಮಾನಭಂಗ ಮಾಡುತ್ತಿದ್ದರು. ಮನೆಗಳನ್ನೇ ದೋಚುತ್ತಿದ್ದರು. ಗಾಂಧೀಜಿ ಶಾಂತಿ ಸಂದೇಶವನ್ನು ಹೊತ್ತು ನೌಖಾಲಿಯಲ್ಲಿ ಎಲ್ಲ ಮನೆಗೆ ಭೇಟಿ ಇತ್ತರು. ಬೆಳಗ್ಗೆ ಸಂಜೆ ಪ್ರಾರ್ಥನಾ ಸಭೆಗಳನ್ನು ನಡೆಸಿದರು. ಎಲ್ಲೆಲ್ಲೂ ಭಯ ಆವರಿಸಿದ್ದರಿಂದ ಪ್ರಾರ್ಥನಾ ಸಭೆಗೆ ಜನ ಬರುತ್ತಿರಲಿಲ್ಲ. ಬಂದವರು ಗಾಂಧೀಜಿಯ ಮೇಲೆ ಕೊಳೆತ ಕೋಳಿ ಮೊಟ್ಟೆ, ಕೊಳೆತ ಟೊಮ್ಯಾಟೋ ಎಸೆದು ತಮ್ಮ ಆಕ್ರೋಶ ವ್ಯಕ್ತಪಡಿಸುತ್ತಿದ್ದರು. ನೌಖಾಲಿ ಬಿಟ್ಟು ತೊಲಗಿ ಎಂದು ಘೋಷಣೆ ಮಾಡುತ್ತಿದ್ದರು. ಶಾಂತಿ ನೆಲೆಸುವ ಸೂಚನೆಗಳೇ ಕಂಡುಬರಲಿಲ್ಲ. ಆಗ ಗಾಂಧೀಜಿ ಒಂದು ನಿರ್ಧಾರಕ್ಕೆ ಬಂದರು. 'ನಾವೆಲ್ಲ ಒಬ್ಬೊಬ್ಬರು ಒಂದೊಂದು ಹಳ್ಳಿಗೆ ಹೋಗಬೇಕು, ಶಾಂತಿ ಸ್ಥಾಪನೆಯಾಗುವವರೆಗೂ ಅಲ್ಲೇ ಉಳಿಯಬೇಕು, ಶಾಂತಿ ಸ್ಥಾಪನೆಯ ಪ್ರಯತ್ನದಲ್ಲಿ ಪ್ರಾಣವೇ ಹೋದರೂ ಚಿಂತಿಸಬೇಕಾಗಿಲ್ಲ' ಎಂಬ ತಮ್ಮ ದೃಢ ನಿರ್ಧಾರವನ್ನು ಘೋಷಿಸಿದರು. ಅದರಂತೆ ಗಾಂಧಿಯವರನ್ನು ಮೊದಲು ಮಾಡಿ ಎಲ್ಲ ಕಾರ್ಯಕರ್ತರೂ ಒಂದೊಂದು ಹಳ್ಳಿ ಹಿಡಿದರು. ಹೀಗೆ ಸತತ ಪ್ರಯತ್ನ ಮಾಡಿದ್ದರ ಫಲವಾಗಿ ನಿಧಾನವಾಗಿ ಹಳ್ಳಿಗಳಲ್ಲಿ ಶಾಂತಿ ಮೂಡಿತು. ಪ್ರಾರ್ಥನಾ ಸಭೆಗಳಿಗೆ ಜನ ಬರಲು ಮೊದಲು ಮಾಡಿದರು. ಆವರಿಸಿದ್ದ ಭಯದ ವಾತಾವರಣ ತಿಳಿಗೊಳ್ಳುತ್ತಾ ಬಂತು. ಹೀಗೆ ಸತತ ಪ್ರಯತ್ನದಿಂದ ಗಾಂಧೀಜಿ ಮತ್ತೆ ಅವರ ಪರಿವಾರ ಜನರ ಹೃದಯಗಳನ್ನೇ ಗೆದ್ದರು. ಜನರಲ್ಲಿ ಧೈರ್ಯ ತುಂಬಿದರು. ಹಿಂಸಾಕೃತ್ಯವನ್ನು ಜನ ಕ್ರಮೇಣ ಕೈ ಬಿಟ್ಟರು. ಹಿಂಸಾಚಾರಕ್ಕೆ ತೊಡಗಿದ್ದ ಜನ ತಮ್ಮಲ್ಲಿದ್ದ ಬಂದೂಕು, ಕತ್ತಿ ಮುಂತಾದವನ್ನು ಪ್ರಾರ್ಥನಾ ಸಭೆಯಲ್ಲಿ ಗಾಂಧೀಜಿ ಅವರಿಗೆ ಒಪ್ಪಿಸಿ, ಹಿಂಸಾಕೃತ್ಯದಲ್ಲಿ ತಾವು ಇನ್ನು ಮುಂದೆ ತೊಡಗುವುದಿಲ್ಲವೆಂದು ಪ್ರತಿಜ್ಞೆ ಮಾಡಿದರು. ಅಂತೂ ಗಾಂಧೀಜಿಯವರ ಸತತ ಪ್ರಯತ್ನದಿಂದಾಗಿ ಹಾಗೂ ಪ್ರಾಣದ ಹಂಗು ತೊರೆದು ಶಾಂತಿಗಾಗಿ ದುಡಿದದ್ದರ ಫಲವಾಗಿ ಬಂಗಾಳದಲ್ಲಿ ಕೊನೆಗೂ ಶಾಂತಿ ನೆಲೆಸಿತು.

ಹಾಗೆಯೇ ಪಂಜಾಬಿನಲ್ಲಿಯೂ, ಸಶಸ್ತ್ರ ಪೊಲೀಸರ ಪ್ರಯತ್ನದಿಂದಾಗಿ ಶಾಂತಿ ತಳ ಊರಿತು.

ಈ ಎರಡೂ ಕಡೆ ಶಾಂತಿ ಸ್ಥಾಪನೆಯಾದದ್ದನ್ನು ಕುರಿತು ಲಾರ್ಡ್ ಮೌಂಟ್‌ಬ್ಯಾಟನ್ ಹೇಳಿದ ಮಾತು ಮಾರ್ಮಿಕವಾಗಿದೆ :

'ನಾನು ೫೫೦೦೦ ಸಶಸ್ತ್ರ ಪೊಲೀಸರನ್ನು ರವಾನಿಸುವುದರ ಮೂಲಕ ಪಂಜಾಬಿನಲ್ಲಿ ಶಾಂತಿ ಮೂಡುವಂತೆ ಮಾಡಿದರೆ, ನೀವು (ಗಾಂಧೀಜಿ) ನೌಖಾಲಿ ಮತ್ತು ಇತರ ಹಳ್ಳಿಗಳಲ್ಲಿ ಅಹಿಂಸಾತ್ಮಕವಾಗಿ ಶಾಂತಿ ಸ್ಥಾಪನೆ ಮಾಡಿದಿರಿ : ನಿಮ್ಮದು ಏಕ ವ್ಯಕ್ತಿ ಸೇನಾ ತಂಡ.' 'ಬಂಡಾಯಗಾರ' ಗಾಂಧೀಜಿ ಬಂಗಾಳದ ಬಂಡಾಯವನ್ನೂ ಅಹಿಂಸಕವಾಗಿ ಅಡಗಿಸಿದ ರೀತಿ ನಿಜಕ್ಕೂ ಅವಿಸ್ಮರಣೀಯವಾದದ್ದು.

ರೆಬೆಲ್ ಗಾಂಧೀಜಿಗೆ ಅಹಿಂಸೆಯಲ್ಲಿ ಸಂಪೂರ್ಣ ನಂಬಿಕೆ ಇತ್ತು. ಅಹಿಂಸೆ ನಮಗೆಲ್ಲ ಅನುಕೂಲ ಸಿಂಧುವಾಗಿತ್ತು. ಆದರೆ ಅವರಿಗೆ ಒಂದು ವ್ರತವಾಗಿತ್ತು. ಒಂದು 'ಕ್ರೀಡ್' ಆಗಿತ್ತು. ಎಲ್ಲ ಸಾಮಾನ್ಯ ದಂಗೆಕೋರರು ಹಿಂಸಾರಾಧಕ ರಾಗಿರುತ್ತಾರೆ. ಈ ವಿಶಿಷ್ಟ ದಂಗೆಕೋರ ಗಾಂಧೀಜಿಯ ಅಸ್ತ್ರ ಅಹಿಂಸೆಯೇ ಆಗಿತ್ತು. ಅಹಿಂಸೆಯ ಮೂಲಕ ಸ್ವರಾಜ್ಯ ದೊರಕಿಸಿ ಕೊಳ್ಳಲು ಸಾಧ್ಯವಿಲ್ಲವಾದರೆ, ಅಂತಹ ಸ್ವಾತಂತ್ರ್ಯ ನನಗೆ ಬೇಡವೇ ಬೇಡ ಎಂದರು ಗಾಂಧೀಜಿ. ಅವರ ಚಳವಳಿಗಳಲ್ಲಿ ಹಿಂಸಾಚಾರ ಕಾಣಿಸಿಕೊಂಡರೆ ಅವರು ತಮ್ಮ ಹೋರಾಟವನ್ನು ಹಿಂದಕ್ಕೆ ತೆಗೆದು ಕೊಳ್ಳಲು ಹಿಂಜರಿಯುತ್ತಿರಲಿಲ್ಲ. ಹೋರಾಟ ದಲ್ಲಿ ತೊಡಗಿದರೆ ಅವರು ಜೀವದ ಹಂಗು ತೊರೆದು ಹೋರಾಟಕ್ಕೆ ತಮ್ಮನ್ನು ಅರ್ಪಿಸಿ ಕೊಳ್ಳುತ್ತಿದ್ದರು. ಅವರದು ವ್ಯಾವಹಾರಿಕ ಅಹಿಂಸೆ. ಗಾಂಧೀಜಿ ಅಹಿಂಸೆಯ

ಸೈದ್ಧಾಂತಿಕ ಪ್ರತಿಪಾದಕರು ಮಾತ್ರವಾಗಿರಲಿಲ್ಲ, ಅಹಿಂಸೆಯ ಪ್ರಯೋಗ ಪರಿಣತಮತಿಗಳೂ ಆಗಿದ್ದರು.

ಅಹಿಂಸೆಗೆ ಬದ್ಧರಾಗಿದ್ದ ಹೋರಾಟಗಾರ ಗಾಂಧೀಜಿಗೂ, ಬೌದ್ಧಿಕವಾಗಿ ಅಹಿಂಸೆಯನ್ನು ಒಪ್ಪಿಕೊಂಡಿದ್ದ ಅವರ ಸಮಕಾಲೀನರಾದ ಪ್ರಾಧ್ಯಾಪಕ ಹೆರಾಲ್ಡ್ ಲಾಸ್ಕಿ, ಬರ್ಟ್ರಂಡ್ ರಸಲ್ ಮತ್ತು ಸಿ. ಎಂ. ಎಚ್. ಜೋಡ್ ಮುಂತಾದ ಪ್ರಖ್ಯಾತ ಯುದ್ಧ ವಿರೋಧಿ ಶಾಂತಿವಾದಿಗಳಿಗೂ ಇದ್ದ ವ್ಯತ್ಯಾಸವನ್ನು ನಾವು ಗಮನಿಸಬೇಕು. ೧೯೩೯ರಲ್ಲಿ ನಡೆದ ಎರಡನೆ ವಿಶ್ವ ಯುದ್ಧದ ಸಮಯದಲ್ಲಿ ಜರ್ಮನಿಯ ಸರ್ವಾಧಿಕಾರಿ ಹಿಟ್ಲರ್ ಯುದ್ಧ ಘೋಷಿಸಿ, ಒಂದೊಂದು ರಾಷ್ಟ್ರವನ್ನಾಗಿ ಕಬಳಿಸುತ್ತಾ ಬಂದಾಗ, ಈ ಹೆಸರಾಂತ ಶಾಂತಿವಾದಿಗಳ ಶಾಂತಿ ನಿಷ್ಠೆ ಕರಗಿಹೋಯಿತು. 'ಎಲ್ಲ ಪ್ರಜಾಸತ್ತೆಯ ರಾಷ್ಟ್ರಗಳೂ ಶಾಂತಿವಾದಿ ಸಂಘಟನೆಗಳೂ ಯುದ್ಧ ವಿರೋಧಿಗಳೂ ಕೂಡಿಕೊಂಡು ಹಿಟ್ಲರನ ಹುಟ್ಟಡಗಿಸಬೇಕು' ಎಂದು ಹೇಳಿಕೆ ನೀಡಿದರು. ಅವರ ಅಹಿಂಸಾ ಧರ್ಮ, ಶಾಂತಿಪ್ರಿಯತೆ ಎಲ್ಲ ಕಳಚಿಬಿದ್ದವು.

ಅವರ ಬುದ್ಧಿ ಆಧಾರಿತ ಶಾಂತಿ ನಿಷ್ಠೆ ಹಾಗೂ 'ರೆಬೆಲ್' ಗಾಂಧೀಜಿಯ ವ್ಯಾವಹಾರಿಕ ಶಾಂತಿ ನಿಷ್ಠೆ ಕುರಿತು ಸರ್ವೋದಯದ ಹಿರಿಯ ಚಿಂತಕರಾದ ದಾದಾ ಧರ್ಮಾಧಿಕಾರಿ ಹೀಗೆ ಹೇಳಿದ್ದಾರೆ : ''ಮಾನವ ಮಹಾಸಂಕಟದಲ್ಲಿ ಸಿಕ್ಕಿಬಿದ್ದಾಗ, ಅವನ ಚಿತ್ತ ಕಳವಳಕ್ಕೀಡಾಗುತ್ತದೆ ಮತ್ತು ಅವನ ವಿವೇಕ ಅಪ್ರಯೋಜಕವಾಗುತ್ತದೆ. ಆಗ ಅವನ ಬುದ್ಧಿ ಆಧಾರಿತ ದರ್ಶನವೂ ನಿಷ್ಠೆಯನ್ನು ಕಳೆದುಕೊಂಡು ತತ್ತರಿಸತೊಡಗುತ್ತದೆ. ಅವನಲ್ಲಿ ಸುಪ್ತವಾಗಿ ಹುದುಗಿರುವ ದೌರ್ಬಲ್ಯಗಳು ಮತ್ತು ಸ್ವಾಭಾವಿಕ ವಿಕಾರಗಳು ಇದ್ದಕ್ಕಿದ್ದಂತೆ ಎದ್ದು ನಿಲ್ಲುತ್ತವೆ. ವಿಶ್ವದ ಪ್ರಖ್ಯಾತ ಶಾಂತಿವಾದಿಗಳಾದ ಬರ್ಟ್ರಂಡ್ ರಸಲ್, ಸಿ. ಎಂ. ಎಚ್. ಜೋಡ್ ಮತ್ತು ಪ್ರೊ॥ ಹೆರಾಲ್ಡ್ ಲಾಸ್ಕಿ ಇವರೆಲ್ಲರ ಶಾಂತಿವಾದದ ನಿಷ್ಠೆ ಕೇವಲ ಬುದ್ಧಿ ಆಧಾರಿತ ಸಿದ್ಧಾಂತವಾದದ ಬಲದ ಮೇಲೆ ನಿಂತಿತ್ತು. ಇವರೆಲ್ಲ ಶಾಂತಿವಾದವನ್ನು ಅತ್ಯಂತ ಸಮರ್ಥ ರೀತಿಯಲ್ಲಿ ಪ್ರತಿಪಾದಿಸುತ್ತಿದ್ದರು, ನಿರೂಪಿಸುತ್ತಿದ್ದರು. ವಿಶ್ವಶಾಂತಿಯ ಬಗೆಗೆ ಅವರಲ್ಲಿ ಉತ್ಸಾಹ, ಆವೇಶಗಳೂ ಸಾಕಷ್ಟಿದ್ದವು. ಆದರೆ ಅವರ ವಿಚಾರಗಳಿಗೆ ಅನುಭವಜನ್ಯ ನಂಬಿಕೆಯ ಬೆಂಬಲ ಇರಲಿಲ್ಲವಾಗಿ, ಅಹಿಂಸೆಯ ಬಗೆಗೆ ಅವರಿಗಿದ್ದ ವಿಶ್ವಾಸ ಒಂದು ಘಟ್ಟದಲ್ಲಿ ಕುಸಿಯಿತು. ಅವರಿಗೆ ಪ್ರಯೋಗನಿಷ್ಠೆ ಇರಲಿಲ್ಲವಾಗಿ, ಹಿಂಸಾಮೂಲದ ಚಂಡಮಾರುತ ಬೀಸತೊಡಗಿದಾಗ, ಅವರ ಶಾಂತಿವಾದ ಗಾಳಿಯ ಪಾಲಾಯಿತು. ಕೇವಲ ಭೌತಿಕವಾದದ ಹಣೇ ಬರಹವೇ ಇಷ್ಟು.''

ಈ 'ರೆಬೆಲ್' ಗಾಂಧಿ ಒಬ್ಬ ವಿಶಿಷ್ಟ ವ್ಯಕ್ತಿಯಾಗಿದ್ದರು. ಯಾವುದೇ ಹೊಸ ಸಿದ್ಧಾಂತವನ್ನು ಸ್ಥಾಪಿಸುವುದು ಗಾಂಧೀಜಿಯ ಗುರಿಯಾಗಿರಲಿಲ್ಲವಾದರೂ, ಅವರು ಅಹಿಂಸಕ ಚಳವಳಿಯ ಆದ್ಯ ಪ್ರವರ್ತಕರಾಗಿ ಕೆಲಸ ಮಾಡಿದರು. ತತ್ವಜ್ಞಾನಿಯಂತೆ ಮಾನವನ ಅನುಭವಗಳನ್ನು ಪೃಥಕ್ಕರಿಸುವ ಕಾರ್ಯಕ್ಕೆ ಕೈ ಹಾಕದಿದ್ದರೂ ಗಾಂಧೀಜಿ 'ಸೆರ್ಮನ್ ಆನ್ ದಿ ಮೌಂಟ್' ಮತ್ತು ಭಗವದ್ಗೀತೆಗಳನ್ನು ಆಧಾರವಾಗಿಟ್ಟು ಕೊಂಡು ತಮ್ಮದೇ ಅಳತೆಗೋಲಿನಿಂದ ಜಗತ್ತಿನ ವಿದ್ಯಮಾನಗಳನ್ನು ಅಳೆದು ಯಾವುದು ಸರಿ, ಯಾವುದು ತಪ್ಪು, ಯಾವುದು ಪಾಪ, ಯಾವುದು ಪುಣ್ಯ ಎಂಬುದನ್ನು ಹೇಳದೆ ಬಿಡಲಿಲ್ಲ. ಅವರು ನಡೆಸಿದ ವಿದೇಶಿ ಬಟ್ಟೆಗಳ ಬಹಿಷ್ಕಾರ, ಕರ ನಿರಾಕರಣ ಚಳವಳಿ, ಉಪ್ಪಿನ ಸತ್ಯಾಗ್ರಹ, ಕರಾಳ ಶಾಸನಗಳ ವಿರುದ್ಧದ ಚಳವಳಿಗಳು ನಾಟಕೀಯವಾಗಿರುತ್ತಿದ್ದವು. ಅವರೊಬ್ಬ ರಾಜಕೀಯ ಪಾರಂಗತರು ಎಂಬುದನ್ನೂ ಆ ಚಳವಳಿಗಳು ಸಾರಿ ಹೇಳುತ್ತಿದ್ದವು. ಅವರು ಯಾವುದೇ ಚಳವಳಿ ಹೂಡಿದರೂ ಅದರ ಗುರಿ ಬ್ರಿಟಿಷ್ ಸರಕಾರವನ್ನು ಅಭದ್ರ ಗೊಳಿಸುವುದೇ ಆಗಿತ್ತು. ಅವರು ಪ್ರಯೋಗಿಸಿದ ಉಪವಾಸ ಸತ್ಯಾಗ್ರಹ, ಹರತಾಳ, ಲಾಠಿ ಏಟಿಗೆ ಸ್ವಪ್ರೇರಣೆಯಿಂದ ಮೈ ಒಡ್ಡಲು ಜನರನ್ನು ಅಣಿಗೊಳಿಸಿದ್ದು, ಸತ್ಯಶೋಧನೆಗಾಗಿ ಆತ್ಮಶಕ್ತಿಯ ಸಂವರ್ಧನೆಗೆ ಕರೆ ನೀಡಿದ್ದು, ಇವು ಯಾವುವೂ ಯಾವುದೇ ಧಾರ್ಮಿಕ ಕಟ್ಟುಪಾಡುಗಳಿಗಿಂತ ಕಡಿಮೆ ಮೌಲ್ಯದ್ದಾಗಿರಲಿಲ್ಲ. 'ದೇಶದ ಬಿಡುಗಡೆಗಾಗಿ ರಕ್ತದ ಕೋಡಿಯೇ ಹರಿಯಲಿ, ಆದರೆ ಆ ರಕ್ತ ಬೇರೆಯವರದಾಗಿರಬಾರದು, ಭಾರತದ ಪ್ರಜೆಗಳದೇ ಆಗಿರಬೇಕು; ಸ್ವಾತಂತ್ರ್ಯ ಹೋರಾಟಗಾರರದೇ ಆಗಿರಬೇಕು' ಎಂದರು ಗಾಂಧೀಜಿ.

ಅಂತಹ ಛಲದಂಕ ಮಲ್ಲ ಗಾಂಧೀಜಿ.

ಬಂಡಾಯಗಾರ ಗಾಂಧೀಜಿ ವಜ್ರದಂತೆ ಕಠೋರರೂ, ಹೂವಿನಂತೆ ನಮ್ರರೂ ಆಗಿದ್ದರು. ಅವರು ಕೆಲ ಸಂದರ್ಭಗಳಲ್ಲಿ ತಮ್ಮ ಸರ್ವಸ್ವವನ್ನೂ ಪಣ ಒಡ್ಡಿ ಸೆಟೆದು ನಿಲ್ಲುತ್ತಿದ್ದರು. ಅನ್ಯಾಯದ ಜೊತೆಗೆ ರಾಜಿ ಮಾಡಿಕೊಳ್ಳಲು ಎಂದೂ ಒಪ್ಪುತ್ತಿರಲಿಲ್ಲ. ಜೀವದ ಹಂಗು ತೊರೆದು ಹೋರಾಡಲು ಜನತೆಯನ್ನು ಅಣಿ ಮಾಡಿದರು. ಬ್ರಿಟಿಷ್ ಸರ್ಕಾರದ ಅನ್ಯಾಯದ ವಿರುದ್ಧ ಹೋರಾಡುವುದು ನಮ್ಮ ಆಜನ್ಮ ಸಿದ್ಧ ಹಕ್ಕು ಎಂದು ಘೋಷಣೆ ಮಾಡಿದರು. 'ನಾನು ಆ ದೃಷ್ಟಿಯಿಂದ ಒಬ್ಬ ಬಂಡಾಯಗಾರ, ದೇಶ ದ್ರೋಹಿ' ಎಂದರು. ಆದರೆ ಸರ್ಕಾರ ಕೆಲವೇ ರಿಯಾಯಿತಿಗಳನ್ನು ನೀಡಿದಾಗ ನನಗೆ ಒಂದು ಹೆಜ್ಜೆಯೇ ಸಾಕು, ಎಂದು ಸಮಾಧಾನಪಟ್ಟುಕೊಳ್ಳುತ್ತಿದ್ದರು.

ಅಣು ಸ್ಫೋಟವು ವಿಶ್ವಶಾಂತಿಗೆ ಧಕ್ಕೆ ತರುವ ಮೊದಲೇ ಶಾಂತಿಗಾಗಿ ಅಹಿಂಸಕ ಹೋರಾಟ ವಿಶ್ವಮಟ್ಟದಲ್ಲಿ ಸ್ಫೋಟಗೊಳ್ಳಬೇಕು. ಈ ಸಂಗ್ರಾಮದ ಚುಕ್ಕಾಣಿಯನ್ನು ಭಾರತ ಹಿಡಿಯಬೇಕು ಎಂದು ಗಾಂಧೀಜಿ ಬಯಸಿದ್ದರು. ಯಾವ ಅವರ ಜೀವನ ಭಾರತೀಯರನ್ನೇ ಅಲ್ಲದೆ ವಿಶ್ವದ ಎಲ್ಲ ಮಾನವರನ್ನೂ ಕಲಕಿತೋ, ಯಾರ ಜೀವನ ಕೋಟ್ಯಾಂತರ ಜನರ ಹೃನ್ಮನಗಳಲ್ಲಿ ವಿದ್ಯುತ್ ಸಂಚಾರ ಮೂಡಿಸಿತೋ, ಯಾರ ಜೀವನ ಭಾರತೀಯ ಸಂಸ್ಕೃತಿಯ ದಿಕ್ಕನ್ನೇ ಬದಲಾಯಿಸಿತೋ ಆ ವಿಶ್ವಮಾನ್ಯ ಬಂಡುಕೋರ ಗಾಂಧೀಜಿಯದು ಸಾರ್ಥಕ ಜೀವನ. ವಿಶ್ವಕ್ಕೇ ದಾರಿದೀಪವಾಗಬಲ್ಲ ಜೀವನ.

ಎಚ್. ಎಸ್. ದೊರೆಸ್ವಾಮಿ
೧೮/ಬಿ, ೭ನೇ ಅಡ್ಡರಸ್ತೆ, ಎನ್. ಆರ್. ಕಾಲೊನಿ
ಬೆಂಗಳೂರು - ೫೬೦ ೦೧೯

## ಮಣ್ಣು ಹೇಳಿದ್ದು

೧

ನನ್ನ ಮಕ್ಕಳೇ
ನಿಮಗೆ ತಿಳಿದೇ ಇದೆ
ಒಂದು ದಿನ
ನೀವೆಲ್ಲ ನನ್ನ ಬಳಿ
ಬರಲೇ ಬೇಕೆಂದು.

ಆದರೆ ಇದೇನಿದು
ಬಾಂಬು ಬಂದೂಕು ರೈಫಲ್ಲುಗಳ
ಸಿದ್ಧತೆ !
ಬಹುಶಃ ಬೇಗ ಬಹುಬೇಗ
ನನ್ನ ಬಳಿ ನೀವೆಲ್ಲ
ಬರಬೇಕೆಂಬುದರ ಈ
ವ್ಯವಸ್ಥೆ !

೨

ನೆಲದ –
ಮನದ ಮಣ್ಣಿನಲ್ಲಿ
ಏನು ಹೆಚ್ಚು ಏನು ಕಮ್ಮಿ ?
ಎಲ್ಲ ಒಂದೇ ಎಂದರೂ,
ನೆಲದ ಮಣ್ಣು
ಬಿತ್ತಿದ್ದನ್ನೇ ಬೆಳೆವುದು
ತಾನೇ ಹೆಣ್ಣೆಂಬುದು !
ಮನದ ಮಣ್ಣು
ಬಿತ್ತದೆ ಏನೆಲ್ಲವನ್ನು ಬೆಳೆದು
ತಾನೇ ಗಂಡೆಂಬುದು !

ಪ್ರೊ. ವಸಂತ ಕುಷ್ಟಗಿ
ಎಂ. ಐ. ಜಿ. ೩೬, ಆದರ್ಶ ನಗರ,
ಗುಲ್ಬರ್ಗಾ - ೫೮೫೧೦೫

# ಹೊಸ ಅಲೆಯ ಚಿತ್ರಗಳಿಗೂ ಪ್ರೇಕ್ಷಕರಿದ್ದಾರೆ, ಆದರೆ ಅವರನ್ನು ತಲುಪಲಾಗಿಲ್ಲ

*- ಗಿರೀಶ್ ಕಾಸರವಳ್ಳಿ*

**ಹೊಸತು** : ಗಿರೀಶ್ ಅವರೇ, 'ಹೊಸತು'ವಿಗಾಗಿ ನಿಮ್ಮನ್ನು ಸಂದರ್ಶಿಸಲು ನಮಗೆ ಸಂತೋಷವಾಗುತ್ತೆ. ಸಿನಿಮಾ ರಂಗ ನಿಮ್ಮನ್ನು ಆಕರ್ಷಿಸಿದ್ದು ಹೇಗೆ? ನೀವು ಬಿ. ಫಾರ್ಮ. ಕಲಿತವರೆಂದು ಕೇಳಿದ್ದೇವೆ.

**ಗಿರೀಶ್** : ಬಾಲ್ಯದಲ್ಲಿ ಸಿನಿಮಾ ಬಗ್ಗೆ ನನಗೆ ಏನೇನೂ ಆಕರ್ಷಣೆ ಇರಲಿಲ್ಲ. ನಮ್ಮದು ಹೇಳಿ ಕೇಳಿ ಒಂದು ಮಲೆನಾಡ ಹಳ್ಳಿ. ವರ್ಷದಲ್ಲಿ ಹೆಚ್ಚು ಕಾಲ ಮಳೆ. ಐದು ಮೈಲಿ ನಡೆದು ಶಾಲೆಗೆ ಹೋಗಬೇಕು. ಬಾಲ್ಯದಲ್ಲಿ ಮಾಯಾಬಜಾರ್, ಆದರ್ಶ ಸತಿ - ಹೀಗೆ ವರ್ಷದಲ್ಲಿ ಒಂದೆರಡು ಸಿನಿಮಾ ನೋಡಿದ್ದುಂಟು. ಸಿನಿಮಾ ಒಂದು ಕಲಾ ಮಾಧ್ಯಮ ಎಂದು ನಾನು ನಂಬಿರಲಿಲ್ಲ. ಶಿವಮೊಗ್ಗೆಯಲ್ಲಿ ಕಾಲೇಜಿಗೆ ಸೇರಿದ ನಂತರವೂ ವರ್ಷದಲ್ಲಿ ಒಂದೆರಡು ಸಿನಿಮಾ ನೋಡುತ್ತಿದ್ದೆ. ಸಾಹಿತ್ಯ, ರಂಗಭೂಮಿ ಶ್ರೇಷ್ಠ , ಸಿನಿಮಾ ನಿಕೃಷ್ಟ ಎಂಬ ಭಾವನೆ ನನ್ನಲ್ಲಿತ್ತು. ಇದೆಲ್ಲ ಇದ್ದಕ್ಕಿದ್ದಂತೆ ಬದಲಾದದ್ದು ಕೆ. ವಿ. ಸುಬ್ಬಣ್ಣನವರ ಪ್ರಭಾವದಿಂದ. ನಮ್ಮ ಬಂಧುಬಳಗದವರಲ್ಲಿ ಸುಬ್ಬಣ್ಣನವರು ಬಹಳ ದೊಡ್ಡ ವ್ಯಕ್ತಿ. ಅಂಥವರು ಪೂನಾ ಫಿಲ್ಮ್ ಇನ್‌ಸ್ಟಿಟ್ಯೂಟ್‌ನಲ್ಲಿ ಒಂದು ಅಧ್ಯಯನ ಶಿಬಿರಕ್ಕೆ ಸೇರಿದರೆಂದು ಕೇಳಿದಾಗ ನನಗೆ ಒಂದು ರೀತಿಯ ಶಾಕ್ ಆಯಿತು ! ಒಮ್ಮೆ ಅವರಲ್ಲಿಗೆ ಹೋಗಿದ್ದಾಗ ಸಿನಿಮಾ ಸಂಬಂಧದ ಕೆಲವು ಪುಸ್ತಕಗಳನ್ನು ನನಗೆ ಓದಲು ಕೊಟ್ಟರು. ಅವನ್ನು ಓದಿದ ನಂತರ ಸಿನಿಮಾ ಮಾಧ್ಯಮ ಸಶಕ್ತವಾದದ್ದು, ನಾನು ಅದನ್ನು ಅರ್ಥ ಮಾಡಿಕೊಂಡಿರುವುದರಲ್ಲಿ ದೋಷವಿದೆ ಎಂಬುದು ಅರ್ಥವಾಯಿತು. ಆಗ ಪತ್ರಿಕೆಗಳಲ್ಲಿ ಹೊಸ ಹೊಸ ವಿಚಾರಗಳು ಪ್ರಕಟವಾಗುತ್ತಿದ್ದವು. ಸಾಹಿತ್ಯಕ ಚರ್ಚೆಗಳು



ನಡೆಯುತ್ತಿದ್ದವು. ಎಲ್ಲ ಹೊಸ ವಿಚಾರಗಳು ನಮಗೆ ಪತ್ರಿಕೆಗಳ ಮೂಲಕವೇ ತಲುಪುತ್ತಿದ್ದವು. ಮುಂದೆ, ಬಿ. ಫಾರ್ಮಸಿ ಮುಗಿಸಿಕೊಂಡು ನಾನು ಹೈದರಾಬಾದಿನ ಐಡಿಪಿಎಲ್‌ನಲ್ಲಿ ಟ್ರೈನಿಂಗ್‌ಗೆಂದು ಹೋಗಿದ್ದಾಗ ಬಂಗಾಳಿ ಸಿನಿಮಾಗಳನ್ನು ನೋಡುವ ಅವಕಾಶ ಸಿಕ್ಕಿತು. ಆ ವೇಳೆಗೆ ಸುಬ್ಬಣ್ಣನವರು ನೀಡಿದ್ದ ಪುಸ್ತಕಗಳನ್ನು ಓದಿದ್ದರಿಂದ ಸಿನಿಮಾಗಳನ್ನು ಅರ್ಥಮಾಡಿಕೊಳ್ಳುವ ಅವಕಾಶವೂ ಸಿಕ್ಕಿತು.

**ಹೊ**: ನಿಮ್ಮ ಮೇಲೆ ಸತ್ಯಜಿತ್ ರಾಯ್ ಅವರ ಪ್ರಭಾವ ಇದೆಯೆನ್ನೋಣವೇ ?

**ಗಿ** : ಇಂದು ಭಾರತದಲ್ಲಿನ ವಿಭಿನ್ನ ಜಾಡಿನ ಚಿತ್ರಗಳನ್ನು ಮಾಡುವ ಯಾವ ನಿರ್ದೇಶಕನೂ ಸತ್ಯಜಿತ್ ರಾಯ್ ಪ್ರಭಾವದಿಂದ ಹೊರಗುಳಿದಿರುವುದಿಲ್ಲ. ಒಂದೋ, ಆತ/ಆಕೆ ಸತ್ಯಜಿತ್ ರೇಯವರನ್ನು ಮೆಚ್ಚಿಕೊಂಡು, ಅವರ ಚಿತ್ರಶೈಲಿಯನ್ನು ಒಪ್ಪಿರುತ್ತಾರೆ. ಇಲ್ಲವೋ, ಅವರ ಚಿತ್ರಶೈಲಿಯನ್ನು ಮೆಚ್ಚುತ್ತಲೇ, ಅದಕ್ಕೆ ಪ್ರತಿಯಾಗಬಲ್ಲ ಇನ್ನೊಂದು ಶೈಲಿಯ ಹುಡುಕಾಟದಲ್ಲಿರುತ್ತಾರೆ. ನನಗೆ ರಾಯ್‌ಯವರ ಚಿತ್ರಗಳ ಪರಿಚಯವಾಗುವ ಮೊದಲೇ ಕನ್ನಡ ಚಿತ್ರರಂಗದಲ್ಲೊಂದು ಬದಲಾವಣೆಯ ಗಾಳಿ ಬೀಸುತ್ತಿದೆ ಎಂಬುದು ಅರಿವಾಗಿತ್ತು. ಲಕ್ಷ್ಮೀನಾರಾಯಣ್‌ರವರ ಚಿತ್ರಗಳು, ಪುಟ್ಟಣ್ಣನವರ ಬೆಳ್ಳಿಮೋಡ, ಗೆಜ್ಜೆಪೂಜೆ, ಚದುರಂಗರ ಸರ್ವಮಂಗಳಾ, ಕೃಷ್ಣಸ್ವಾಮಿಯವರ 'ಸುಬ್ಬಾಶಾಸ್ತ್ರಿ' ಸಣ್ಣ ಕಂಪನ ಹುಟ್ಟುಹಾಕಿದ್ದವು. ಭಾವುಕ ನೆಲೆಗಿಂತ ಬೇರೆ ರೀತಿಯಲ್ಲಿ ಚಿತ್ರ ಪ್ರೇಕ್ಷಕರನ್ನು ತಟ್ಟುವ ಪರಿ ತೋರಿಸಿಕೊಟ್ಟ ಚಿತ್ರಗಳಿವು. ಆದರೆ 'ಸಂಸ್ಕಾರ' ಚಿತ್ರ ಇದಕ್ಕೂ ಮುಂದೆ ಹೋಗಿ ಬೌದ್ಧಿಕವಾಗಿಯೂ ಕೆಣಕುವ ಸಾಧ್ಯತೆಯನ್ನು ತೆರೆದಿಟ್ಟಿತು. ಪಟ್ಟಾಭಿರಾಮ ರೆಡ್ಡಿ ನಿರ್ದೇಶನದ ಈ ಚಿತ್ರ ವಾಸ್ತವತೆಯನ್ನು ಹಸೀ ಹಸೀ ಹಿಡಿದಿಟ್ಟದ್ದಷ್ಟೇ ಅಲ್ಲ, ವಸ್ತುವನ್ನು ರಾಜಕೀಯವಾಗಿ ಗ್ರಹಿಸಿದ ಚಿತ್ರ ಕೂಡ. ಇದಕ್ಕೆ ಆ ಕಾದಂಬರಿಯ ಕರ್ತೃವಾದ ಡಾ॥ ಯು. ಆರ್. ಅನಂತಮೂರ್ತಿಯವರ ದರ್ಶಕ ಶಕ್ತಿಯೂ ಮೂಲವಾಗಿರಬಹುದು. ಆದರೆ ರಾಯ್‌ಯವರ ಚಿತ್ರಗಳನ್ನು ನೋಡಿದಾಗ ಕನ್ನಡ ಚಿತ್ರಗಳಲ್ಲಿ ಕಾಣದಿದ್ದ ಮಾಧ್ಯಮದ ಮೇಲಿನ ಪ್ರಭುತ್ವ ಕಂಡುಬಂತು. ವಸ್ತುವನ್ನು ಅವರು ಸಾದರಪಡಿಸುವ ಕ್ರಮ ಸಿನಿಮಾದ ಜಾಯಮಾನಕ್ಕೆ ಸೇರಿದ್ದು ಎನ್ನಿಸಿತು. ಆಗ ಸಿನಿಮಾ ಮೇಲಿನ ನನ್ನ ಆಸಕ್ತಿ ಹೆಚ್ಚಿ, ಪೂನಾದ ಫಿಲ್ಮ್ ಇನ್‌ಸ್ಟಿಟ್ಯೂಟ್‌ಗೆ ಅರ್ಜಿ ಹಾಕಿದೆ. ಅಲ್ಲಿ ಓದುವ ಅವಕಾಶ ಸಿಗಬಹುದೆಂಬ ನಿರೀಕ್ಷೆ ಇರಲಿಲ್ಲ. ಆದರೆ ಸೀಟು ಸಿಕ್ಕಿತು.

**ಹೊ** : ಈಗಾಗಲೇ ನೀವು ಹಲವು ಚಿತ್ರಗಳನ್ನು ಮಾಡಿದ್ದೀರಿ. ಕೆಲವಕ್ಕೆ ಪ್ರಶಸ್ತಿ ಬಂದಿದೆ. ನೀವು ನಿರ್ದೇಶಿಸಿದ ಚಿತ್ರಗಳಲ್ಲಿ ನಿಮಗೆ ಹೆಚ್ಚು ತೃಪ್ತಿ ಕೊಟ್ಟದ್ದು ಯಾವುದು?

**ಗಿ** : ಇನ್‌ಸ್ಟಿಟ್ಯೂಟಿನಲ್ಲಿ ಡಿಗ್ರಿ ಡಿಪ್ಲೊಮಾಕ್ಕಾಗಿ ಮಾಡಿದ್ದ 'ಅವಶೇಷ'. ಅನಂತರ 'ಘಟಶ್ರಾದ್ಧ', ಅದರ ನಂತರ 'ತಾಯಿಸಾಹೇಬ'. ಇವು ನನಗೆ ಖುಷಿ ಕೊಟ್ಟ ಚಿತ್ರಗಳು. ಕಳೆದ ೨೫ ವರ್ಷಗಳಲ್ಲಿ ಮಾಡಿರುವುದು ಕೇವಲ ೯ ಚಿತ್ರಗಳನ್ನು. ಆದರೆ ಪ್ರತಿ ಚಿತ್ರವೂ ಹಿಂದಿನ ಚಿತ್ರಕ್ಕೆ ಪ್ರತಿಸಂವಾದಿಯಾಗಿಯೇ ಹುಟ್ಟಿಕೊಳ್ಳುವುದು. ಹೀಗಾಗಿ ಪ್ರತಿ ಚಿತ್ರಗಳೂ ಕಥೆ ಬೇರೆಯಾದರೂ, ಒಂದು ಚಿಂತನೆಯ ಮುಂದುವರಿಕೆಯಾಗಿರುತ್ತದೆ. ೧೯೭೭ರಲ್ಲಿ 'ಘಟಶ್ರಾದ್ಧ' ಮಾಡಿದೆ. ಆಗ ನನಗೆ ೨೬ ವರ್ಷ.

**ಹೊ** : ಪ್ರಶಸ್ತಿ ಗಳಿಸಿದವರ ಪೈಕಿ ನೀವು ಅತ್ಯಂತ ಕಿರಿಯ ನಿರ್ದೇಶಕರೆಂದಾಯಿತು.

**ಗಿ** ; 'ಸ್ವರ್ಣಕಮಲ' ಪ್ರಶಸ್ತಿ ಗಳಿಸಿದ ನಿರ್ದೇಶಕರ ಪೈಕಿ ನಾನು ಅತ್ಯಂತ ಕಿರಿಯ ಎನ್ನಬಹುದು. ಆಗ ನಡೆಯುತ್ತಿದ್ದ ಸಾಂಸ್ಕೃತಿಕ ಸಂವಾದಗಳು, ಬ್ರಾಹ್ಮಣ-ಶೂದ್ರ ಸಂಘರ್ಷ, ಶ್ರೇಣೀಕೃತ ಸಮಾಜವನ್ನು ಖಂಡಿಸುವ ಸಿಟ್ಟು - ಇವೆಲ್ಲ ನನ್ನ ಮೇಲೆ ಪರಿಣಾಮ ಬೀರಿವೆ. ೮೦ರ ದಶಕದ ನಂತರ ಪರಿಸ್ಥಿತಿ ಬದಲಾಗಿದೆ.

'ತಬರನ ಕಥೆ'ಯಲ್ಲಿ ಅಂಥ ಒಳಗುದಿ ಚಿತ್ರಿತವಾಗಿದೆ. ನಮಗೆ ತಿಳಿಯದಂತೆಯೇ ನಾವು ಶೋಷಕರೂ, ಶೋಷಿತರೂ ಆಗಿರುವ ಅಪಾಯ ಗಮನಿಸಬೇಕಾದ ವಿಷಯ. ನಾವು ಯಾವ ಸಮಸ್ಯೆಯ ವಿರುದ್ಧ ಸಿಟ್ಟಿನಿಂದ ಹೋರಾಡುತ್ತೇವೆಯೋ, ಅದೇ ಸಮಸ್ಯೆಯ ಪೋಷಕರೂ ನಾವೇ ಆಗಿರುವಂಥ ಅಪಾಯ ಅದು. 'ತಬರನ ಕಥೆ'ಯಲ್ಲಿ ಪ್ರಧಾನವಾಗಿ ವ್ಯಕ್ತವಾಗಿರುವ ವಿಷಯ ಅದೇ. ಮಾತೆತ್ತಿದರೆ ಬ್ರಿಟಿಷರ ಕಾಲ ಚೆನ್ನಾಗಿತ್ತೆಂದು ಹೊಗಳುವ ತಬರನಿಗೆ, ಬ್ರಿಟಿಷರಿಂದಲೇ ವಾರಸಾಗಿ ಬಂದಿರುವ ವ್ಯವಸ್ಥೆಯೇ ತನ್ನ ಈ ದುಸ್ಥಿತಿಗೆ ಕಾರಣ ಎಂಬುದು ಅರ್ಥವಾಗಿರುವುದಿಲ್ಲ.

**ಹೊ** : ನೀವು ಸೂಚಿಸಿದ ವ್ಯವಸ್ಥೆ ಸಿನಿಮಾ ಪ್ರಭಾವದಿಂದ ಈಗೇನಾದರೂ ಬದಲಾಗಿದೆಯೆ ?

**ಗಿ** : ನೆಹರೂ ಕಾಲದಲ್ಲಿ, ನಮ್ಮ ಭಿನ್ನಾಭಿಪ್ರಾಯಗಳೇನೇ ಇದ್ದರೂ, ಅವರಿಗೊಂದು ಸದುದ್ದೇಶವಿತ್ತು. ಅನಂತರ ಅವಕಾಶವಾದಿ ರಾಜಕೀಯ ಪ್ರಾರಂಭವಾಯಿತು. ಉದಾಹರಣೆಗೆ, ಈಗ ಮಾಯಾವತಿ ಬಿಜೆಪಿಯೊಂದಿಗೆ ಕೈಜೋಡಿಸಿರುವಂಥ ದುರಂತ. ಕಳೆದ ೧೫ ವರ್ಷಗಳಲ್ಲಿ ಅಧಿಕಾರಕ್ಕೆ ಬಂದ ಯಾವ ಪಕ್ಷವೂ ಕಾಂಗ್ರೆಸ್ಸಿಗಿಂತ ಭಿನ್ನವಾಗಿರುವ ಲಕ್ಷಣ ಕಾಣಿಸುತ್ತಿಲ್ಲ. ತುರ್ತು ಪರಿಸ್ಥಿತಿಯ ನಂತರ ಅಂಥ ಒಂದು ಅವಕಾಶ ನಮಗೆ

ಒದಗಿತ್ತು. ವ್ಯವಸ್ಥೆಯನ್ನು ಆಮೂಲಾಗ್ರ ಬದಲಾಯಿಸಲೇಬೇಕೆಂಬ ಆವೇಶ ಎಲ್ಲರಲ್ಲಿಯೂ ಇತ್ತು. ಆದರೆ ಅನಂತರ ಅದು ಮುಂದುವರಿಯಲಿಲ್ಲ. ಜಯಪ್ರಕಾಶ್ ನಾರಾಯಣರು ಸಂಪೂರ್ಣ ಕ್ರಾಂತಿಯ ಭರವಸೆಯನ್ನೇನೋ ನೀಡಿದರು. ಆದರೆ ತುರ್ತುಪರಿಸ್ಥಿತಿಯ ನಂತರ ಅವರೆಗೆ ಮುಖ್ಯವಾಹಿನಿಯಿಂದ ಹೊರಗುಳಿದಿದ್ದ ಬಲಪಂಥೀಯ ಶಕ್ತಿಗಳನ್ನು ತನ್ನೊಳಗೆ ಸೇರಿಸಿಕೊಂಡಿದ್ದು ದೊಡ್ಡ ದುರಂತ.

**ಹೊ** : ಅವರೆಗೆ ಒಂದು ಪರಿಮಿತಿಯಲ್ಲಿ ಕೆಲಸ ಮಾಡುತ್ತಿದ್ದ ಆರೆಸ್ಸೆಸ್ ಗುಜರಾತ್ ಮತ್ತು ಬಿಹಾರ ರಾಜ್ಯಗಳಲ್ಲಿ ಪ್ರತಿ ಹಳ್ಳಿಯಲ್ಲಿ ಶಾಖೆ ತೆರೆಯಲು ಸಾಧ್ಯವಾಯಿತು !

**ಗಿ** : ಸಂಪೂರ್ಣ ಕ್ರಾಂತಿಯ ಕನಸು ಮುಗ್ಗರಿಸಿದ್ದು ಅಲ್ಲಿಯೇ....

**ಹೊ** : ಈಗ ರಾಜಕೀಯದಲ್ಲಿ ವಿಷಣ್ಣ ಪರಿಸ್ಥಿತಿ ಇದೆ ಎನ್ನುತ್ತೀರಿ. ಈ ಪರಿಸ್ಥಿತಿಯಲ್ಲಿಯೂ ಬದಲಾವಣೆ ತರಲು ಸಾಧ್ಯ ಎಂದು ಎಡಪಂಥೀಯ ಒಲವಿನವರು ನಂಬಿಕೆ ಇಟ್ಟುಕೊಂಡಿದ್ದಾರೆ. ಈ ಬಗ್ಗೆ ನೀವೇನೆನ್ನುವಿರಿ?

**ಗಿ** : ಭರವಸೆ ಇಲ್ಲ ಎನ್ನುವಂತಿಲ್ಲ. ಆ ಕಾಲಕ್ಕೆ ನಾವಿರಿಸಿದ್ದ ಭರವಸೆಯನ್ನು ಸಂಪೂರ್ಣ ಕ್ರಾಂತಿಯ ನೇತಾರರೆನಿಸಿಕೊಂಡಿದ್ದ ಮಹಾನಾಯಕರು ಸಂಪೂರ್ಣ ಹಾಳು ಮಾಡಿದರು. ನಿಖರವಾದ ಕಾರ್ಯಸೂಚಿಯಿಲ್ಲದೇ, ವೈಜ್ಞಾನಿಕವಾದ ಗ್ರಹಿಕೆ ಇಲ್ಲದೇ, ಭೋಳೇ ಆಶಾಭಾವನೆ ನಿರಾಶಾವಾದಕ್ಕಿಂತ ಹೆಚ್ಚು ಅಪಾಯಕಾರಿ. ಈ ಸಂದರ್ಭದಲ್ಲಿ, ಸಮುದ್ರ ಮಧ್ಯದಲ್ಲಿ ಹಡಗು ದಾರಿತಪ್ಪಿ ದಿಕ್ಕುತೋಚದೆ ದಿನಕಳೆಯಬೇಕಾದ ಗೊಂದಲದ ಪರಿಸ್ಥಿತಿಯಲ್ಲಿ ಪ್ರಯಾಣಿಕರು ಅಲ್ಲಿದ್ದ ಆಶಾವಾದಿ ನಿರಾಶಾವಾದಿ ಇಬ್ಬರನ್ನೂ ಸಮುದ್ರಕ್ಕೆಸೆದ ರಸೆಲ್‌ರ ಒಂದು ಕಥೆ ನೆನಪಿಗೆ ಬರುತ್ತದೆ. ಯಾವ ಒಂದು ತಾರ್ಕಿಕ ಆಧಾರವೂ ಇಲ್ಲದೆ ಆಶಾಭಾವನೆ ಇಟ್ಟುಕೊಳ್ಳುವುದರಿಂದ ಫಲ ದೊರಕಲಾರದಷ್ಟೆ!

**ಹೊ** : ಅಥವಾ ಇದು ಹೋರಾಟದ ಮೂಲಕ ಸಾಧ್ಯವಾಗುತ್ತದೆಯೇ?

**ಗಿ** : ಏನೇ ನಡೆಯುತ್ತಿದ್ದರೂ ಎಲ್ಲ ಒಳ್ಳೆಯದಕ್ಕೇ ಅಥವಾ ಆಗಬೇಕಾದ್ದು ಆಗುತ್ತದೆ ಎಂಬ ನಿಷ್ಕ್ರಿಯ ಮನೋಭಾವದ ಮಧ್ಯಮ ವರ್ಗದ ಜನರಿಂದ ಹೋರಾಟ ಸಾಧ್ಯವೆ ?

**ಹೊ** : ಈಗ ಬರುತ್ತಿರುವ ಕನ್ನಡ ಸಿನಿಮಾಗಳ ಕುರಿತು: ಸಮಾಜದ ಮೇಲೆ ನೇತ್ಯಾತ್ಮಕ ಪರಿಣಾಮ ಬೀರುವ ಸಿನಿಮಾಗಳು ಹೆಚ್ಚು ಸಂಖ್ಯೆಯಲ್ಲಿ ಬರುತ್ತಿವೆ. ಇವುಗಳ ಗುಣಮಟ್ಟ ಉತ್ತಮಗೊಳಿಸುವುದು ಹೇಗೆ? ಈ ಸಮಸ್ಯೆಗೆ ಪರಿಹಾರವೇನು?

**ಗಿ** : ಎಲ್ಲಿಯವರೆಗೆ ಇದನ್ನೊಂದು ಕೇವಲ ವ್ಯಾಪಾರವೆಂದು ಭಾವಿಸುತ್ತೇವೆಯೋ ಅಲ್ಲಿಯವರೆಗೆ ಗುಣಮಟ್ಟದ ಪ್ರಶ್ನೆ ಮುಖ್ಯವಾಗುವುದಿಲ್ಲ. ವ್ಯಾಪಾರದಲ್ಲಿ ನೈತಿಕತೆಯ ಪ್ರಶ್ನೆ ಇಲ್ಲ - ಹೆಚ್ಚು ಲಾಭಗಳಿಕೆಯೇ ಮುಖ್ಯ. ಆದರೆ ಸಿನಿಮಾ ಉದ್ಯಮ ಮೂಲತಃ ವ್ಯಾಪಾರವಲ್ಲ, ನೈತಿಕ ಪ್ರಶ್ನೆ ಬೆರೆತಿರುವ ಒಂದು ಕಲಾ ಮಾಧ್ಯಮ.

**ಹೊ** : ನಿಮ್ಮ ಚಿತ್ರಗಳನ್ನು ನೋಡುವ ಜನವಿಭಾಗ ಯಾವುದು? ಕಲಾತ್ಮಕ ಸಿನಿಮಾಗಳನ್ನು ಜನಪ್ರಿಯಗೊಳಿಸಲು ಸಾಧ್ಯವಿಲ್ಲವೆ? ಜನಪ್ರಿಯ ಸಿನಿಮಾಗಳನ್ನು ಗಂಭೀರ ಪ್ರೇಕ್ಷಕನಿಗೆ ತಲುಪುವಂತೆ ಮಾಡಲು ಸಾಧ್ಯವಿಲ್ಲವೆ?

**ಗಿ** : ಇದು ಅಭಿರುಚಿಗೆ ಸಂಬಂಧಿಸಿದ್ದು. ತಿನ್ನುವ ಅಭ್ಯಾಸದಿಂದ ರುಚಿ ಬೆಳೆಯುತ್ತದೆ. ಗ್ರಾಹಕರನ್ನು ಬೆಳೆಸುವ ಕ್ರಮವೆಂದರೆ ಅವರ ಅಭಿರುಚಿಯನ್ನು ಹೆಚ್ಚಿಸುವ ರುಚಿಯನ್ನು ಪದೇಪದೇ ನೀಡಬೇಕಾಗುತ್ತದೆ. ಉದಾಹರಣೆಗೆ, 'ಚೋಮನ ದುಡಿ' ಬಂದ ಹತ್ತು ವರ್ಷಗಳ ನಂತರ 'ಫಣಿಯಮ್ಮ' ಬಂದರೆ ರುಚಿ ಹೇಗೆ ಹೆಚ್ಚೀತು? ಆದೇ ಬಂಗಾಳಿ ಮತ್ತು ಮಲಯಾಳಂನಲ್ಲಿ ಪ್ರಧಾನವಾಹಿನಿಗೆ ಸೇರಬಹುದಾದ, ವಾಸ್ತವಕ್ಕೆ ಹೆಚ್ಚು ಹತ್ತಿರವಾದ ಚಿತ್ರಗಳು ಬರುತ್ತವೆ. ಅವು ಸಾಮಾಜಿಕ ಸಮಸ್ಯೆಯ ವಿವಿಧ ಮುಖಗಳನ್ನು ಚಿತ್ರಿಸುತ್ತವೆ. ನಮ್ಮ ಪ್ರಧಾನವಾಹಿನಿ ಚಿತ್ರಗಳು ಗೂಂಡಾ ಸಂಸ್ಕೃತಿ, ಡ್ರಗ್ ಮಾಫಿಯಾ ಮೊದಲಾದ ಸಮಸ್ಯೆಗಳನ್ನು ಅತಿರಂಜಿತವಾಗಿ ಚಿತ್ರಿಸುವುದಕ್ಕೆ ಹೆಚ್ಚು ಮಹತ್ವ ನೀಡುತ್ತವೆ.

ನಮ್ಮ ಮತ್ತೊಂದು ಸಮಸ್ಯೆಯೆಂದರೆ ಕಲಾತ್ಮಕ ಚಿತ್ರವಾಗಲಿ, ಪ್ರಧಾನವಾಹಿನಿ ಚಿತ್ರವಾಗಲಿ ವಿತರಣೆ ಜಾಲಬಂಧದ ಮೂಲಕವೇ ಪ್ರೇಕ್ಷಕರನ್ನು ತಲುಪಬೇಕಾಗಿದೆ. ನನ್ನ ಚಿತ್ರಗಳಿಗೂ ಪ್ರೇಕ್ಷಕರಿದ್ದಾರೆ. ದೊಡ್ಡ ಮಟ್ಟದಲ್ಲಿ ಇಲ್ಲದಿರಬಹುದು. ಕೇರಳದಲ್ಲಿ ಈ ವಿತರಣೆ ವ್ಯವಸ್ಥೆ ಸಮರ್ಥವಾಗಿ ಕೆಲಸ ಮಾಡುತ್ತದೆ. ಅಲ್ಲಿ ಕೆಲವು ಕೇಂದ್ರಗಳಿಗೇ ಸೀಮಿತವಾಗಿಲ್ಲ. ದೂರದ ಹಳ್ಳಿಗಳಲ್ಲಿಯೂ ಸಿನಿಮಾಗಳು ಎರಡು ವಾರ ನಡೆಯುತ್ತವೆ. ಕಡಿಮೆ ಸಂಖ್ಯೆಯ ಜನರಾದರೂ ನೋಡಬಹುದಾದಂಥ ವ್ಯವಸ್ಥೆ ನಮ್ಮಲ್ಲಿಲ್ಲದಿರುವುದು ಒಂದು ಕೊರತೆ.

**ಹೊ** : ಪ್ರೇಕ್ಷಕರ ಅಭಿರುಚಿಯ ಮಟ್ಟ ಬಂಗಾಳ ಮತ್ತು ಕೇರಳ ರಾಜ್ಯಗಳಲ್ಲಿ ಹೆಚ್ಚಿರಬಹುದೆ?

**ಗಿ** : ಹೌದು, ಇದಕ್ಕೆ ಹಲವಾರು ಕಾರಣಗಳಿವೆ. ಅಲ್ಲಿನ ಜನರ ವಿದ್ಯಾರ್ಹತೆ, ಸಾಮಾಜಿಕ ಪ್ರಜ್ಞೆ. ಅಲ್ಲಿಯ ಜನತೆಗೆ ಸಾಮೂಹಿಕ ಹೋರಾಟಗಳ ಚಾರಿತ್ರಿಕ ಹಿನ್ನೆಲೆಯಿದೆ. ಈ ರೀತಿಯ ಅಭಿರುಚಿ ಪ್ರೇಕ್ಷಕರಲ್ಲಿ ಬೆಳೆಯದಿರುವುದಕ್ಕೆ ಇಲ್ಲಿ ಇನ್ನೊಂದು ಕಾರಣವನ್ನೂ ಕೊಡಬಹುದು. ದಶಕಗಳ ಕಾಲ ಕನ್ನಡ ಚಿತ್ರರಂಗ ಅನ್ಯಭಾಷಿಕರ ಕೈಯಲ್ಲೇ ಬೆಳೆದುಬಂದದ್ದು. ಕನ್ನಡದ ನೆಲ, ಸಂಸ್ಕೃತಿಗಳ ಬಗ್ಗೆ ವಿಶೇಷ ಅಭಿಮಾನ ಇಲ್ಲದ ಇವರು, ಈ ಚಿತ್ರರಂಗಕ್ಕೆ ಬಂದದ್ದು ಇಲ್ಲಿ ಕಾಣುವ ಲಾಭಕ್ಕಾಗಿ. ಅಂಥವರಿಂದ ಯಾವುದೇ ರೀತಿಯ ಬದ್ಧತೆಯನ್ನೂ ನಿರೀಕ್ಷಿಸಲು ಸಾಧ್ಯವೇ? ಕನ್ನಡ ಪ್ರೇಕ್ಷಕ ಈ ರೀತಿಯ ಚಿತ್ರಗಳಿಗೆ ತನ್ನನ್ನು ಒಡ್ಡಿಕೊಂಡಿದ್ದು ಎಂಬುದನ್ನೂ ನಾವು ನೆನಪಿಸಿಕೊಳ್ಳಬೇಕು.

**ಹೊ** : ನಿಮ್ಮ ಚಿತ್ರಗಳು ಗ್ರಾಮಾಂತರ ಪ್ರದೇಶಗಳಿಗೆ ಎಷ್ಟರಮಟ್ಟಿಗೆ ತಲುಪಿವೆ ?

**ಗಿ** : ಇಲ್ಲವೇ ಇಲ್ಲ ಎನ್ನಬಹುದು. ೮-೧೦ ನಗರಗಳನ್ನು ಬಿಟ್ಟರೆ ಬೇರೆ ಕಡೆಗೆ ಹೋಗಲು ಸಾಧ್ಯವಾಗಿಲ್ಲ. ಎಲ್ಲ ಕಡೆಯೂ ಒಂದು ವಾರ ನಡೆಯಬೇಕು ಎಂಬುದಿಲ್ಲ. ಎರಡು ದಿನ ನಡೆದರೂ ಸಾಕಷ್ಟು ಪ್ರೇಕ್ಷಕರನ್ನು ತಲುಪಲು ಸಾಧ್ಯವಿದೆ. ನಮ್ಮಲ್ಲಿ ಅಂಥ ವ್ಯವಸ್ಥೆಯೇ ಇಲ್ಲ.

**ಹೊ** : ಹೊಸ ಅಲೆಯ ಚಿತ್ರಗಳ, ಕಲಾತ್ಮಕ ಚಿತ್ರಗಳ ಪರಿಸ್ಥಿತಿ ಈ ರೀತಿ ಇರುವುದರಿಂದ, ಅವು ಫಿಲ್ಮ್ ಸೊಸೈಟಿಗಳ ಮೂಲಕವಾದರೂ ತಲುಪಬಹುದಲ್ಲವೆ ? ಆದರೆ, ಇತ್ತೀಚೆಗೆ ಈ ಸೊಸೈಟಿಗಳ ಸಂಖ್ಯೆಯೂ ಕಡಿಮೆಯಾಗುತ್ತಿದೆ. ಜನರು ಸರಕಾರದ ನೆರವಿನಿಂದ ಈ ಸೊಸೈಟಿಗಳನ್ನು ಅಭಿವೃದ್ಧಿಪಡಿಸಬಹುದೆ ? ನಿಮ್ಮ ಅಭಿಪ್ರಾಯವೇನು?

**ಗಿ** : ಚಿತ್ರ ಸಮಾಜಗಳ ಮೂಲಕ ಜನರನ್ನು ತಲುಪಬಹುದು ಎಂಬ ಭರವಸೆ ಹಿಂದೆ ಇತ್ತು. ಈಗ ಪರಿಸ್ಥಿತಿ ಬದಲಾಗಿದೆ. ಮುಕ್ತಮಾರುಕಟ್ಟೆಯ ಈ ದಿನಗಳಲ್ಲಿ ನಾವು ಸರಕಾರದ

*ಶಿವಮೊಗ್ಗ ಜಿಲ್ಲೆಯ ಹಳ್ಳಿಯಲ್ಲಿ ಹುಟ್ಟಿ, ಕೆ. ವಿ. ಸುಬ್ಬಣ್ಣನವರಿಂದ ಪ್ರಭಾವಿತರಾಗಿ, ಯೌವನದಲ್ಲಿಯೇ ಸಿನಿಮಾ ಪ್ರಪಂಚಕ್ಕೆ ಕಾಲಿಟ್ಟು ತನ್ನ ೨೭ನೇ ವರ್ಷದಲ್ಲಿಯೇ 'ಘಟಶ್ರಾದ್ಧ'ದ ಮೂಲಕ ಇತಿಹಾಸ ಸೃಷ್ಟಿಸಿದ ಕನ್ನಡದ ಅತ್ಯಂತ ಪ್ರತಿಭಾವಂತ ನಿರ್ದೇಶಕರಲ್ಲೊಬ್ಬರಾದ ಗಿರೀಶ್ ಕಾಸರವಳ್ಳಿ ಅವರನ್ನು ಸಂದರ್ಶಿಸಿದ್ದು 'ಹೊಸತು' ತಂಡಕ್ಕೆ ಒಂದು ಸ್ಮರಣೀಯ ಅನುಭವ. 'ಘಟಶ್ರಾದ್ಧ'ದ ಜೊತೆಗೆ 'ತಬರನ ಕಥೆ', 'ತಾಯಿ ಸಾಹೇಬ'ಗಳಿಗೂ ರಾಷ್ಟ್ರದ ಅತ್ಯುತ್ತಮ ಪ್ರಶಸ್ತಿಯಾದ ಸ್ವರ್ಣಕಮಲ ತಮ್ಮದಾಗಿಸಿಕೊಂಡ ಗಿರೀಶ್ ಸಾಮಾಜಿಕ ಕಳಕಳಿಯುಳ್ಳ, ಸರಳ ಸ್ವಭಾವದ ವ್ಯಕ್ತಿ. ಪ್ರಗತಿಪರ ಚಿಂತನೆ, ಜಾತ್ಯಾತೀತತೆಗಳನ್ನು ಮೈಗೂಡಿಸಿಕೊಂಡು ಜನಪರ ಹೋರಾಟಗಳಲ್ಲಿ ಪಾಲ್ಗೊಳ್ಳುವುದು, ಶ್ರೀ ಬಿ.ವಿ. ಕಾರಂತರ ಜೊತೆಗಿನ ಒಡನಾಟ, ಇವರ ಸಂಪನ್ನತೆಯನ್ನು ಹೆಚ್ಚಿಸಿವೆ. ಸಾಮಾಜಿಕ ಕರ್ತವ್ಯವೆಂದು, ವ್ಯಾಪಾರಿ - ಕಲಾತ್ಮಕ ಎಂಬ ಎರಡು ರೀತಿಯ ಚಿತ್ರಗಳಿವೆಯೆಂದು ಹೇಳುವುದುಂಟು. ಜೊತೆಗೀಗ ಮೇಯ್ನ್ ಸ್ಟ್ರೀಮ್ ಸಿನಿಮಾ ಎಂಬ ಹೆಸರೂ ಪ್ರಚಲಿತವಾಗಿದೆ. ನಿಜವಾಗಿ ನೋಡಿದರೆ ಇರುವುದು ಒಳ್ಳೆಯ ಸಿನಿಮಾ ಅಥವಾ ಕೆಟ್ಟ ಸಿನಿಮಾ ಅಷ್ಟೆ.*

*ಗಿರೀಶ್ ಈ ಸಂದರ್ಶನದಲ್ಲಿ ಚಿತ್ರಕಲಾ ಮಾಧ್ಯಮದ ವಿವಿಧ ಆಯಾಮಗಳ ಕುರಿತು ಪ್ರತಿಕ್ರಿಯಿಸಿದ್ದಾರೆ. ಚಿತ್ರರಂಗ ಭವಿಷ್ಯಕ್ಕೆ ಇವರಿಂದ ಉತ್ತಮ ಕಾಣಿಕೆ ನಿರೀಕ್ಷಿಸುವುದು ಸಹಜವೇ. ಗಿರೀಶರ ಮನೆ 'ದೃಶ್ಯ'ಕ್ಕೆ ಭೇಟಿಯಿತ್ತು 'ಹೊಸತು' ಪರವಾಗಿ ಅವರನ್ನು ಸಂದರ್ಶಿಸಿದವರು ಡಾ|| ಜಿ. ರಾಮಕೃಷ್ಣ, ಕೆ. ಪಿ. ಸ್ವಾಮಿ ಮತ್ತು ಎಸ್. ಸುರೇಂದ್ರ. ಸಂದರ್ಶನ ಲೇಖನವನ್ನು ಸಿದ್ಧಪಡಿಸಿದವರು ಶ್ರೀ ಕೆ. ಪಿ. ಸ್ವಾಮಿ.*

ನೆರವು ಕೋರಿದರೆ, ಅಧಿಕಾರಶಾಹಿಯ ಬಲೆಗೆ ಸಿಕ್ಕಿಕೊಳ್ಳುತ್ತೇವೆ. ಅದು ಸಹ ಜಾಗತೀಕರಣದ ಹೊಸ ಭಾಷೆಯಲ್ಲೇ ವ್ಯವಹರಿಸುತ್ತದೆ. ಜೊತೆಗೆ ನಾವು ಗ್ರಾಹಕ ಸಂಸ್ಕೃತಿಯ ಹಿಡಿತದಿಂದ ಉಸಿರುಗಟ್ಟುವ ಪರಿಸ್ಥಿತಿಯಲ್ಲಿದ್ದೇವೆ. ವಸ್ತುವಿನ ಗುಣಮಟ್ಟವನ್ನು ನಿರ್ಣಯಿಸಲು ಜಾಹಿರಾತನ್ನು ಅವಲಂಬಿಸುತ್ತೇವೆ. ಜಾಹಿರಾತಿನ ದನಿ ಹೆಚ್ಚಾಗಿದ್ದಷ್ಟು ಅದು ಹೆಚ್ಚು ಜನರಿಗೆ ತಲುಪುತ್ತದೆ. ನಾವು ಚಿತ್ರ ಪ್ರದರ್ಶನಕ್ಕೆ ಥಿಯೇಟರ್ ಮತ್ತು ಫಿಲ್ಮ್ ಸೊಸೈಟಿಗಳನ್ನು ಅವಲಂಬಿಸುತ್ತೇವಷ್ಟೆ. ಒಂದು ಹೆಜ್ಜೆ ಮುಂದೆ ಹೋಗಿ ಬೇರೆ ಬೇರೆ ಸಾಂಸ್ಕೃತಿಕ ಸಂಸ್ಥೆಗಳ ಮೂಲಕ ಜನರನ್ನು ತಲುಪಲು ಪ್ರಯತ್ನಿಸಬೇಕಿದೆ. ಆದರೆ, ಸಿನಿಮಾ ತೋರಿಸಲು ಒಂದು ಸ್ಥಳ, ಒಂದು ಪ್ರೊಜೆಕ್ಟರ್ ಬೇಕಾಗುತ್ತದೆ. ಮೇಲಿನ ಪ್ರಯತ್ನ ಸಾಧ್ಯವಾಗದಿರಲು ಇದೂ ಒಂದು ತೊಡಕಾಗಿದೆ. ಬೇರೆ ಪ್ರಕಾರಗಳಲ್ಲಿ ಈ ತೊಡಕು ಇರುವುದಿಲ್ಲ. ಬೀದಿ ನಾಟಕ ಆಡಬಹುದು. ಕಾದಂಬರಿಯನ್ನು ಒಬ್ಬನೇ ಕುಳಿತು ಓದಬಹುದು. ಸಿನಿಮಾ ವಿಷಯ ಹಾಗಾಗುವುದಿಲ್ಲ. ಈಗ ಬರುತ್ತಿರುವ ಹೊಸ ತಂತ್ರಜ್ಞಾನದಿಂದ ಕಡಿಮೆ ಸಂಖ್ಯೆಯ ಜನರನ್ನೂ ಸುಲಭವಾಗಿ ತಲುಪಬಹುದಾಗಿದೆ. ಒಮ್ಮೆ ಮುರಾರಿ ಬಲ್ಲಾಳರು ನನ್ನ ಸಿನಿಮಾ ತೋರಿಸಲು ಅಪೇಕ್ಷಿಸಿದರು. ಸುಮಾರು ೧೫೦ ಮಂದಿ ಪ್ರೇಕ್ಷಕರಿದ್ದರು. ಮೂರು ಟಿ. ವಿ. ಸೆಟ್ಟುಗಳನ್ನು ಅಣಿಮಾಡಿಕೊಂಡು ವಿಸಿಆರ್ ಮೂಲಕ ಅವರಿಗೆ ಸಿನಿಮಾ ತೋರಿಸಿದೆವು. ಇದರಿಂದ ಆಸಕ್ತರು, ಕಡಿಮೆ ಸಂಖ್ಯೆಯಲ್ಲಿದ್ದರೂ, ಸಿನಿಮಾ ನೋಡುವ ಅವಕಾಶ ಲಭ್ಯವಾಯಿತು.

ಹೊಸ ಅಲೆಯ ಚಿತ್ರಗಳು ಜನರಿಗೆ ಅರ್ಥವಾಗುವುದಿಲ್ಲ ಎಂಬುದು ಪೊಳ್ಳು ಪ್ರಚಾರ. ಇದೊಂದು ತಪ್ಪು ಗ್ರಹಿಕೆ. ಇದನ್ನು ಕೆ. ವಿ. ಸುಬ್ಬಣ್ಣನವರು ತಮ್ಮ ಜನಸಂವಾದ ಕಾರ್ಯಕ್ರಮಗಳ ಮೂಲಕ ತೋರಿಸಿಕೊಟ್ಟಿದ್ದಾರೆ. 'ಪಥೇರ್ ಪಾಂಚಾಲಿ' ಯಂಥ ಸಿನಿಮಾ ಮೀನುಗಾರರಿಗೂ, ಬುಡಕಟ್ಟು ಜನರಿಗೂ ಅರ್ಥವಾಗುತ್ತದೆ. ನಮ್ಮ ಚಿತ್ರಗಳು ಸೋತದ್ದು ಸಂವಹನದ ಅಸಾಮರ್ಥ್ಯದಿಂದಂತೂ ಅಲ್ಲ. ಕುಮಾರ್ ಸಾಹನಿ ಮುಂತಾದ ಕೆಲವರ ಚಿತ್ರಗಳು ಒಂದು ರೀತಿಯಲ್ಲಿ ಸಂಕೀರ್ಣವಾದವು. ಆದರೆ ಕನ್ನಡದಲ್ಲಿ ಯಾರೂ ಅಂಥ ಚಿತ್ರಗಳನ್ನು ಮಾಡುತ್ತಿಲ್ಲ.

**ಹೊ** : ಹೊಸ ಅಲೆಯ ಚಿತ್ರಗಳಿಗೆ ಭವಿಷ್ಯ ಇದೆಯೆ ?

ಗಿ : ಯಾಕಿರುವುದಿಲ್ಲ? ಪ್ರವಾಹದ ವಿರುದ್ಧ ಈಜಾಡುವ ಪ್ರವೃತ್ತಿಯ ಜನ ಯಾವ ಕಾಲಕ್ಕೂ ಇರುತ್ತಾರೆ. ಒಂದು ಜನಪ್ರಿಯ ಗ್ರಹಿಕೆ ಎಂದರೆ ಈ ರೀತಿಯ ಚಿತ್ರಗಳು ಆರ್ಥಿಕವಾಗಿ ಲಾಭದಾಯಕ ಅಲ್ಲ ಎಂಬುದು. ಹಾಕಿದ ಬಂಡವಾಳದ ಹತ್ತುಪಟ್ಟು ಲಾಭವನ್ನು ಈ ಚಿತ್ರಗಳು ತಂದುಕೊಡುವುದಿಲ್ಲ ಎಂಬುದು ನಿಜವಿರಬಹುದು. ( ಪಥೇರ್ ಪಾಂಚಾಲಿ, ಪಿರವಿ ಅಂತಹ ಅಪವಾದಗಳೂ ಇದೆ). ಆದರೆ ಹಾಕಿದ ಬಂಡವಾಳ ಸೂಕ್ತ ಲಾಭಾಂಶದೊಂದಿಗೆ ವಾಪಸ್ ಸಿಗುವುದಂತೂ ಸಾಧ್ಯವಿದೆ. ನನ್ನ ಚಿತ್ರಗಳನ್ನೇ ಉದಾಹರಣೆಗಾಗಿ ತೆಗೆದುಕೊಂಡರೂ ಯಾವ ನಿರ್ಮಾಪಕನೂ ಹಾಕಿದ ಬಂಡವಾಳ ಕಳೆದುಕೊಂಡಿಲ್ಲ. ಹಾಗೆಂದು ಈ ಸಿನಿಮಾಗಳಿಂದ ಭಾರೀ ಆಸ್ತಿಯೂ ಮಾಡಿಲ್ಲ. ಒಳ್ಳೆ ಸಿನಿಮಾ ಮಾಡಿದ ಒಂದು ತೃಪ್ತಿಯಂತೂ ಅವರಿಗೆ ಸಿಕ್ಕಿರುತ್ತದೆ. ಸಿನಿಮಾ ಮಾಡಲು ಬರುವವರಿಗೆ ನಾನು ಒಂದು ಮಾತು ಹೇಳುತ್ತೇನೆ. ಭಾರೀ ಲಾಭ ಮಾಡುವ ಒಂದೇ ದೃಷ್ಟಿಯಿಂದ ಸಿನಿಮಾ ತಯಾರಿಸಬೇಡಿ ಎಂದು. ಹಾಗೆಂದು ಒಂದಿಷ್ಟೂ ಪ್ರತಿಫಲ ಅಪೇಕ್ಷಿಸಬಾರದೆಂದೂ ಅಲ್ಲ. ಒಂದು ನೈತಿಕ ಗೆರೆಯನ್ನಿಟ್ಟುಕೊಂಡು ಮುಂದುವರಿಯಬೇಕಷ್ಟೆ.

**ಹೊ** : ಕನ್ನಡದ ಸಿನಿಮಾಗಳಲ್ಲಿ ನಾಟಕದ ಛಾಯೆ ಹೆಚ್ಚಾಗಿರುತ್ತದೆ ಎನ್ನಿಸುವುದಿಲ್ಲವೆ ?

ಗಿ : ಯಾವುದು ನಾಟಕೀಯ, ಯಾವುದು ಸಿನಿಮೀಯ ಎಂದು ಹೇಳಲು ಬಾರದು. ಉದಾಹರಣೆಗೆ, ತಮಿಳು ಸಂಭಾಷಣೆಯ ಕ್ರಮ ನಮಗೆ ವಿಚಿತ್ರವೆನ್ನಿಸಿದರೆ ಅವರಿಗೆ ಅದು ಸಹಜವಾಗಿರುತ್ತದೆ. ದಕ್ಷಿಣದ ಭಾಷೆಗಳಿಗೂ ಹಿಂದಿ ಸಿನಿಮಾ ಸಂಭಾಷಣೆಗೂ ಇರುವ ವ್ಯತ್ಯಾಸ ಗಮನಿಸಬಹುದು. ಆಯಾ ಭಾಷೆಯ ಗುಣಕ್ಕೆ ತಕ್ಕಂತೆ ಅದರ ಲಕ್ಷಣ ವ್ಯಕ್ತವಾಗುತ್ತದೆ.

ಕನ್ನಡ ಚಿತ್ರಗಳ ಶೈಲಿ ಬದಲಾಗಿಲ್ಲ ಎನ್ನುವುದು ನಿಜವಿರಬಹುದು; ಸ್ವಲ್ಪಮಟ್ಟಿಗೆ. ಈಗ ಟಿ.ವಿ.ಯಿಂದಾಗಿ ಎಲ್ಲರೂ ಎಲ್ಲ ಭಾಷೆಯ ಚಿತ್ರಗಳನ್ನು ನೋಡಿ, ಅದರೊಂದಿಗೆ ಕನ್ನಡ ಚಿತ್ರಗಳನ್ನು ಹೋಲಿಸುತ್ತಾರೆ. ಕನ್ನಡ ಚಿತ್ರರಂಗದ ಇನ್ನೊಂದು ಮಿತಿ ಎಂದರೆ ಇತರ ಸಾಂಸ್ಕೃತಿಕ ರಂಗಗಳಿಂದ ಕೊಡುಕೊಳ್ಳಾಟ ಹೆಚ್ಚಾಗಿಲ್ಲದಿರುವುದು. ಮಲಯಾಳಂ, ಬಂಗಾಳಿ ಭಾಷಾ ಚಿತ್ರಗಳಲ್ಲಿ ಪ್ರದೇಶದ ಸಾಹಿತ್ಯ, ಸಂಸ್ಕೃತಿಯೊಂದಿಗೆ ತಾಳೆ ಹಾಕಿಕೊಂಡಿರುವುದನ್ನು ಗಮನಿಸಬಹುದು. ಚಿತ್ರೋದ್ಯಮದವರು ತಮ್ಮ ಕಾಲದ ಸಾಂಸ್ಕೃತಿಕ ವಾಗ್ವಾದಗಳಿಗೆ ತೆರೆದುಕೊಂಡಾಗ ಅವರ ಕೃತಿಗಳಿಗೆ ತಾನೇ ತಾನಾಗಿ ಒಂದು ಎಚ್ಚರ ಇರುತ್ತದೆ. ಕನ್ನಡದ ಅನೇಕ ಸಿನಿಮಾಗಳಲ್ಲಿ ಅದು ಕಾಣಿಸುವುದಿಲ್ಲ.

ಉದಾಹರಣೆಗಾಗಿ, ಬಿ. ವಿ. ಕಾರಂತರು ಕನ್ನಡ ಸಿನಿಮಾ ಸಂಗೀತಕ್ಕೆ ನೀಡಿದ ಒಂದು ಹೊಸ ದನಿಯನ್ನು ಪ್ರಸ್ತಾಪಿಸಬಹುದು. ಶಿಷ್ಟ ಸಂಗೀತ ನೀಡಲಾರದವು ಎಂಬ ನಂಬಿಕೆಯಿಂದ ಸಿನಿಮಾ ಸಂಗೀತದಲ್ಲಿ ಕೆಲವು ವಾದ್ಯಗಳನ್ನು ಮುಖ್ಯ ವಾದ್ಯವಾಗಿ ಬಳಸುತ್ತಿರಲಿಲ್ಲ. ಕೆಲವು ವಾದ್ಯಗಳು ಮೆಲಡಿಕ್ ಆಗಲು ಸಾಧ್ಯವಿಲ್ಲ. ಏನಿದ್ದರೂ ಅವು ಅಲ್ಲಲ್ಲಿ ಅಪರೂಪಕ್ಕೆ ಬಳಕೆಯಾಗುವಂಥವು ಎಂಬ ನಂಬಿಕೆ. ಮೇಲ್ಜಾತಿಯವರ ಒಂದು ನಂಬಿಕೆಯನ್ನು ಎಲ್ಲರೂ ಒಪ್ಪಿ ತೆಪ್ಪಗಿರುವಂಥ ಸ್ಥಿತಿ. ಕಾರಂತರು ಈ ನಂಬಿಕೆಯನ್ನು ಪುಡಿಗುಟ್ಟಿದರು. ಸಿನಿಮಾ ಸಂಗೀತದಲ್ಲಿ ಅಸ್ಪೃಶ್ಯವೆನಿಸಿಕೊಂಡಿದ್ದ ದುಡಿಯಂಥ ಒಂದು ಚರ್ಮ ವಾದ್ಯವನ್ನು 'ಚೋಮನ ದುಡಿ'ಯಲ್ಲಿ ಹಿನ್ನೆಲೆ ಸಂಗೀತಕ್ಕೆ ಬಳಸಿಕೊಂಡರು. ಅದನ್ನು ಇಂಪಾದ ಸಂಗೀತವಾದ್ಯವಾಗಿ ಪರಿಗಣಿಸಿ ನೋಡುವುದನ್ನು ಸಾಧ್ಯಗೊಳಿಸಿದರು. ಹಾಗೆಯೇ 'ಕಾಡು', 'ಘಟಶ್ರಾದ್ಧ' ಇತ್ಯಾದಿ ಚಿತ್ರಗಳಲ್ಲಿ ಕೊಂಬು, ಕಹಳೆ, ತಮಟೆ, ಚೆಂಡೆ - ಮುಂತಾದ ವಾದ್ಯಗಳನ್ನು ಧಾರಾಳವಾಗಿ ಬಳಸಿಕೊಂಡರು. ನಿರ್ಲಕ್ಷಿತ ಸಂಸ್ಕೃತಿಯ ಬಗ್ಗೆ ಹೊರ ಜಗತ್ತಿನಲ್ಲಿ ನಡೆಯುತ್ತಿದ್ದ ಸಂವಾದಕ್ಕೆ ತೆರೆದುಕೊಂಡದ್ದರ ಪರಿಣಾಮ ಇದು.

**ಹೊ** : ಮೇಯ್ನ್‌ಸ್ಟ್ರೀಮ್ ಸಿನಿಮಾಗಳಲ್ಲಿ ನಮ್ಮ ರಾಜಕೀಯದ ಯಾವ ಪ್ರಶ್ನೆಯನ್ನೂ ಎತ್ತಿಕೊಳ್ಳುತ್ತಿಲ್ಲವಲ್ಲ !

ಗಿ : ರಾಜಕೀಯದ ಪ್ರಶ್ನೆಗಳನ್ನು ಕನ್ನಡದ ಅನೇಕ ಪ್ರಧಾನವಾಹಿನಿ ಚಿತ್ರಗಳಲ್ಲಿ ಎತ್ತಿಕೊಂಡಿದ್ದಾರೆ. ಆದರೆ ಅದನ್ನು ನಿರ್ವಹಿಸುವ ಕ್ರಮ ಸರಳವಾದದ್ದು. ಸಂಕೀರ್ಣವಾದ ರಾಜಕೀಯ ಸಮಸ್ಯೆಗಳಿಗೆ ಈ ಚಿತ್ರಗಳು ತೋರುವ ಪರಿಹಾರ ಬಾಲಿಶವಾದದ್ದು. ಅದಕ್ಕೆ ಅವರ ರಾಜಕೀಯ ಪ್ರಜ್ಞೆಯ ಅಭಾವವೂ ಕಾರಣವಾಗಿರಬಹುದು. ಯಾವುದು ಪ್ರಗತಿಶೀಲ, ಯಾವುದು ಪ್ರತಿಗಾಮಿ ಎಂಬುದು ಅರ್ಥವಾಗದಷ್ಟು ಮುಗ್ಧತನವಿದೆ. 'ಬಣ್ಣದ ವೇಷ' ಚಿತ್ರದಲ್ಲಿ ನಾನು ಹೇಳಿರುವಂತೆ, ರಾಜಕೀಯ ಪ್ರಜ್ಞೆಯಿಂದ ಹೊರತಾಗಿರುವುದೆಂದರೆ ಅದು ಮೌಲ್ಯವಾಗುವುದಿಲ್ಲ. ಅದರಲ್ಲಿ ಯಕ್ಷಗಾನ ಕಲಾವಿದನೊಬ್ಬ ಒಂದು ಪಾತ್ರ ಗಿಟ್ಟಿಸಿಕೊಳ್ಳುವುದಕ್ಕಾಗಿ ಬಹಳ ಕಸರತ್ತು ಮಾಡುತ್ತಾನೆ. ಪಾತ್ರ ದೊರಕಿದ ನಂತರ ತಾನೊಬ್ಬ ದೊಡ್ಡ ಕಲಾವಿದನಾದೆನೆಂದು ಹೆಮ್ಮೆಯಿಂದ ಬೀಗುತ್ತಾನೆ. ಆದರೆ ಮಠ ತನ್ನನ್ನು ದುಡಿಸಿಕೊಳ್ಳುತ್ತಿದೆ ಎಂಬುದನ್ನು ಅರ್ಥಮಾಡಿಕೊಳ್ಳಲಾಗದಷ್ಟು ಮುಗ್ಧನಾಗಿರುತ್ತಾನೆ.

**ಹೊ** : ತುಲನಾತ್ಮಕ ದೃಷ್ಟಿಯಿಂದ ಚಲನಚಿತ್ರವನ್ನು ನೋಡಿ ಮೌಲ್ಯಮಾಪನ ಮಾಡುವುದು ಕನ್ನಡದ

ಸಂದರ್ಭದಲ್ಲಿ ಹೇಗಿದೆ ? ಕನ್ನಡದ ನೋಡುಗ ಬಹಳ ಹಿಂದಿದ್ದಾನೆಯೆ ? ಇದನ್ನು ಸುಧಾರಿಸುವುದು ಹೇಗೆ ?

**ಗಿ** : ಹಿಂದಿಯಲ್ಲಿ ಅನೇಕ ನಟರು, ಸಂಗೀತ ಗಾರರು ಇಪ್ಟಾದಿಂದ (ಇಂಡಿಯನ್ ಪೀಪಲ್ಸ್ ಥಿಯೇಟರ್ ಅಸೋಸಿಯೇಷನ್) ಬಂದವರಿದ್ದಾರೆ. ನಿರ್ದೇಶಕರು, ಟೆಕ್ನೀಷಿಯನ್‌ಗಳು, ಎನ್.ಎಸ್.ಡಿ. ಯಿಂದ, ಪುಣೆ ಫಿಲ್ಮ್ ಇನ್‌ಸ್ಟಿಟ್ಯೂಟ್‌ನಿಂದ ಬಂದಿರುತ್ತಾರೆ. ಬಂಗಾಳದಲ್ಲಿ ಅನೇಕರು ರಾಜಕೀಯ ವಾಗಿ ಕ್ರಿಯಾಶೀಲರಾಗಿರುತ್ತಾರೆ. ತೆಲುಗಿನಲ್ಲಿ ಶ್ರೀಶ್ರೀಯವರಂಥ ಮಹಾಕವಿಯಿಂದ ಸಿನಿಮಾಕ್ಕೆ ಹಾಡು ಬರೆಸುತ್ತಾರೆ. ಅವರು ಚಿತ್ರ ನಿರ್ಮಾಪಕರೂ, ಮತ್ತೊಂದು ಕಡೆ ಕ್ರಿಯಾಶೀಲ ಕಾರ್ಯಕರ್ತರೂ ಆಗಿರುತ್ತಾರೆ. ಅವರಲ್ಲಿ ಒಂದು ಬಗೆಯ ಜಾಗೃತಿ ಇರುತ್ತದೆ. ಕನ್ನಡದಲ್ಲಿ ಅದು ಸಾಧ್ಯವಾಗುತ್ತಿಲ್ಲ. ಕನ್ನಡದಲ್ಲಿ ಸಾಹಿತ್ಯವನ್ನು, ರಂಗಭೂಮಿಯನ್ನು ಈ ಪರಿಧಿಯಿಂದ ಹೊರಗಿರಿಸಲಾಗಿತ್ತು. ಸಾಹಿತ್ಯ, ರಂಗಭೂಮಿ ಪ್ರತಿಭೆಯನ್ನು ಯಾಕೆ ಸಿನಿಮಾಕ್ಕೆ ಬಳಸಿಕೊಳ್ಳಲಾಗುತ್ತಿಲ್ಲ ಎಂಬುದು ತಿಳಿಯುತ್ತಿಲ್ಲ. ಇದು ದೊಡ್ಡ ಸಮಸ್ಯೆ. ೮೦ರ ದಶಕದವರೆಗೂ ಸಿನಿಮಾ ಬಗ್ಗೆ ಆಸಕ್ತಿ ತೋರುವ ಸಾಹಿತಿಯನ್ನು ಅನುಮಾನದ ಕಣ್ಣುಗಳಿಂದಲೇ ನೋಡಲಾಗುತ್ತಿತ್ತು.

**ಹೊ** : ಇಂದಿನ ಸಾಂಸ್ಕೃತಿಕ ಲೋಕದ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನು ? ಇಂದು ಪ್ರಚಲಿತವಾಗಿರುವ ಧರ್ಮಾಂಧತೆಯ ಬಗ್ಗೆ ನಡೆಯುತ್ತಿರುವ ಚರ್ಚೆ...

**ಗಿ** : ಆಳವಾದ ಚರ್ಚೆಗೊಳಪಡುತ್ತಿಲ್ಲ. ಮೇಲು ಮೇಲಿನ ಮಟ್ಟದಲ್ಲಿ ನಡೆಯುತ್ತಿದೆ. ಒಂದೋ ಅದನ್ನು ಬೆಂಬಲಿಸುವುದು ಅಥವಾ ನಿರಾಕರಿಸುವುದು. ನನ್ನ ಇಡೀ ನಂಬಿಕೆಯನ್ನು ಅಲುಗಾಡಿಸಿತು ಅಥವಾ ನನ್ನ ನೋಡುವ ಕ್ರಮವನ್ನೇ ಬದಲಾಯಿಸಿತು ಎನ್ನುವಂಥ ಕಾದಂಬರಿಯಾಗಲಿ, ಸಿನಿಮಾ ಆಗಲಿ ನನಗೆ ಕಾಣಿಸುತ್ತಿಲ್ಲ.

**ಹೊ** : ಸೈದ್ಧಾಂತಿಕ ಪ್ರಶ್ನೆಯನ್ನು ತೆಗೆದುಕೊಂಡು ಸಮಾಜದ ಬದಲಾವಣೆಗಾಗಿ ಸಿನಿಮಾ ತಯಾರಿಸಲು ಸಾಧ್ಯವೆ ? ಹಾಗೆ ಮಾಡುವುದು ಸರಿಯೇ ?

**ಗಿ** : ನಮ್ಮಲ್ಲಿ ಅಂಥ ಚಿತ್ರಗಳನ್ನು ಯಾರೂ ತಯಾರಿಸಿಲ್ಲ. ಇದ್ದಕ್ಕಿದ್ದಂತೆ ಎಲ್ಲವನ್ನೂ ನಿರಾಕರಿಸು ವುದು, ಹಳೆಯದನ್ನು ಸಂಪೂರ್ಣ ತ್ಯಜಿಸಿ ಹೊಸ ಮಾರ್ಗ ಹಿಡಿಯುವುದು: ಸುಲಭವಾಗಿ ಪ್ರಶ್ನೆ ಮಾಡುವ ಕಡೆ ನಿಂತುಬಿಡುತ್ತಾರೆ. ಇಡೀ ವ್ಯವಸ್ಥೆಯನ್ನು ಪ್ರಶ್ನೆ ಮಾಡುವುದು ಸಿನಿಮಾದಲ್ಲಿ ಕಾಣುತ್ತಿಲ್ಲ.

**ಹೊ** : ಜಾಗತೀಕರಣದ ಪ್ರಕ್ರಿಯೆ ಸಮಾಜ ಜೀವನದ ಎಲ್ಲದರ ಮೇಲೆ ಪರಿಣಾಮ ಬೀರುತ್ತದೆ. ಟಿ.ವಿ.ಯಲ್ಲಿ ಸಹ. ಪೇ ಚಾನಲ್‌ನಿಂದ ಚಲನಚಿತ್ರಗಳ ಮೇಲಾಗುವ ಪರಿಣಾಮವೇನು ?

**ಗಿ** : ಟಿ.ವಿ.ಯ ಪೇ ಚಾನಲ್‌ಗಳು ಸಂಪೂರ್ಣ ಅಪಾಯಕಾರಿ ಎಂದು ನಾನು ಹೇಳಲಾರೆ. ಮಧ್ಯವರ್ತಿ ಇಲ್ಲದೇ, ನೇರವಾಗಿ ನೋಡುಗನನ್ನು ತಲುಪುವ ಅವಕಾಶ ಇಲ್ಲಿರುತ್ತದೆ. ಹಾಗಾಗಿ ಪ್ರಪಂಚದ ಯಾವ ಮೂಲೆಯ ಜನರೂ ತಮಗೆ ಬೇಕಾದದ್ದನ್ನು ನೋಡಬಹುದು. ಅಂದರೆ ಸಿನಿಮಾ ಥಿಯೇಟರ್ ಜಾಲ ಮೀರಿ, ನೋಡುಗನನ್ನು ತಲುಪುವ ಸಾಧ್ಯತೆಯನ್ನು ಇದು ತೋರಿಸುತ್ತದೆ. ಆದರೆ ಇಲ್ಲೂ ಒಂದು ಅಡಚಣೆ ಇದೆ. ಪೇ ಚಾನಲ್‌ನವರೇ ಆ ಚಿತ್ರ ಬಿತ್ತರಿಸದಿದ್ದರೆ ? ಪ್ರಾಯಶಃ ಈಗ ಯೋಚಿಸ ಲಾಗುತ್ತಿರುವ ಇಂಟರ್‌ನೆಟ್ ಸಿನಿಮಾ ಈ ತೊಂದರೆ ಯನ್ನು ನಿವಾರಿಸಬಹುದೇನೋ ! ಚಿತ್ರ ಮಾಡಿದ ನಿರ್ದೇಶಕ ಚಿತ್ರವನ್ನೂ ಇಂಟರ್‌ನೆಟ್‌ಗೆ ಹಾಕುತ್ತಾನೆ. ಆ ಚಿತ್ರ ನೋಡಬೇಕೆಂದಿರುವ ವೀಕ್ಷಕ ದುಡ್ಡುಕೊಟ್ಟು ಆ ಚಿತ್ರ ನೋಡುತ್ತಾನೆ. ಆಗ ಎಲ್ಲ ಮಧ್ಯವರ್ತಿಗಳ ಹಿಡಿತದಿಂದ ಚಿತ್ರ ಬಿಡುಗಡೆಯಾಗಬಹುದು.

**ಹೊ** : ಟಿ.ವಿ. ಸೀರಿಯಲ್‌ಗಳ ಬಗ್ಗೆ: ಸಿನಿಮಾಕ್ಕೆ ಅವರದೇ ಲಯ ಇದೆ ಎಂದಿರಿ. ಈ ಟಿ.ವಿ. ಸೀರಿಯಲ್‌ಗಳು ಸಹ ತಮ್ಮದೇ ಆದ ಲಯ ಸೃಷ್ಟಿ ಮಾಡುತ್ತಿವೆಯೆ ?

**ಗಿ** : ಇದರಲ್ಲಿ ಒಂದು ಅಪಾಯವೂ ಇದೆ. ಸೀರಿಯಲ್‌ಗಳಿಗೆ ಸಂಬಂಧಿಸಿದಂತೆ ಟಿ.ಆರ್.ಪಿ. ರೇಟಿಂಗ್ ಪಾತ್ರ ಹೆಚ್ಚು. ಒಂದು ಎಪಿಸೋಡ್‌ಗಾಗಿ ವೆಚ್ಚ ಮಾಡಿದ ಹಣ ಜಾಹಿರಾತುಗಳಿಂದಲೇ ಬರಬೇಕಾಗುತ್ತದೆ. ಜಾಹಿರಾತುದಾರರಿಗೆ ಟಿ.ಆರ್.ಪಿ. ರೇಟಿಂಗ್ ಮುಖ್ಯ. ಅದು ಕೆಲವೊಮ್ಮೆ ಪ್ರಸಾರ ವಾಗುವ ವೇಳೆ, ಅದರ ಹಿಂದಿನ ಕಾರ್ಯಕ್ರಮ, ಮುಂದಿನ ಕಾರ್ಯಕ್ರಮ ಈ ಎಲ್ಲವನ್ನು ಅವಲಂಬಿಸಿ ದಾಖಲಾಗುತ್ತದೆ. ಅದನ್ನು ಎಷ್ಟು ಜನ ನೋಡಿದರು ಎಂಬುದು ಮುಖ್ಯವಾಗುತ್ತದಲ್ಲದೆ, ನೋಡುಗರ ಅಭಿಪ್ರಾಯ ಗಣನೆಗೆ ಬರುವುದಿಲ್ಲ! ಒಂದು ಸೀರಿಯಲ್‌ನ ಜನಪ್ರಿಯತೆ ಇಂಥ ಜನಾಭಿಪ್ರಾಯ ಸರ್ವೇಕ್ಷಣೆಯನ್ನು ಅವಲಂಬಿಸಿರುತ್ತದೆ. ಸೀರಿಯಲ್‌ನ ಮೌಲ್ಯಕ್ಕಿಂತ ಗ್ರಾಹಕ ಸಂಸ್ಕೃತಿ ಮಹತ್ವದ್ದಾಗುತ್ತದೆ. ಟಿ.ವಿ. ಧಾರವಾಹಿಗಳಿಂದಾಗುವ ಮತ್ತೊಂದು ಅಪಾಯವೆಂದರೆ, ಒಂದು ವರ್ಗದ ಸಂಸ್ಕೃತಿಯನ್ನು ಇಡೀ ಜನತೆಯ ಮೇಲೆ ಬಲವಂತವಾಗಿ ಹೊರಿಸುವು ದಾಗಿದೆ. ಒಂದು ರೀತಿಯಲ್ಲಿ ಕನಸನ್ನು ಬಿತ್ತುವ ಪ್ರಯತ್ನ. ಜೀವನದಲ್ಲಿ ಮೌಲ್ಯ ನಗಣ್ಯವಾಗುತ್ತದೆ, ಗ್ರಾಹಕ ಮನೋಭಾವ ಹೆಚ್ಚುತ್ತದೆ.

**ಹೊ** : ಕೋಮುವಾದದ ಜ್ವಾಲೆ ಎಲ್ಲ ಕಡೆ ಹರಡುತ್ತಿದೆ. ಅದರ ವಿರುದ್ಧ ಪ್ರತಿಭಟನೆಯಲ್ಲಿ ನಿಮ್ಮಂಥ ಕಲಾವಿದರು ಭಾಗವಹಿಸುತ್ತೀರಿ. ಸಂತೋಷದ ವಿಷಯ. ಈ ಜ್ವಾಲೆಯ ವಿರುದ್ಧ ಸಿನಿಮಾ ಮೂಲಕ ಪರಿಹಾರ ಕಾಣಲು ಸಾಧ್ಯವೆ ? ಜನಾಭಿಪ್ರಾಯ ಮೂಡಿಸಲು ಸಾಧ್ಯವೆ ?



**ಗಿ** : ಒಂದು : ಸಿನಿಮಾ ಮೂಲಕ ಮಾಡುವುದು, ಮತ್ತೊಂದು : ಸಿನಿಮಾದಲ್ಲಲ್ಲದೆಯೂ ಮಾಡುವುದು. ಇತ್ತೀಚೆಗೆ ನಡೆದ ಮಾನವ ಸರಪಳಿ ಕಾರ್ಯಕ್ರಮದಲ್ಲಿ ನೀವು ಕಾಣಿಸಲಿಲ್ಲವೆಂದು ನನ್ನ ಗೆಳೆಯರೊಬ್ಬರನ್ನು ಕೇಳಿದೆ. ಅಯ್ಯೋ ನನ್ನನ್ನು ಯಾರೂ ಕರೆಯಲೇ ಇಲ್ಲ ಎಂದರು ಅವರು. ಇಂತಹ ಕಾರ್ಯಕ್ರಮಗಳಿಗೆ ಯಾರೂ ಯಾರನ್ನೂ ಕರೆಯಬೇಕಾಗಿಲ್ಲ. ಇಂಥ ಕಾರ್ಯಕ್ರಮಗಳು ಪ್ರಜ್ಞೆ-ಕ್ರಿಯೆಗಳಿಗೆ ಇಂಬು ಕೊಡುತ್ತವಾದ್ದರಿಂದ ಅವುಗಳಲ್ಲಿ ಭಾಗವಹಿಸುವುದು ಅವರ ಕರ್ತವ್ಯವಾಗಿರುತ್ತದೆ. ಇದು ಮನ್ನಣೆಯ ವಿಷಯವಲ್ಲ. ತಮ್ಮ ಕರಿಷ್ಮಕ್ಕೆ ಕುಂದುಂಟಾಗುತ್ತದೆಂದು ಕೆಲವರು ಭಾವಿಸುತ್ತಾರೆ. ತಮ್ಮ ಕರಿಷ್ಮವನ್ನು ಇಂಥ ಸಾಮಾಜಿಕ ಕಳಕಳಿಯ ವಿಷಯಕ್ಕೆ ಬಳಸಿಕೊಂಡರೆ ವೃದ್ಧಿ ಬಹುಮುಖದ್ದಾಗುತ್ತದೆ. ತತ್‌ಕ್ಷಣದ ಪರಿಣಾಮ ಇಲ್ಲ. ಆದರೆ ಪ್ರಜ್ಞಾವಲಯ ವಿಸ್ತರಿಸುತ್ತದೆ. ಇದು ನಮ್ಮ

ಕೃತಿಯಲ್ಲಿ ಬರಬೇಕಾದರೆ ಬೇರೆಯೇ ರೀತಿಯಲ್ಲಿ ಬರಬೇಕು. ನಮ್ಮ ಮನೆ, ನಮ್ಮ ಬದುಕು ಇಷ್ಟರಲ್ಲೇ ಮುಳುಗಿಹೋಗದೆ ಇಂಥ ಸಾಮಾಜಿಕ ವಿಷಯಗಳಿಗೆ ಸ್ಪಂದಿಸುವ ಮೂಲಕ ನಮ್ಮ ಕಳಕಳಿಯನ್ನು ವ್ಯಕ್ತಪಡಿಸಬಹುದು. ಸಿನಿಮಾದಲ್ಲಿ ಮಾತ್ರವಲ್ಲ; ಕಲೆ, ಸಾಹಿತ್ಯ, ಸಂಗೀತದಲ್ಲಿಯೂ ಅಂಥ ಕಳಕಳಿಯನ್ನು ವ್ಯಕ್ತಪಡಿಸಬಹುದು. ಈ ಪರಿಸ್ಥಿತಿ ಬದಲಾಗುತ್ತದೆ ಎಂದು ಆಶಿಸೋಣ.

**ಹೊ** : ಬಂಗಾಳ ಮತ್ತು ಕೇರಳ ರಾಜ್ಯಗಳಲ್ಲಿ ಫಿಲ್ಮ್ ಎಜುಕೇಷನ್ ಸೆಂಟರ್‌ಗಳಿವೆ. ಬೇರೆ ರಾಜ್ಯಗಳಲ್ಲಿ ಅವನ್ನು ತರಲು ಸಾಧ್ಯವಿಲ್ಲವೆ ?

**ಗಿ** : ಸಿನಿಮಾಕ್ಕೆ ಸಂಬಂಧಿಸಿದ ಒಂದು ಸಮಸ್ಯೆಯೆಂದರೆ, ಅದೊಂದು ಗಂಭೀರ ಮಾಧ್ಯಮ ಎಂಬುದನ್ನು ಬಹಳ ಜನರು ಅರ್ಥಮಾಡಿಕೊಂಡಿಲ್ಲ. ಸಿನಿಮಾ ಬರೀ ಹೊತ್ತು ಕಳೆಯಲು ಎಂಬ ನಂಬಿಕೆ ಬಲವಾಗಿದೆ. ನಮ್ಮ ಈ ಮನೋಭಾವ ಬದಲಾಗಬೇಕು.

ನನ್ನ ಮಗಳ ಪಠ್ಯ ಪುಸ್ತಕದಲ್ಲಿ ಸತ್ಯಜಿತ್ ರಾಯ್ ಕುರಿತ ಒಂದು ಪಾಠವಿದೆ. ಅದನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ಅಂದರೆ, ಈ ಮಾಧ್ಯಮದ ಬಗ್ಗೆ ಜಾಗೃತಿ ಉಂಟಾಗುವ ರೀತಿಯನ್ನು ಪಠ್ಯಕ್ರಮದಲ್ಲೇ ಅಳವಡಿಸಬಹುದಾಗಿದೆ. ಎಲ್ಲ ಶಾಲೆಗಳಲ್ಲೂ ಸದುದ್ದೇಶದ ಸಿನಿಮಾಗಳನ್ನು ತೋರಿಸುವ ವ್ಯವಸ್ಥೆಯಾಗಬೇಕು. ಪ್ರಾರಂಭದಲ್ಲಿ ಕೆಲವರಿಗೆ ಆಸಕ್ತಿ ಹುಟ್ಟದಿದ್ದರೂ ಕ್ರಮೇಣ ಆಸಕ್ತಿ ಹುಟ್ಟಬಹುದು. ಶಾಲಾ ಕಾಲೇಜುಗಳಲ್ಲಿ ವಾರಕ್ಕೊಮ್ಮೆ ಸಿನಿಮಾ ತೋರಿಸುವ ಜವಾಬ್ದಾರಿಯನ್ನು ಫಿಲ್ಮ್ ಸೊಸೈಟಿಯವರಿಗೆ ಒಪ್ಪಿಸಬಹುದು. ವರ್ಷಕ್ಕೆ ನಾಲ್ಕಾರು ಗಂಭೀರ ಸಿನಿಮಾ ನೋಡಿದ ವಿದ್ಯಾರ್ಥಿಗಳು ಮುಂದೆ ಅಂಥವೇ ಚಿತ್ರಗಳನ್ನು ನೋಡುವ ಅಭ್ಯಾಸ ಬೆಳೆಸಿಕೊಳ್ಳುತ್ತಾರೆ. ಅರವತ್ತರ ದಶಕದಲ್ಲಿ ಒಳ್ಳೆಯ ಸಿನಿಮಾ ನೋಡುವ ಅವಕಾಶ ಇಲ್ಲದಿದ್ದರೂ ಪುಸ್ತಕ ಓದುವ ಅಭ್ಯಾಸವಿತ್ತು. ಈಗ ಅದೂ ಸಹ ಕಡಿಮೆಯಾಗುತ್ತಿದೆ. ವಿಶ್ವವಿದ್ಯಾಲಯ ಮಟ್ಟದಲ್ಲಿ, ಶಾಲೆಗಳಲ್ಲಿ ಸಹ ಸಿನಿಮಾ ಸಂಬಂಧದ ವಿಷಯಗಳನ್ನು ಬೋಧಿಸಬಹುದು. ಭಾರತದ ಕೆಲವು ಸಾಕ್ಷ್ಯ ಚಿತ್ರಗಳಂತೂ ಅದ್ಭುತವಾಗಿವೆ. ಅಂಥವನ್ನು ನೋಡುವ ಅವಕಾಶ ಎಲ್ಲರಿಗೂ ಲಭಿಸಬೇಕು.

**ಹೊ** : ಡಾಕ್ಯುಮೆಂಟರಿಗಳ ಬಗ್ಗೆ ಸ್ವಲ್ಪ ಮಾತನಾಡೋಣ.

**ಗಿ** : ಗುಜರಾತಿನಲ್ಲಿ ಮಲ ಹೊರುವ ಪದ್ಧತಿ ಕುರಿತು ನೋಡಿದ ಒಂದು ಡಾಕ್ಯುಮೆಂಟರಿ ಚಿತ್ರ ಮನಸ್ಸನ್ನು ಕಲಕುವಂತಿದೆ. ಈ ಅಮಾನುಷ ಪದ್ಧತಿಯನ್ನು ತೊಡೆದುಹಾಕಲು ೧೯೫೬ರಿಂದಲೇ ಕಾನೂನು ಗಳಿದ್ದರೂ, ಅವು ಕಾರ್ಯರೂಪಕ್ಕೆ ಬಾರದಿರುವುದನ್ನು ದಾಖಲಿಸುತ್ತ, ನೋಡಲು ಅಸಹ್ಯವೆನಿಸುವಂಥ ಮಲ ಹೊರುವ ದೃಶ್ಯವನ್ನು ತೋರಿಸುತ್ತ, ಅದರಲ್ಲೂ ಆ ಕೆಲಸಕ್ಕೆ ಗಂಡಸರು ಹೋಗದೆ ಹೆಂಗಸರನ್ನೇ ಕಳಿಸುವುದನ್ನು ಚಿತ್ರಿಸುತ್ತ, ಒಂದು ಗಂಟೆಗೂ ಕಡಿಮೆ ಅವಧಿಯಲ್ಲಿ ಎಷ್ಟು ಪರಿಣಾಮಕಾರಿ ಚಿತ್ರ ಮಾಡಿದ್ದಾರೆಂದರೆ, ಅಯ್ಯೋ ಇದನ್ನು ನೋಡದಿರುತ್ತಿದ್ದರೆ ಇಂಥ ಒಂದು ಸಮಸ್ಯೆ ಇರುವುದೇ ತಿಳಿಯದೆ ಹೋಗುತ್ತಿತ್ತಲ್ಲ ಎಂದು ಚಡಪಡಿಸುವಂತಾಗುತ್ತದೆ. ಇಂತಹ ಸಾಕ್ಷ್ಯ ಚಿತ್ರಗಳನ್ನು ಶಾಲಾ ಕಾಲೇಜುಗಳಲ್ಲಿ ತೋರಿಸುವುದು ಹೆಚ್ಚು ಪರಿಣಾಮಕಾರಿಯಾಗಿರುತ್ತದೆ.

**ಹೊ** : ಇಂದಿನ ಸಾಮಾಜಿಕ ಸಂದರ್ಭದಲ್ಲಿ ಸಾಕ್ಷ್ಯ ಚಿತ್ರಗಳ ಪಾತ್ರವೇನು ?

**ಗಿ** : ಬಹಳ ಮಹತ್ವದ ಪಾತ್ರವಿದೆ. ಇವತ್ತು ನಮ್ಮ ಸಾಮಾಜಿಕ ಆಗು-ಹೋಗುಗಳ ಮೇಲೆ ಪರಿಣಾಮ ಬೀರುವಂತಹ ಅನೇಕ ಸಾಕ್ಷ್ಯ ಚಿತ್ರಗಳು ಘಟನೆ ನಡೆದ ಬಿಸಿಯಲ್ಲೇ ತಯಾರಾಗುತ್ತಿವೆ. ಅನೇಕ ಚಿತ್ರಗಳು ಘಟನೆ ಕುರಿತಂತೆ ಸರ್ಕಾರ ನೀಡುವ ವಿವರಣೆಗಿಂತ ಭಿನ್ನವಾಗಿರುತ್ತವೆ. ಮತ್ತೊಂದು ಮಗ್ಗುಲನ್ನು ತೋರಿಸುತ್ತಿರುತ್ತವೆ. ಇವತ್ತಿನ ಬಗ್ಗೆ ಹೊಸ ನೋಟವನ್ನು ಕೊಡುವಲ್ಲಿ ಈ ಚಿತ್ರಗಳು ತುಂಬ ಪರಿಣಾಮಕಾರಿ.

**ಹೊ** : ಈಗ ನೀವು ಟಿ.ವಿ. ಸೀರಿಯಲ್‌ಗೆ ಹೊರಡುತ್ತಿದ್ದೀರಿ...

**ಗಿ** : ಇಷ್ಟು ವರ್ಷ ಆ ಆಮಿಷ ತಡೆದಿದ್ದೆ. 'ಗೃಹಭಂಗ' ನಿರ್ದೇಶಿಸಲು ಕರೆ ಬಂತು. ಅದು ಭೈರಪ್ಪನವರ ಕಾದಂಬರಿ. ವಾರಕ್ಕೊಂದು ಎಪಿಸೋಡ್. ಪ್ರತಿದಿನದ ಎಪಿಸೋಡ್‌ನಷ್ಟು ಒತ್ತಡವಿರುವುದಿಲ್ಲ. ವಾರದ ಕೊನೆಯಲ್ಲಿ ಪ್ರಸಾರವಾಗುವುದರಿಂದ ನೋಡುಗರು ತಪ್ಪಿಸಿಕೊಳ್ಳಲು ಅವಕಾಶವಿರುವುದಿಲ್ಲ.

**ಹೊ** : ಗಿರೀಶ್, ಇನ್ನು, ಈಗ ನೀವು ನಿರ್ದೇಶಿಸುತ್ತಿರುವ 'ದ್ವೀಪ'ದ ಬಗ್ಗೆ ಒಂದೆರಡು ಮಾತು...

**ಗಿ** : ನಾ. ಡಿಸೋಜರವರ ಕಾದಂಬರಿ ಆಧರಿಸಿದ 'ದ್ವೀಪ' ನನ್ನ ಚಿತ್ರಗಳಲ್ಲೇ ವಿಶಿಷ್ಟವಾದದ್ದು. ಕೇವಲ ನಾಲ್ಕೇ ಪಾತ್ರಗಳು - ಜೊತೆಗೆ ಐದನೆಯ ಪಾತ್ರವಾಗಿ ಮಳೆ. ಕನ್ನಡ ಚಿತ್ರಗಳಲ್ಲಿ ಮಳೆ ಹಿನ್ನೆಲೆಯಾಗಿ ಅನೇಕ ಚಿತ್ರಗಳಲ್ಲಿ ಬಂದಿತ್ತು. ಮುನ್ನೆಲೆಯಲ್ಲಿ ಪ್ರಧಾನ ಪಾತ್ರವಾಗಿ ಬಂದಿದ್ದೂ ಇಲ್ಲವೆನ್ನುವಷ್ಟು ಅಪರೂಪ. ಈ ಚಿತ್ರದಲ್ಲಿನ ನಾಲ್ಕು ಪಾತ್ರಗಳು ವಿಭಿನ್ನ ಜೀವನ ಧರ್ಮವನ್ನು ಹೊಂದಿವೆ. ಮಳೆಯ ಆರ್ಭಟ ಅವರವರ ನಂಬಿಕೆಯನ್ನು ನಿಕಷಕ್ಕೆ ಒಡ್ಡುತ್ತದೆ. ಈ ನಿಕಷದಲ್ಲಿ ಗೆಲ್ಲುವುದು 'ನಾಗಿ' ಮಾತ್ರ. ಹಾಗಾಗಿ ಮಳೆಗಾಗಿ ಕಾದು ಮಾಡಿದ ಚಿತ್ರ. ಮಳೆ ಸಂಭ್ರಮ ತರುವ, ಬೆರಗು ಹುಟ್ಟಿಸುವ, ಬೇಸರ ಬರಿಸುವ, ಭೀತಿ ಹುಟ್ಟಿಸುವ, ಅದೇ ವೇಳೆ ಅನುಭವಕ್ಕಾಗಿ ಕಾತರಿಸುವಂತೆ ಮಾಡುವ ವಿದ್ಯಮಾನವಾಗಿ ಚಿಕ್ಕಂದಿನಿಂದಲೂ ನನ್ನ ಮನಸ್ಸಿನಲ್ಲಿ ಹುದುಗಿರುವ ವಸ್ತು. ಹೊಸ ರೀತಿಯ ಚಿತ್ರ. ಇಲ್ಲಿ ಪ್ರಕೃತಿ ಹಿನ್ನೆಲೆಯಲ್ಲಿಲ್ಲ, ಅದೇ ಮುನ್ನೆಲೆ.

**ಹೊ** : ಇಷ್ಟು ಸಮಯ ಕೊಟ್ಟಿದ್ದೀರಿ, ವಂದನೆಗಳು. ನಿಮ್ಮ ಯಶಸ್ಸು ಹಾಗೂ ಕೊಡುಗೆ ಹೀಗೆ ಮೌಲಿಕವಾಗಿ ವರ್ಧಿಸುತ್ತಿರಲೆಂದು ಆಶಿಸುತ್ತೇವೆ.

□□

## ದೀಪಾವಳಿ

ಪಣತಿ ಬೆಳಗಿದ್ದೇವೆ
ಪ್ರಳಯದ ಆಸು-ಪಾಸಿನಲಿ ನಿಂತು
ಈ ಪರೀಕ್ಷೆಯಲಿ ಪಾಸಾಗುವುದೆಂತು!
ಎಚ್ಚರ ಬಲು ಎಚ್ಚರ
ಪಕ್ಕವಿಲ್ಲದ ನರತಂತು
ಇರಲಿ ಜ್ಯೋತಿ ಇರುವನಕ ಮತಿ
ನೀಡುವುದು ಕತ್ತಲದಾರಿಗೆ ಬೆಳಕ
ಬೆಳಗಲಿ ಜ್ಯೋತಿ
ಒಡಲಿಗನ್ನ ಬೇಯಿಸಲಿ
ಹಡೆದೊಡಲಿಗೆ ಕಿಚ್ಚನಿಡದಿರಲಿ
ಇಂದು ಬೆಳಗಿದ ಜ್ಯೋತಿ
ಬಾಳಲಿ ಬಹುಕಾಲ
ಬೆಳಗಲಿ
ಕನ್ನಡ ನೆಲದ ತುಂಬ

- ಬಿ. ಆರ್. ಪೊಲೀಸ್ ಪಾಟೀಲ
'ವಾತ್ಸಲ್ಯ', ಬನಹಟ್ಟಿ.



**ಚೇ**ರ್ಕಳ ಕಾಸರಗೋಡಿನಿಂದ ಕಣ್ಣೂರಿಗೆ ತೆರಳುವ ರಾಷ್ಟ್ರೀಯ ಹೆದ್ದಾರಿಯಲ್ಲಿ ಸಿಗುವ ಒಂದು ಹಳ್ಳಿ. ಎಲ್ಲ ಕಡೆಯಂತೆ ಕರ್ನಾಟಕದ ವಿವಿಧ ಭಾಗಗಳಿಂದ ಕೆಲಸಕ್ಕೆ ಬಂದ ಕೆಲ ಕನ್ನಡಿಗರು ಇಲ್ಲಿದ್ದಾರೆ.

ಇಲ್ಲಿ ಹಾಜಿ ಅಬ್ದುಲ್ಲಾರ ಬಳಿ ಇರುವ ಕೆಲಸಗಾರರೆಂದರೆ ಮಡಿಕೇರಿಯ ವಾಸು, ಹಾವೇರಿಯ ಮಲ್ಲಣ್ಣ. ಹತ್ತಾರು ವರ್ಷಗಳಿಂದ ಇಲ್ಲಿಯೇ ದುಡಿದವರು. ಮಲಯಾಳಿ ಮಾತನಾಡಬಲ್ಲರು. ರಾಮಣ್ಣ ಮತ್ತು ಹನುಮಂತ ಕುಷ್ಟಗಿಯ ಬಳಿಯ ಹಳ್ಳಿಯಿಂದ ನಾಲ್ಕೈದು ತಿಂಗಳ ಕೆಳಗೆ ಇಲ್ಲಿ ಬಂದವರು. ಪ್ರಕಾಶ, ಮಂಜು ಮತ್ತು ಕರಿಯ ನಮ್ಮೂರಿನವರು. ಒಂದೆರಡು ತಿಂಗಳಿನಿಂದ ಇಲ್ಲಿದ್ದಾರೆ. ಹುಬ್ಬಳ್ಳಿ ಮಂಜು, ಅಣ್ಣ ಅತ್ತಿಗೆಯ ಕಾಟ ತಾಳಲಾರದೆ, ಸ್ವತಂತ್ರವಾಗಿ ಬದುಕು ಸಾಗಿಸುವ ಛಲ ತೊಟ್ಟು ಬಂದವ.

ಇವರೆಲ್ಲ ಮಲೆಯಾಳಿ ಭಾಷೆ ಪರಿಸರದಲ್ಲಿ ಕನ್ನಡದ ಕುಟುಂಬ ಸದಸ್ಯರಂತೆ ಜೀವಿಸುತಿದ್ದವರು. ಎಲ್ಲರೂ, ಎಲ್ಲರಲ್ಲಿ, ಎಲ್ಲ ಸಮಯದಲ್ಲೂ ನಂಬಿಕೆ ಇಟ್ಟವರು. ಕೌಟುಂಬಿಕ ಜೀವನದ ಪ್ರೀತಿ ಕಾಣದ ಬಾಲಕಾರ್ಮಿಕತೆಯಲ್ಲೇ ಬೆಳೆದ ಇವರೆಲ್ಲ ಇಲ್ಲಿ ಒಂದೇ ಕುಟುಂಬದವರಾಗಿದ್ದವರು.

ಹೀಗಿದ್ದಾಗ ಒಂದು ದಿನ ಹನುಮಂತನ ಪೆಟ್ಟಿಗೆಯಿಂದ ೨೦೦೦ ರೂ. ಕಳುವಾಯಿತು. ವಿಚಾರಣೆ ಮುಗಿಯಿತು. ಯಾರು ತಾನೇ ಒಪ್ಪಿಯಾರು? ಇಲ್ಲಿಗೆ ಹತ್ತಿರದಲ್ಲಿರುವ ಕಾಣತ್ತೂರಿನಲ್ಲಿ ದೇವಾಲಯವೊಂದಿದೆ. ಹಣ ಇತ್ಯಾದಿ ವಸ್ತುಗಳನ್ನು ಕಳೆದುಕೊಂಡವರು ಇಲ್ಲಿ ಹರಕೆ ಹೊತ್ತರೆ ಮರಳಿ ಸಿಗುವ ಪ್ರತೀತಿ ಇಲ್ಲಿದೆ. ವಾಸು ಹನುಮಂತನನ್ನು ಕಾಣತ್ತೂರಿಗೆ ಕರೆದುಕೊಂಡು ಹೋಗಿ ಬಂದ. ವಾಸು ಮಾತ್ರ ಪೂಜಾರಿಯೊಂದಿಗೆ ಕ್ಷಣಕಾಲ ಮಾತನಾಡಿದ್ದ, ಆದರೆ ಮಲೆಯಾಳಿ ಬಾರದ ಹನುಮಂತ ಇಲ್ಲಿ ಮೂಕ ಪ್ರೇಕ್ಷಕ.

ಮಂಗಳವಾರ ರಾತ್ರಿ, ಹೊಸದಾಗಿ ಆಗಮಿಸಿದ ಮಂಜು ಹನುಮಂತನ ಬಳಿ ಇರುವ

# ದೇವರ ಹೆಸರಿನಲ್ಲಿ



ಕೀಲಿ ಕೈ ಅಪಹರಿಸಿ ಹಣ ತೆಗೆದುಕೊಂಡಿರುವುದಾಗಿ ಪೂಜಾರಿ ಹೇಳಿದನೆಂದು ಒಕ್ಕೊರಲಿನಿಂದ ನುಡಿದರು. ಮಂಜು ಒಪ್ಪಲಿಲ್ಲ. ಒಡೆಯನ ಮಕ್ಕಳು ಈತನನ್ನು ತಲೆಕೆಳಗೆ ಮಾಡಿ ಕಟ್ಟಿ ಬಡಿಯುವಾಗ ಬಡ ಜೀವ ಒಪ್ಪಿತು. ೨೦೦೦ ರೂ. ಹಣ ಮುಟ್ಟುವವರೆಗೂ ಎಲ್ಲ ಟೀಕೆಗಳನ್ನು ಹಣೆಬರೆಹವೆಂದು ಸ್ವೀಕರಿಸಿ ದುಡಿದ. ನಂತರ ಇಲ್ಲಿಂದ ಮತ್ತೆಲ್ಲಿಗೋ ಕೆಲಸ ಕೊಡುವ ದೊರೆಯನ್ನರಸಿ ಹೊರಟುಹೋದ.

ಕಾಸರಗೋಡು ಕನ್ನಡಿಗರ ಕುರಿತು, ಗಡಿನಾಡ ಕನ್ನಡಿಗರ ಸಾಹಿತ್ಯಿಕ, ಸಾಂಸ್ಕೃತಿಕ ಚಟುವಟಿಕೆ ತಿಳಿಯುವ ಹಂಬಲದಿಂದ ನಾನೂ ಇಲ್ಲಿಯೇ ಕರಿಯನ ಕೋಣೆಯಲ್ಲಿಯೇ ತಂಗಿದ್ದೆ. ೧೯೯೭ರ ಜನವರಿಯಲ್ಲಿ ಪ್ರಕಾಶ ಹಾಗೂ ಕರಿಯನೊಂದಿಗೆ ಧರ್ಮಸ್ಥಳಕ್ಕೆ ತೆರಳಿ ಸಂಕ್ರಾಂತಿ ಆಚರಿಸಿಕೊಂಡು ಒಂದೆರಡು ದಿನಗಳಲ್ಲಿ ಮರಳಿದಾಗ ಮಲ್ಲಣ್ಣನ ೬೦೦೦ ರೂ. ನಾವು ಧರ್ಮಸ್ಥಳಕ್ಕೆ ಹೋದ ದಿನವೇ ಕಳ್ಳತನವಾಗಿದೆ ಎಂಬ ಸುದ್ದಿ ಹರಡಿತ್ತು. ಇದನ್ನು ತಿಳಿದ ನಮ್ಮ ಮುಖ ಬಾಡಿದವು. ಬತ್ತಿದ ಬಾವಿಯಂತಾದ ಬಾಯಿಯಿಂದ ಮಾತೇ ಹೊರಡಲಿಲ್ಲ.

ಮಾಲಿಕ ಹಣವನ್ನು ತೆಗೆದುಕೊಂಡವರು ನೀವೇ ಎಂದು ಖಡಾಖಂಡಿತವಾಗಿ ಹೇಳಿಬಿಟ್ಟರು. ಇಲ್ಲದಿದ್ದರೆ ಕುದಿಯುವ ಎಣ್ಣೆಯಲ್ಲಿ ಹಾಕಿದ ನಾಣ್ಯ ತೆಗೆಯಬೇಕು ಎಂದು ಪಟ್ಟು ಹಿಡಿದರು. ಆಗ ನಾನು ಮೊದಲು ಹಣ ಕಳೆದುಕೊಂಡವರು ನಾಣ್ಯ ತೆಗೆಯಲಿ, ಹಣ ಕಳೆದಿದ್ದು ಸತ್ಯವಾದ ಮೇಲೆ, ನಾವು ನೀವ್ಹೇಳಿದಂತೆ ಮಾಡುತ್ತೇವೆ ಎಂದು ಪಟ್ಟು ಹಿಡಿದೆವು. ಕಾಣತ್ತೂರಿಗೆ ಹೋಗಿ ಸತ್ಯ ತಿಳಿದು ಬರುತ್ತೇವೆ ನಂತರ ನಿಮ್ಮ ಕೈ-ಕಾಲು ಕತ್ತರಿಸುತ್ತೇವೆ ಎಂದು ನುಡಿದು, ನಮ್ಮನ್ನು ಹೊರಗೆ ಕಳುಹಿಸಿಕೊಟ್ಟರು.

ತಕ್ಷಣವೇ ನಾನು ಕರಿಯ ಮತ್ತು ಪ್ರಕಾಶನನ್ನು ಕರೆದುಕೊಂಡು ಕಾಣತ್ತೂರಿಗೆ ತೆರಳಿದೆ. ನಮ್ಮ ಹಣ ಕಳದಿದೆ. ಅದನ್ನು ಯಾರು, ಯಾವಾಗ ತೆಗೆದುಕೊಂಡಿರುವುದಾಗಿ ತಿಳಿಸಬೇಕೆಂದು ಅರೆ-ಬರೆ ಮಲಯಾಳಿಯನ್ನು ಮೂಕಾಭಿನಯದೊಂದಿಗೆ ಬೆರೆಸಿ ಕೇಳಿದೆವು. ಅಲ್ಲಿಯ ಅರ್ಚಕರು ಅದನ್ನೆಲ್ಲಾ ಹೇಳುವುದು ಸಾಧ್ಯವಿಲ್ಲ. ಹಾಗೇನಾದರೂ ನಿಖರವಾಗಿ ಹೇಳಿದ್ದರೆ ಈ ಜಗತ್ತಿನಲ್ಲಿ ಸಿ. ಆಯ್.ಡಿ.ಗಳ ಅವಶ್ಯಕತೆ ಇತ್ತೇ? ಎಂದು ನಮ್ಮನ್ನೇ ಪ್ರಶ್ನಿಸಿದರು. ಮಂಜುನ ಘಟನೆಯನ್ನೇ ನೆನಪಿಸಿದಾಗ ಇದೆಲ್ಲಾ ಸುಳ್ಳು, ಕಳ್ಳನೇ ಈ ರೀತಿ ನಾಟಕವಾಡಿರಬೇಕು ಎಂದು ತಿಳಿಸಿದರು.

ಮನೆಗೆ ಮರಳಿ, ಕಾಣತ್ತೂರಿನಲ್ಲಿ ನಡೆದ ಘಟನೆಯನ್ನು ಒಡೆಯನೆದುರು ಬಿಚ್ಚಿಟ್ಟದ್ದಾಯ್ತು. ಹಣ ಕಳೆದಿದೆ ಎಂದು ಸುಳ್ಳು ಹೇಳಿದ್ದೇ ಆದರೆ ಪೋಲಿಸ್ ಕಂಪ್ಲೆಂಟ್ ಕೊಡುವುದಾಗಿಯೂ, ಈ ಮಂಜುನಿಂದ ವಸೂಲಿ ಮಾಡಿದ ೨೦೦೦ ರೂ.ಗಳನ್ನು ನಿಮ್ಮಿಂದ ವಸೂಲಿ ಮಾಡುತ್ತೇವೆ ಎಂದಾಗ ಶರಧಿಗೆ ಬಾಯೊಡ್ಡಿದ ನಾಯಿಯಂತೆ ಪಿಸುಗುಟ್ಟದೆ ತೆಪ್ಪಗಾದರು. ಆಗ ನಾವು ನೆಮ್ಮದಿಯ ನಿಟ್ಟುಸಿರುಬಿಟ್ಟೆದ್ದವು.

ಈ ಸತ್ಯ ತಿಳಿಯುವ ವೇಳೆ ಮಂಜು ಇನ್ನೆಲ್ಲೋ ಏನು ಮಾಡುತ್ತಿದ್ದನೋ, ಒಟ್ಟಾರೆ ದೇವರ ಹೆಸರಿನಲ್ಲಿ ಅಪರಾಧಿಯಾಗಿದ್ದ. ನಮ್ಮ ಅನುಕಂಪ, ಆತನಿಗಾಗಿ ಮಿಡಿದ ಕಣ್ಣೀರು ಮಾತ್ರ ಆತನಿಗೆ ಕಾಣಲೇ ಇಲ್ಲ.

ರವಿ. ಸೋ. ದೇವರಡ್ಡಿ
ಹೊನ್ನಹಮ್ಮಿಗಿ, ತಾ॥ ಮುಂಡರಗಿ, ಜಿ॥ ಗದಗ - ೫೮೨೧೧೮

# ಈ ಮಕ್ಕಳಿಗೆ ಬಾಲ್ಯ - ಕನಸು ದಕ್ಕುವುದು ಯಾವಾಗ ?



**ಜೂ**ನ್ ಬಂದಿದೆ. ಕಾರ್ಮಿಕರೊಂದಿಗೆ ಬಾಲ ಕಾರ್ಮಿಕರ ಸಮಸ್ಯೆಯೂ, ಈಗ ಸಣ್ಣದಾಗಿ ಪ್ರಸ್ತಾಪವಾಗಿ ಹಾಗೇ ಗಾಳಿಗೆ ಹೋಗುತ್ತೆ. ಒಂದು ರಾಷ್ಟ್ರದ ಸಂಪತ್ತೆಂದರೆ ಮಕ್ಕಳು ಅಂತ ನವೆಂಬರ್ ೧೪ ರಂದು ಭಾಷಣ ಬಿಗಿಯುತ್ತಾರೆ ನಮ್ಮನ್ನಾಳುವವರು. ಆಮೇಲೆ ■ ಮಾತು ಅವರಿಗೆ ಮರೆತುಹೋಗುತ್ತೆ. ಬಾಲಕಾರ್ಮಿಕತೆಯು, ದೇಶದ ಅಭಿವೃದ್ಧಿಗೆ ಮಾರಕವಾಗಿರುವುದರಿಂದ ಇವತ್ತು ಭಾರತ ೧೦೧ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ೮೯ನೇ ಸ್ಥಾನ ಪಡೆದಿದೆ.

ನಮ್ಮ ನಂಬಿಕೆ ಪ್ರಕಾರ ಮಕ್ಕಳು ದೇವರು. ಮಕ್ಕಳ ಕೈಯಲ್ಲಿದೆ ದೇಶದ ಭವಿಷ್ಯ. ಅವರೇ ರಾಷ್ಟ್ರದ ಸಂಪತ್ತು. ಆದರೆ ಈ ದೇಶದ ಶೈಕ್ಷಣಿಕ ಚಿತ್ರಣದತ್ತ ಕಣ್ಣು ಹಾಯಿಸುವ ಪ್ರಯತ್ನ ಯಾರೂ ಮಾಡುತ್ತಿಲ್ಲ. ಜಗತ್ತಿನಲ್ಲೇ ಹೆಚ್ಚು ಪಧವೀಧರರನ್ನು ಸೃಷ್ಟಿಸುವ ■ ದೇಶದ ಅರ್ಧದಷ್ಟು ಜನರಿಗೆ ಸರಿಯಾಗಿ ಮೂಲಾಕ್ಷರ ಗೊತ್ತಿಲ್ಲ. ಇತ್ತ ಶಾಲೆಯ ಮುಖವನ್ನೇ ನೋಡದ ಕೋಟಿಗಟ್ಟಲೆ ಮಕ್ಕಳು ಹೋಟೇಲ್, ಕಾರ್ಖಾನೆ, ಅಂಗಡಿ, ಗ್ಯಾರೇಜ್ ಎಲ್ಲ ಕಡೆ ಬೆಳಗಿನಿಂದ ರಾತ್ರಿಯವರೆಗೆ ಅವಿರತವಾಗಿ ದುಡಿಯುತ್ತಿವೆ. ಬಾಲ್ಯ ಮನುಷ್ಯನಿಗೆ ಒಂದು ಅಮೂಲ್ಯ ವರದಾನ. ■ ಅವಸ್ಥೆಯಲ್ಲೇ ಬದುಕಿನ ಬಗೆಗಿನ ಕನಸುಗಳು ಚಿಗುರುವುದು. ಇಂಥ ವಯಸ್ಸಿನಲ್ಲಿ ಚಿಗುರು ಕನಸುಗಳನ್ನು ಹೊಸಕಿಬಿಟ್ಟರೆ ಬದುಕು ?

ಆಟವಾಡುತ್ತ ಬಾಲ್ಯ ಕಳೆಯಬೇಕಾದ ಮಕ್ಕಳು ಕೆಲಸಕ್ಕೆ ಹೋಗಿ ತಮ್ಮ ಭಾವನೆ, ಕನಸು ಚಿವುಟಿಹಾಕುತ್ತಿದ್ದಾರೆ. ಕಾರಣ ■ ದೇಶದಲ್ಲಿರುವ ಸಡಿಲ ಕಾನೂನು, ಅಜ್ಞಾನಿ ತಂದೆ-ತಾಯಿಗಳು.

ಇವತ್ತು ವಿಶ್ವದ ಬಾಲಕಾರ್ಮಿಕರಲ್ಲಿ ಕಾಲು ಭಾಗದಷ್ಟು ಭಾರತದಲ್ಲಿದ್ದಾರೆ. ಅಂದರೆ ಇಲ್ಲಿಯ ೧೦೨ ಕೋಟಿಯಲ್ಲಿ ೧೨ ಕೋಟಿ ಮಕ್ಕಳು ಬಾಲಕಾರ್ಮಿಕರು. ದೇಶದಲ್ಲಿ ಹೆಚ್ಚುತ್ತಿರುವ ಜನಸಂಖ್ಯೆ ವೇಗದಲ್ಲಿ ಬಾಲಕಾರ್ಮಿಕರ ಸಮಸ್ಯೆಯು, ಅದೇ ವೇಗದಲ್ಲಿ ಬೆಳೆಯುತ್ತಿದೆ. ಭಾರತದ ಹೆಗ್ಗಳಿಕೆಯೆಂದರೆ ವಿಶ್ವದಲ್ಲೇ ಮಕ್ಕಳ ದಿನಾಚರಣೆ ಆಚರಿಸುವ ■ ಒಂದು ದೇಶದಲ್ಲಿ ವಿಶ್ವದ ಅತಿ ಹೆಚ್ಚು ಬಾಲಕಾರ್ಮಿಕರಿದ್ದಾರೆ.

ದೇಶದ ೬ ರಿಂದ ೧೪ ವರ್ಷದೊಳಗಿನ ಎಲ್ಲ ಮಕ್ಕಳಿಗೆ ಕಡ್ಡಾಯ ಉಚಿತ ಶಿಕ್ಷಣ ಎಂದು ಸಂವಿಧಾನ ಹೇಳಿದ್ದರೂ ಇಂದಿಗೂ ಎಲ್ಲ ಮಕ್ಕಳು ಶಾಲೆಗೆ ಹೋಗುತ್ತಿಲ್ಲ. ಬಾಲ ಕಾರ್ಮಿಕತೆ ಹೆಚ್ಚಳವೇ ಇದಕ್ಕೆ ಕಾರಣ. ಮಕ್ಕಳನ್ನು ಶಾಲೆಯತ್ತ ಸೆಳೆಯಲು ಅನೇಕ ಯೋಜನೆಗಳನ್ನು ಸರ್ಕಾರ ಜಾರಿಗೆ ತಂದರೂ ಅದರ ಯಶಸ್ಸಿಗೆ ಹೆಚ್ಚು ಗಮನ ಕೊಡಲಿಲ್ಲ ಸರ್ಕಾರ. ಇದೂ ಕೂಡ ಬಾಲಕಾರ್ಮಿಕತೆ ಹೆಚ್ಚಾಗಲು ಕಾರಣ.

ಶಾಲೆಯ ಬಾಗಿಲು ತುಳಿಯದ ೧೨ ಕೋಟಿ ಮಕ್ಕಳ ಸಮಸ್ಯೆಗಳು ಅಷ್ಟೇ ಗಂಭೀರವಾಗಿವೆ. ಇವರು ಕೆಲಸ ಮಾಡುವ ಕಡೆ ಇವರಿಗೆ ಸರಿಯಾದ ಭದ್ರತೆ ಇಲ್ಲ. ಮಾನಸಿಕ ಬೆಳವಣಿಗೆ ಕುಂಠಿತ. ಜೊತೆಗೆ ಬಾಲ್ಯದಲ್ಲಿಯೇ ಮನೆಯ ಹೊರಗಿರುವುದರಿಂದ ತಂದೆ-ತಾಯಿಗಳ ಬಾಂಧವ್ಯದಿಂದ ದೂರಾಗಿ ಅಶಕ್ತ ಮನಸ್ಸಿನವರಾಗಿ ಯಾವುದೋ ಗಳಿಗೆಯಲ್ಲಿ ಕ್ರಿಮಿನಲ್‌ಗಳೆನಿಸುವುದು ನಿಶ್ಚಿತ.

ನಮ್ಮ ದೇಶದಲ್ಲಿರುವ ಎಲ್ಲ ತಪ್ಪುಗಳ ಮಧ್ಯೆ ಬಡತನವೂ ಈ ಸಮಸ್ಯೆಯ ಮೂಲಕ್ಕೆ ಕಾರಣ. ತಂದೆ-ತಾಯಿಗಳು ಮಕ್ಕಳನ್ನು ಕೆಲಸಕ್ಕೆ ಕಳಿಸುವುದು ಹಾಗೂ ಮಕ್ಕಳನ್ನು ಕೆಲಸಕ್ಕೆ ತೆಗೆದುಕೊಂಡರೆ ಹೆಚ್ಚು ಕೆಲಸ ಮಾಡಿಸಿಕೊಂಡು ಕಮ್ಮಿ ಕೂಲಿ ಕೊಡಬಹುದು ಎಂಬ ಮಾಲೀಕರ ದುರಾಲೋಚನೆಯೂ ಇದಕ್ಕೆ ಕಾರಣ. ಅದಕ್ಕೇ ಹೇಳುವುದು ಬಡತನ ಮತ್ತು ಅನಕ್ಷರತೆ ಒಂದೇ ನಾಣ್ಯದ ಎರಡು ಮುಖಗಳು ಅಂತ. ಹೀಗಾಗಿ ಈ ದೇಶದಲ್ಲಿ ಶಾಲೆ ಬಿಡುವ, ಶಾಲೆಗೆ ಹೋಗದ ಮಕ್ಕಳ ಪ್ರಮಾಣ ಶೇ ೬೦.

ನಮ್ಮ ದೇಶದ ೧೦೨ ಕೋಟಿಯಲ್ಲಿ ೧೪ ವರ್ಷದೊಳಗಿನ ಮಕ್ಕಳ ಸಂಖ್ಯೆ ೪೦ ಕೋಟಿ. ಅವರಲ್ಲಿ ಶೇ. ೧೬ ರಷ್ಟು ಮಕ್ಕಳು ಬಾಲಕಾರ್ಮಿಕರು. ಇವರೆಲ್ಲ ಇಂದು ಅಪಾಯಕಾರಿಯಾದ ಬೀಡಿ, ಸಿಗರೇಟ್, ಪಟಾಕಿ ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಬಡತನ ನಿವಾರಣೆಗಾಗಿ ಮಕ್ಕಳನ್ನು ಕೆಲಸಕ್ಕೆ ಕಳಿಸುತ್ತಿದ್ದೇವೆಂದು ತಂದೆ-ತಾಯಿಗಳು ಹೇಳುತ್ತಾರೆ, ಆದರೆ ಕೆಲಸಕ್ಕೆ ಹೋಗುವ ಮಕ್ಕಳಿಗೆ ಕಡಿಮೆ ಕೂಲಿ ಸಿಗುವುದು ■ ಕುಟುಂಬಕ್ಕೆ ಅಂದಿನ ಹೊಟ್ಟೆ ಹೊರೆಯುವುದು ಬಿಟ್ಟರೆ ಖಾಯಂ ಆಗಿ ಬಡತನ ತುಂಬಿರುತ್ತದೆ. ಇದು ಆ ತಂದೆ-ತಾಯಿಗಳಿಗೆ ಗೊತ್ತಿಲ್ಲ.

೧೪ ವರ್ಷದೊಳಗಿನ ಮಕ್ಕಳನ್ನು ಕೆಲಸಕ್ಕೆ ತೆಗೆದುಕೊಳ್ಳದಂತೆ ಕಾನೂನುಗಳಿವೆ. ಆದರೆ ಅವುಗಳ ಜಾರಿ ಪೂರ್ತಿ ವಿಫಲವಾಗಿದೆ. ಜೊತೆಗೆ ೧೪ ವರ್ಷದೊಳಗಿನ ಮಕ್ಕಳನ್ನು ಕೆಲಸಕ್ಕೆ ಕಳಿಸುವವರನ್ನು ಶಿಕ್ಷಿಸುವ ಕಾನೂನು ಬರಬೇಕು ಹಾಗೂ ಬಡತನದಿಂದ ನರಳುವ ಕುಟುಂಬಗಳ ಆದಾಯದ ಹೆಚ್ಚಳಕ್ಕೆ ಕಾರ್ಯಯೋಜನೆ ರೂಪಿಸಬೇಕು. ಅವರ ಮಕ್ಕಳಿಗೆ ಉಚಿತ ಶಿಕ್ಷಣ ನೀಡುವ ಹೊಸ ಯೋಜನೆ ಜಾರಿಗೆ ಬರಬೇಕು.

ಜೊತೆಗೆ ಅವಶ್ಯವಾಗಿ ಆಗಬೇಕಿರುವುದು ಬಾಲಕಾರ್ಮಿಕತೆ ಹೋಗಲಾಡಿಸಲು ಇದರ ಕಾರಣಗಳ ಬಗ್ಗೆ ಸಾರ್ವಜನಿಕರೊಂದಿಗೆ ಸೇರಿ ಜನ ಜಾಗೃತಿ ಮೂಡಿಸಬೇಕು. ಕಾನೂನುಗಳು ಬಿಗಿಯಾಗಬೇಕು. ದೇಶದ ಎಲ್ಲ ತಂದೆ-ತಾಯಿಗಳಿಗೆ ಮಕ್ಕಳ ಬಾಲ್ಯದ ಮಹತ್ವ ತಿಳಿಹೇಳುವ ಕೆಲಸ ಆಗಬೇಕು.

ಜೊತೆಗೆ, ಬಾಲಕಾರ್ಮಿಕರ ಸಮಸ್ಯೆ ನಿವಾರಣೆಯಾಗುವವರೆಗೆ ನಂವೆಂಬರ್ ೧೪ ನ್ನು ಜವಹರಲಾಲ ನೆಹರು ದಿನಾಚರಣೆ ಎಂದು ಆಚರಿಸಬೇಕು, ಮಕ್ಕಳ ದಿನಾಚರಣೆ ಎಂದಲ್ಲ. ಇಲ್ಲದಿದ್ದರೆ ದೇಶದ ಶಾಲೆಗಳಿಗೆ ಹೋಗುವ ಕೆಲವೇ ಮಕ್ಕಳಿಗಾಗಿ ಈ ದಿನಾಚರಣೆ ಮಾಡಿದಂತಾಗುತ್ತದೆ. ಹಾಗೂ ಉಳಿದ ಕೆಲಸಕ್ಕೆ ಹೋಗುವ ಮಕ್ಕಳನ್ನು ಕಡೆಗಣಿಸಿಬಿಟ್ಟಂತಾಗುತ್ತದೆ. ಅದಕ್ಕೆ ದೇಶದ ಎಲ್ಲ ಮಕ್ಕಳು ಶಾಲೆಗೆ ಬಂದ ದಿನವೇ ಮಕ್ಕಳ ದಿನಾಚರಣೆ ಆಚರಿಸುವಂತಾಗಬೇಕು.

**ಹುಸೇನ್ ಪಾಶಾ**
ದಿ ಫ್ರ್ಯಾಂಚ್ ಎಕ್ಸ್‌ಪ್ರೆಸ್ ಕೊರಿಯರ್, ಹುಣಸೆಗಿಡದ ಹತ್ತಿರ, ಜವಾಹರ ರಸ್ತೆ, ಕೊಪ್ಪಳ-೫೮೩೨೩೧

# ಬದಲಾಗುತ್ತಿರುವ ಸನ್ನಿವೇಶದಲ್ಲಿ ಸಾಮಾನ್ಯ ಶಿಕ್ಷಣ

ಡಾ. ಕಾ. ವೆಂ. ಶ್ರೀನಿವಾಸ ಮೂರ್ತಿ

> ವಸಾಹತುಶಾಹಿ ಪೂರ್ವ ಭಾರತೀಯ ಸಂದರ್ಭದಲ್ಲಿ ಶಿಕ್ಷಣವು ಬಹುಸಂಖ್ಯಾತರಿಂದ 'ಅಸ್ಪೃಶ್ಯ' ವಾಗಿತ್ತು. ಇದಕ್ಕೆ ಸಾಮಾಜಿಕ ಶ್ರೇಣೀಕರಣ ವ್ಯವಸ್ಥೆಯಲ್ಲಿ ಜಾತಿ ಮೂಲದ ಕಾರಣವನ್ನು ತನ್ನೊಳಗೆ ಇಟ್ಟುಕೊಂಡಿತ್ತು. ಅಂತೂ ಈ ಶಿಕ್ಷಣ ಬ್ರಿಟಿಷ್ ಆಡಳಿತದ ಅವಧಿಯಲ್ಲಿ ಸಾಮಾಜಿಕವಾಗಿ ಸಹ ವಿಕೇಂದ್ರೀಕರಣಗೊಂಡಿತು. ಅಂತಹ ಶಿಕ್ಷಣ ಇತ್ತೀಚಿನ ವರ್ಷಗಳಲ್ಲಿ ಪುನಃ ಕ್ರಮೇಣ ಕೇಂದ್ರೀಕರಣಕ್ಕೊಳಗಾಗುತ್ತಿರುವುದು ವಿಪರ್ಯಾಸವಾಗಿದೆ.

ಸಮಕಾಲೀನ ಸಂದರ್ಭದ ಭಾರತದಲ್ಲಿ ಸಾಮಾನ್ಯ ಶಿಕ್ಷಣವು ಡೋಲಾಯಮಾನವಾಗುತ್ತಿದೆ. ಇಂತಹ ಸ್ಥಿತಿಗೆ ಶಿಕ್ಷಣ ಕ್ಷೇತ್ರವನ್ನು ಮೀರಿದ ಮತ್ತು ಇದರೊಂದಿಗೆ ಅಂತರ್ ಸಂಬಂಧವನ್ನು ಇರಿಸಿಕೊಂಡ ಒಟ್ಟು ನಮ್ಮ ವ್ಯವಸ್ಥೆಯೇ ಕಾರಣವಾಗುತ್ತಿದೆ. ಇದರಲ್ಲಿ ವರ್ತಮಾನವೂ ಇದೆ; ಸೂಕ್ಷ್ಮವಾಗಿ ನೋಡಿದಾಗ ನಮ್ಮ ಚರಿತ್ರೆಯೂ ಇದಕ್ಕೆ ಕಾಲದಿಂದ ಕಾಲಕ್ಕೆ ಪೂರಕ ಸನ್ನಿವೇಶವನ್ನು ನಿರ್ಮಾಣ ಮಾಡಿದ ಕಥನ ನಮ್ಮ ಕಣ್ಮುಂದೆ ತೆರೆದುಕೊಳ್ಳುತ್ತದೆ.

ಕಳೆದ ದಶಕದಿಂದೀಚೆಗೆ ಕಂಪ್ಯೂಟರ್ ಮತ್ತು ಇಂಗ್ಲಿಷ್ - ಇವುಗಳ ಅಬ್ಬರ ಹೆಚ್ಚಾಗುತ್ತಿದೆ. ಇದು ಕೇವಲ ಭಾರತದ ಚಿತ್ರವಲ್ಲ; ಜಗತ್ತಿನ ಅನೇಕ ರಾಷ್ಟ್ರಗಳಲ್ಲಿ ನಿರ್ಮಾಣವಾಗುತ್ತಿರುವ ಸನ್ನಿವೇಶದ ಚಿತ್ರ. ಇದರಲ್ಲಿ ಸಾಮ್ರಾಜ್ಯಶಾಹಿಯ ಮತ್ತೊಂದು ರೂಪವಾದ ಜಾಗತಿಕ ಬಂಡವಾಳಶಾಹಿಯ ಪಾತ್ರವೂ ಇದೆ. ಇಲ್ಲಿ ಖಾಸಗೀಕರಣದ ಸಾಮ್ರಾಜ್ಯ ಮೇರೆ ಮೀರುತ್ತಿದೆ; ಅದರ ಅಧಿಪತಿಯಾಗಿ ಅಮೆರಿಕವು ಸಾರ್ವಭೌಮವಾಗುತ್ತಿದೆ. ಇಂತಹ ಜಾಗತಿಕ ಸನ್ನಿವೇಶದಲ್ಲಿ ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಬದಲಾವಣೆಯ ಗಾಳಿ ಬೀಸುತ್ತಿದೆ. ಇದು ಬಿರುಗಾಳಿಯೂ ಆಗಿ ಮಾರ್ಪಡುತ್ತಿರುವುದರಿಂದ ಸಂವಿಧಾನ ಮತ್ತು ಅದರ ಆಶಯಗಳು ತರಗೆಲೆಯಾಗುತ್ತಿವೆ. ಆದ್ದರಿಂದ ಭಾರತದ ಶಿಕ್ಷಣ ರಂಗವನ್ನು ನಮ್ಮ ಪಾರ್ಲಿಮೆಂಟಲ್ಲದ ಅಮೆರಿಕದ ವೈಟ್‌ಹೌಸ್ ಮೂಲದ ಬಂಡವಾಳಶಾಹಿ ನೆಲೆಗಳು ನಿಯಂತ್ರಿಸುವಂತಾಗುತ್ತಿದೆ. ಅದರ ಜಾಗದಲ್ಲಿ ಹೇಗೋ ಇದ್ದ ಜನಪರವಾದ ಜ್ಞಾನದ ನೆಲೆಗಳು ಗೈರುಹಾಜರಿಯನ್ನು ಪಡೆಯುತ್ತಿವೆ. ಇಂತಹ ಸನ್ನಿವೇಶದಲ್ಲಿ ಸಾಮಾನ್ಯ ಶಿಕ್ಷಣದ ನೆಲೆ ಮತ್ತು ಹಿನ್ನೆಲೆ ಹಾಗೂ ಮುನ್ನೆಲೆಗಳನ್ನು ಕುರಿತ ತಾತ್ವಿಕ ಚರ್ಚೆ ಅಗತ್ಯವೆಂದು ಭಾವಿಸುತ್ತೇನೆ.

ಬ್ರಿಟಿಷ್ ವಸಾಹತುಶಾಹಿ ಪೂರ್ವ ಭಾರತದಲ್ಲಿ ಶಿಕ್ಷಣವೆಂಬುದು ಬಹುಸಂಖ್ಯಾತರಿಗೆ 'ಅಸ್ಪಶ್ಯ'ವಾಗಿತ್ತು. ಹಾಗಾಗಿ ಭಾರತವು ಬೌದ್ಧಿಕವಾಗಿ ಬಡವಾಯಿತು. ಚರಿತ್ರೆಯಲ್ಲಿ ಲಭ್ಯ ಕೃತಿಗಳನ್ನು ಆಧರಿಸಿಯೇ ಈ ಮಾತನ್ನು ಹೇಳಲಾಗುತ್ತಿದೆ.

ಸಾವಿರಾರು ವರ್ಷಗಳ ಈ ಅವಧಿಯಲ್ಲಿ ಶೇಕಡ ಒಂದು ಕೈ ಬೆರಳಿನಷ್ಟರ ಜನರಿಂದ ಶಿಕ್ಷಣವು ವಿಕೇಂದ್ರೀಕರಣಕ್ಕೆ ಒಳಗಾಗಿದ್ದರೆ, ಅಲ್ಲಿ ಬೆಳಕಿನ ಪರ್ವತವೆ ಏಳಬಹುದಿತ್ತು. ಆದರೆ ಹಾಗಾಗಲಿಲ್ಲ. ಅಲ್ಲಿ ಕೆಲವು ದೀಪಗಳಷ್ಟೇ ಉರಿದವು. ಅದರಿಂದ ಕೆಲವೇ ಮಂದಿ ಬೆಳಕನ್ನು ಪಡೆದರು. ಆದ್ದರಿಂದ ಅಲ್ಲಿ ಕತ್ತಲ ಮೊತ್ತವೇ ಹೆಚ್ಚಾಯಿತು. ಅದು ಅಲ್ಪ ಬೆಳಕಿನ ಇತಿಹಾಸದಲ್ಲಿ ಕಾಣಲೂ ಸಾಧ್ಯವಾಗದಾಯಿತು. ಅದು ನಾವು ಈಗಾಗಲೇ ನಿರ್ವಚಿಸಿಕೊಂಡಿರುವ 'ಭವ್ಯ' ಭಾರತದ ಶಿಕ್ಷಣದ ಇತಿಹಾಸ.

ಹೀಗೆ ಸಾವಿರಾರು ವರ್ಷಗಳ ಕಾಲ ಭಾರತದಲ್ಲಿ ಶಿಕ್ಷಣಕ್ಕೆ 'ಅಸ್ಪೃಶ್ಯ'ವಾಗಿದ್ದ ಬಹುಸಂಖ್ಯಾತ ಜನತೆ ಬ್ರಿಟಿಷ್ ವಸಾಹತುಶಾಹಿಗಳ ಆಡಳಿತದ ಕಾಲದಲ್ಲಿ ಸ್ಪೃಶ್ಯವಾಯಿತು. ಆ ಸ್ಪೃಶ್ಯತೆಯಲ್ಲಿ ಕೆಲವೇ ಸಂಖ್ಯೆಯ ಬ್ರಿಟಿಷರು ಬಹುಸಂಖ್ಯೆಯ ಭಾರತೀಯರನ್ನು ಸುಗಮವಾಗಿ ಮತ್ತು ಸಮರ್ಥವಾಗಿ ಆಳಬೇಕಾದ ಹುನ್ನಾರದಿಂದ ಅವರನ್ನು ಆಡಳಿತದಲ್ಲಿ ಬಳಸಬೇಕಾದ ಸನ್ನಿವೇಶವೊದಗಿ ಅವರಿಗೆ ಬೇಕಾದ ಶಿಕ್ಷಣವನ್ನಷ್ಟೇ ನೀಡಿದರು. ಅಲ್ಲಿ ಇಂಗ್ಲಿಷ್, ಪಾಶ್ಚಾತ್ಯ ಜಗತ್ತಿನ ನಾಗರಿಕತೆ-ಸಂಸ್ಕೃತಿ, ಇತಿಹಾಸ, ಸಾಹಿತ್ಯ, ವಿಜ್ಞಾನ ಇವುಗಳನ್ನು ಸೇರಿಸುವುದನ್ನು ಮರೆಯಲಿಲ್ಲ. ಹಾಗಾಗಿ ವಸಾಹತುಶಾಹಿ ರೂಪಿಸಿದ ಭಾರತೀಯ ಹೊಸ ಸಂಸ್ಕೃತಿಯಲ್ಲಿ ನವ ಬೌದ್ಧಿಕರು ಮೂಡಿದರು. ಇವರ ಒಳಗೆ ಭಾರತವೂ ಪಶ್ಚಿಮವೂ ಒಟ್ಟೊಟ್ಟಿಗೆ ಮೂಡಿದ್ದರಿಂದ ಮುಂದಿನ ಪರಿಣಾಮ ಬೇರೆಯೇ ಆಯಿತು. ಅದರ ಕತೆ ಇಲ್ಲಿಗೆ ಅಗತ್ಯವಿಲ್ಲವೆಂದು ಭಾವಿಸುತ್ತೇನೆ. ಅಂತೂ ಸಾವಿರಾರು ವರ್ಷಗಳಿಂದ 'ಸಂಸ್ಕೃತ'ದಲ್ಲಿ ಬಂಧಿಯಾಗಿದ್ದ ಶಿಕ್ಷಣವು ಇಲ್ಲಿ 'ಇಂಗ್ಲಿಷಿ'ಗೆ ಸ್ಥಳಾಂತರವಾಗಿ ಸ್ವಲ್ಪ ಅನಿರ್ಬಂಧಿತವೂ ಆಯಿತು. ಅಲ್ಲಿ ಸಂಸ್ಕೃತದ ಎದುರಿನಲ್ಲಿ ಎರಡನೆಯ ದರ್ಜೆಯವಾಗಿದ್ದ ಜನಭಾಷೆಗಳು ಮತ್ತು ಜನ ಇಲ್ಲಿ ಇಂಗ್ಲಿಷು ಮತ್ತು ಇಂಗ್ಲಿಷಿನ ಎದುರು ಎರಡನೆಯವರೇ ಆದರು. ಆದರೂ ಬ್ರಿಟಿಷ್ ಶಿಕ್ಷಣವು ಎಷ್ಟೇ ಸ್ವಾರ್ಥಮೂಲದ್ದಾಗಿದ್ದರೂ ಒಂದರ್ಥದಲ್ಲಿ ಭಾರತೀಯ ಬದುಕಿನಲ್ಲಿ ಆರೋಗ್ಯಕರ ಬೆಳವಣಿಗೆಗಳಿಗೆ ನಾಂದಿ ಹಾಡಿತೆಂದೇ ಹೇಳಬೇಕು.

ಹೀಗೆ ವಸಾಹತುಶಾಹಿ ಭಾರತದ ಸಂಸ್ಕೃತಿಯಲ್ಲಿ ಸಂಭವಿಸಿದ 'ಅಕ್ಷರಕ್ರಾಂತಿ' ಇದುವರೆಗೂ ಸುಮಾರು ಶೇ. ೬೦ ರಷ್ಟರ ಸಾಕ್ಷರತೆಯ ಪ್ರಗತಿಯನ್ನು ಸಾಧಿಸಿದೆ. ಇದರಲ್ಲಿ ಸಾಮಾನ್ಯ ಶಿಕ್ಷಣವೇ ಪ್ರಧಾನವಾಗಿ, ಸಂಸ್ಕೃತಿ ಮತ್ತು ಅದರ ಅಗತ್ಯತೆಗಳನ್ನು ಪೂರೈಸುವಷ್ಟರ ಮಟ್ಟಿಗಿನ ವಿವೇಕವುಳ್ಳದ್ದಾಗಿ ವೃತ್ತಿಶಿಕ್ಷಣವು ತನ್ನ ಪಾತ್ರವನ್ನೂ ನಿರ್ವಹಿಸುತ್ತಾ ಬಂದಿದೆ. ಆದ್ದರಿಂದ ಇಲ್ಲಿ ಇದುವರೆಗೂ ಒಂದು ಬಗೆಯ ಸಮತೋಲನ ಸಾಧ್ಯವಾಗಿದೆ. ಇದರ ನಡುವೆ ಸಾಮಾನ್ಯ ಶಿಕ್ಷಣದಲ್ಲಿ ಪ್ರಧಾನವಾಗಿ ಕನ್ನಡದಂತಹ ದೇಶಭಾಷೆಗಳು ಹಾಗೂ ವೃತ್ತಿಶಿಕ್ಷಣದಲ್ಲಿ ಇಂಗ್ಲಿಷ್ ಭಾಷೆ : ಇವು ತಮ್ಮ ಅನನ್ಯತೆಗಳನ್ನು ಗುರುತಿಸಿಕೊಂಡು ಬಂದಿವೆ ಎಂಬುದನ್ನು ಒಪ್ಪಬೇಕು.

ವರ್ತಮಾನದ ಈ ಬಗೆಯ ಸಂಭವ ಚರಿತ್ರೆಯ ಮೂಲದಲ್ಲಿದೆ ಎಂಬುದನ್ನು ತಿಳಿದಾಗ ಭವಿಷ್ಯಮುಖಿ ಆಲೋಚನೆಗಳು ಬೇರು ತೊಟ್ಟ ಮರಗಳಾಗುತ್ತವೆ.

ನಾವು ೧೯೪೭ರಲ್ಲಿ ಬ್ರಿಟಿಷರಿಂದ ಸ್ವತಂತ್ರರಾದದ್ದು ನಿಜ. ಆದರೆ ಬುದ್ಧಿಯ ದೃಷ್ಟಿಯಿಂದ ನಾವೆಷ್ಟು ಸ್ವತಂತ್ರರು ಎಂಬ ಪ್ರಶ್ನೆ ಗೆ ಉತ್ತರ ಸಂಕೀರ್ಣವಾಗುತ್ತದೆ. ಅಮೆರಿಕಾದ ಕಣ್ಣುಗಳಿಂದ ಪ್ರಪಂಚವನ್ನು ಅವಲೋಕಿಸುವ ಬುದ್ಧಿವಂತರು ಇಂದು ನಮ್ಮಲ್ಲಿ ಹೇರಳವಾಗಿದ್ದಾರೆ !

ವಸಾಹತುಶಾಹಿಗಳು ಭಾರತದ ಮೇಲೆ ಹೇರಿದ ಅನೇಕ ಭ್ರಮೆಗಳಲ್ಲಿ 'ಇಂಗ್ಲಿಷೇ ಶಿಕ್ಷಣ', 'ಪಶ್ಚಿಮವೇ ಮಾದರಿ' ಎಂಬುದು ಕೆಲವು. ಅನೇಕರಲ್ಲಿ ಇವು ಭ್ರಮೆಗಳಲ್ಲ; ಜ್ಞಾನದ ಮಾದರಿಗಳೇ ! ಅಂಥವರ ಸಂತತಿಯ ಕುಡಿಗಳು ನಾವಾಗಿರುವುದರಿಂದ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಪ್ರಧಾನವಾಗಿ ವೃತ್ತಿ ಶಿಕ್ಷಣದ ನೆಲೆಯಲ್ಲಿ ಇಂಗ್ಲಿಷನ್ನು ಆಚರಿಸುವುದು ಕಷ್ಟವಾಗಲಿಲ್ಲ; ಸಹ್ಯವೂ ಹಿತಕರವೂ ಆಯಿತು ! ಇಂತಹ ಸನ್ನಿವೇಶದ ಮುಂದುವರೆದ ಈ ಘಟ್ಟದಲ್ಲಿ ಬ್ರಿಟಿಷರ ಜಾಗದಲ್ಲಿ ಜಾಗತಿಕ ಬಂಡವಾಳ ಶಾಹಿಗಳು ಅಥವಾ ಆರ್ಥಿಕ ಸಾಮ್ರಾಜ್ಯಶಾಹಿಗಳು ಹಾಗೂ ಅವರ ಒಂದು ಆಯಾಮವಾದ ಇಂಗ್ಲಿಷ್ ಸಾಮ್ರಾಜ್ಯಶಾಹಿ ಭಾರತವನ್ನು ಆಳುವುದು ಕಷ್ಟದ ಮಾತೇನಾಗಿಲ್ಲ. ಆದ್ದರಿಂದ ಕಳೆದ ದಶಕದಿಂದೀಚೆಗೆ ಉದಾರೀಕರಣದ ಹೆಸರಿನಲ್ಲಿ ಜಾಗತೀಕರಣ, ಖಾಸಗೀಕರಣ, ಶಿಕ್ಷಣದ ಉದ್ಯಮೀಕರಣ, ಅಲ್ಲಿ ಇಂಗ್ಲಿಷಿನ ಪ್ರಬಲೀಕರಣ: ಇವೆಲ್ಲವೂ ತಮಗೆ ಸಮಾನ ಶತ್ರುವೇ ಇಲ್ಲದ ಯುದ್ಧ ಭೂಮಿಯಲ್ಲಿ ವೀರಾವೇಶದಿಂದ ಬೆಳ್ಳಿಯ ಕತ್ತಿಯಿಂದ ಬೆಳಕನ್ನು ಚಿಮ್ಮಿಸುತ್ತಿವೆ. ಕಣ್‌ಕೋರೈಸುವ ಆ ಬೆಳಕಿನಲ್ಲಿ ನಮ್ಮ ದೃಷ್ಟಿಯೂ ಮಂದವಾಗುತ್ತಿದೆ. ಆದ್ದರಿಂದ ಸಾಮಾನ್ಯ ಶಿಕ್ಷಣದ ಜಾಗದಲ್ಲಿ ವೃತ್ತಿಶಿಕ್ಷಣವು ನೆಲೆಯೂರುತ್ತಿರುವುದಾಗಲಿ, ಜ್ಞಾನದ ನೆಲೆಗಳು ನಿರ್ಧರಿಸುತ್ತಿದ್ದ ಶಿಕ್ಷಣವನ್ನು ಬಂಡವಾಳದ ನೆಲೆಗಳು ನಿರ್ಧರಿಸುತ್ತಿರುವುದಾಗಲಿ, ವೃತ್ತಿಶಿಕ್ಷಣವನ್ನೇ ಆತ್ಮವಾಗಿಸಿಕೊಂಡ ಇಂಗ್ಲಿಷ್ ಭೂತವು ಜನಭಾಷೆಗಳ ನೆಲೆಯಾದ ಸಾಮಾನ್ಯ ಶಿಕ್ಷಣದ ಮೇಲೆ ಎರಗುತ್ತಿರುವುದಾಗಲಿ, ಒಂದೂ ನಮಗೆ ಸ್ಪಷ್ಟವಾಗಿ ಕಾಣುತ್ತಿಲ್ಲ. ಇಂಥಲ್ಲಿ ಸಾಂಸ್ಕೃತಿಕ ವಿಸ್ಮೃತಿ, ನವ ವಸಾಹತೀಕರಣದಂತಹ ವಿಕಲ್ಪಗಳು ಕತ್ತಲನ್ನು ಬಿತ್ತುತ್ತಾ ಬಂದು, ಮುಂಜಾವಿನಲ್ಲಿ ನಮ್ಮದಲ್ಲದ ಭಾರತವನ್ನು ಪರಿಚಯಿಸುವ ಟೊಂಕವನ್ನು ಕಟ್ಟಿವೆ. ಇಂತಹ ಸನ್ನಿವೇಶದಲ್ಲಿ ನಮ್ಮ ಅನನ್ಯತೆಯನ್ನು ಕುರಿತ ಚರ್ಚೆಗೆ ಯಾವ ಬಾಗಿಲಿನಿಂದಾದರೂ ಪ್ರವೇಶಿಸಲು ಸಾಧ್ಯವಿದೆ. ಅದರಲ್ಲೊಂದು 'ಸಾಮಾನ್ಯ ಶಿಕ್ಷಣ' ಮತ್ತು ಅದನ್ನು ಕುರಿತ ಸಮಕಾಲೀನ ಕೇಂದ್ರಿತ ತಾತ್ವಿಕ ಚರ್ಚೆ.

ನಾನು ಈಗಾಗಲೇ ಹೇಳಿರುವಂತೆ ಭಾರತೀಯ ಶಿಕ್ಷಣವನ್ನು ಜ್ಞಾನದ ನೆಲೆಗಳು ನಿಯಂತ್ರಿಸುತ್ತಿವೆ ಎನ್ನುವುದಕ್ಕಿಂತ ಬಂಡವಾಳದ ನೆಲೆಗಳು ಹೆಚ್ಚು ನಿಯಂತ್ರಿಸುತ್ತಿವೆ. ಹಾಗಾಗಿ ಪ್ರತ್ಯಕ್ಷವಾಗಿ ಮಾರುಕಟ್ಟೆ ಮೌಲ್ಯವನ್ನು ಪಡೆದಿರುವ ವೃತ್ತಿಶಿಕ್ಷಣ, ಇಂಗ್ಲಿಷ್ ಭಾಷೆ,

ಮುಂದಿನ ಪುಟಕ್ಕೆ




**ಶ್ರೀ**ಗಂಧವು ಆಯುರ್ವೇದ ವೈದ್ಯಶಾಸ್ತ್ರದಲ್ಲಿ ಮೌಲ್ಯಯುತವಾದ ಗಿಡಮೂಲಿಕೆ. ಕನ್ನಡ ನಾಡು, ಗಂಧದ ಬೀಡು, ಎಂದು ಹೆಸರುವಾಸಿಯಾಗಿರುವ ಕರ್ನಾಟಕವೇ ಶ್ರೀಗಂಧದ ಗಿಡಗಳಿಗೆ ತವರು ಮನೆ. ಭರತ ಖಂಡದ ತುಂಬ ಜನರಿಗೆ ಮುಟ್ಟಿ, ದೇಶ ವಿದೇಶಗಳಿಗೂ ಕನ್ನಡ ನಾಡಿನಿಂದಲೇ ಇದರ ಪಸರಿಕೆ. ವೈದ್ಯ ಶಾಸ್ತ್ರದಿಂದ ಹಿಡಿದು ಸುಗಂಧ ದ್ರವ್ಯಗಳವರೆಗೆ ಇದರದು ರತ್ನಕ್ಕೆ ಸಮಾನವಾದ ಬಳಕೆ. ಶ್ರೀಗಂಧದಲ್ಲಿ ವಿವಿಧ ಬಗೆಗಳಿದ್ದು ಚಂದನ, ಕೆಂಪು ಚಂದನ, ಪಿಟ್ಟ ಚಂದನ, ಸುಕ್ಕಡಿ ಚಂದನ, ಶಂಬರ ಚಂದನ, ಪೀತ ಚಂದನ (ಹರಿ ಚಂದನ) ಗಳೆಂಬ ಭೇದಗಳಿವೆ. ನಮ್ಮ ದೇಶದಲ್ಲಿ ಧಾರಾಳವಾಗಿ ಎಲ್ಲೆಲ್ಲೂ ಬೆಳೆಯುತ್ತಿರುವ ಶ್ರೀಗಂಧ ವೃಕ್ಷದ ವೈದ್ಯಕೀಯ ಗುಣಗಳನ್ನು ಕುರಿತು ಆಯುರ್ವೇದಕಾರರು ಹೀಗೆ ವರ್ಣಿಸುತ್ತಾರೆ :

*ಸ್ವಾದೇ ತಿಕ್ತಂ ಕಷೇ ಪೀತಂ ಛೇದೇ ರಕ್ತಂ ತನೌ ಸಿತಂ ॥*
*ಗ್ರಂಥಿಕೋಟರಸಂ ಯಕ್ತಂ ಚಂದನಂ ಶ್ರೇಷ್ಠ ಮುಚ್ಯತೇ ॥*

(ಶ್ರೀಗಂಧವು ಸ್ವಾದದಲ್ಲಿ ಕಹಿ, ಅರೆಯುವುದರಲ್ಲಿ ಅರಿಸಿನ ಬಣ್ಣ, ಕತ್ತರಿಸಿದರೆ ಕೆಂಪಾಗಿದ್ದು, ಅದರ ಸರ್ವಾಂಗವೂ ಬಿಳುಪಾಗಿರುತ್ತಾ, ಗಂಟುಗಳು (ತೊರೆ) ಉಳ್ಳ ಶ್ರೀಗಂಧವು ಶ್ರೇಷ್ಠವಾದದ್ದೆಂದು ಹೇಳಲಾಗಿದೆ)

ಇನ್ನೊಂದೆಡೆ ಹೇಳಿರುವಂತೆ, ಶ್ರೀಗಂಧವು ಶೀತಲ, ರೂಕ್ಷ, ಕಹಿ, ಆನಂದಜನಕ, ಲಘು, ಹೃದಯಕ್ಕೆ ಹಿತಕಾರಿ, ವರ್ಣೋಜ್ವಲಕಾರಿ : ವಿಷ, ಕಫ, ತೃಷಾ, ಪಿತ್ತ, ದಾಹ ಇವನ್ನು ನಿವಾರಣೆ ಮಾಡುತ್ತದೆ. ಮುಂದುವರೆದು ಅದನ್ನು ಹೀಗೆ ವ್ಯಾಖ್ಯಾನಿಸಲಾಗಿದೆ :

ಶ್ರೀಗಂಧವು ಕಟು, ತಿಕ್ತ, ವೀರ್ಯಜನಕ, ಶೀತಲ, ಒಗರು, ಕಾಂತಿಕಾರಕ, ಕಾಮೋತ್ತೇಜನಕಾರಿ; ಹೃದಯಕ್ಕೆ ಹಿತಪ್ರದ, ಸುಗಂಧವುಳ್ಳದ್ದು, ಆಹ್ಲಾದಜನಕ, ಲಘು ರೂಕ್ಷವಾದದ್ದು, ಪಿತ್ತ, ಭ್ರಮೆ, ಜ್ವರ, ವಾಂತಿ, ತೃಷ್ಣಾ, ಕ್ರಿಮಿ, ಸಂತಾಪ, ದಾಹಶ್ರಮ, ಮುಖರೋಗ, ರುಧಿರವಿಕಾರ, ಶೋಷರೋಗ ಇವುಗಳನ್ನು ನಿರ್ನಾಮಗೊಳಿಸುವುದು.

*ಮಲಯಾದ್ರಿ ಸಮೀಪಸ್ಥಾಃ ಪರ್ವತಾ ಬೆಟ್ಟಸಂಜ್ಞಕಾಃ॥*
*ತಜ್ಜಾತಂ ಚಂದನಂ ಯತ್ತು ಬೆಟ್ಟವಾಚ್ಯಂ ಕ್ವ ಚಿನ್ಮತಮ್॥*
*ಬೆಟ್ಟಚಂದನಮತೀವ ಶೀತಲಮ್ ದಾಹಪಿತ್ತಶಮನಂ ಜ್ವರಾಪಮ್॥*
*ಛರ್ದಿಮೋಹ ತೃಷಕುಷ್ಠತೈಮಿರೋತ್ಥಾರರಕ್ತಶಮನಂ ಚ ತಿಕ್ತಕಮ್॥*

(ಮಲಯಾಚಲ ಪ್ರಾಂತದ ಬೆಟ್ಟಗಳಲ್ಲಿರುವ ಶ್ರೀಗಂಧವು ಬೆಟ್ಟ ಚಂದನವೆಂಬುದು. ಇದು ಅತ್ಯಂತ ಶೀತಲವಾದದ್ದು; ದಾಹ, ಪಿತ್ತ, ಜ್ವರ, ವಮನ, ಮೋಹ, ತೃಷಾ, ಕುಷ್ಠ, ತಿಮಿರ ರೋಗ, ರಕ್ತವಿಕಾರ ಇವನ್ನು ಶಮನಗೊಳಿಸುವುದು)

*ಸುಕ್ಕಡಿಶ್ಚಂದನಂ ತಿಕ್ತಂ ಕೃಚ್ಛ್ರ ಪಿತ್ತಾಸ್ರ ದಾಹನುತ್॥*
*ಶೈತ್ಯಂ ಸುಗಂಧದಂ ಚಾರ್ದ್ರಂ ಶುಷ್ಕಂ ಲೇಪೇ ತದ್ವಥಾ॥*

ಇಲ್ಲಿ ''ಬೆಟ್ಟಂ ತು ಸಾರ್ದ್ರವಿಸ್ಫೋಟಂ, ಸ್ವಯಂ ಶುಷ್ಕಂ ತು ಸುಕ್ಕಡಿ'' ಅಂದರೆ, ಯಾವ ಶ್ರೀಗಂಧವು ಹಸಿಯಾಗಿದ್ದು, ಛಿದ್ರರಹಿತವಾಗಿರುವುದೋ ಅದೇ ಬೆಟ್ಟ ಚಂದನವು; ಸ್ವಯಂ ಶುಷ್ಕವಾಗಿರುವ ಸುಕ್ಕಡಿ ಶ್ರೀಗಂಧವು, ಎಂದಿದೆ. ಇದರ ಗುಣ : ಕಹಿಯಾದದ್ದು; ಮೂತ್ರಕೃಚ್ಛ, ಪಿತ್ತರಕ್ತ, ದಾಹ, ಶೀತಲ ಸುಗಂಧದಾಯಕವಾದ್ದು. ಇಂತಹ ಅಮೂಲ್ಯ ಗುಣದಾಯಕವಾದ ಈ ಮೂಲಿಕೆಯನ್ನು ನಮ್ಮ ದೇಶೀಯರು ಅನುಭವಿಸಿ ತಮ್ಮ ರೋಗಗಳನ್ನು ನಿರ್ಮೂಲ ಮಾಡಿಕೊಳ್ಳುವುದು ಒಳಿತು.

**ನೆನಪಿಡಿ :**

೧. ಶ್ರೀಗಂಧದ ಜೊತೆ ಸಕ್ಕರೆ ಜೇನುತುಪ್ಪ ಸೇರಿಸಿ ಸೇವಿಸಲು ಛರ್ದಿ ನಾಶವಾಗುವುದು.
೨. ಶ್ರೀಗಂಧವನ್ನು ಅರೆದು ನೆಲ್ಲಿಕಾಯಿ ರಸದಲ್ಲಿ ಸೇವಿಸುತ್ತಾ ಬರಲು ಪಿತ್ತಛರ್ದಿ ಶಮನಕಾರಿ.
೩. ಶ್ರೀಗಂಧ ಹಾಲಿನಲ್ಲಿ ಅರೆದು ಮುಖಕ್ಕೆ ಲೇಪಿಸಿದರೆ (ತಾರುಣ್ಯ ಪಿಟಕಾ) ಮೊಡವೆಗಳು ನಾಶವಾಗುವುದು.
೪. ಶ್ರೀಗಂಧವನ್ನು ಅರೆದು ಲೇಪಿಸಲು ಬೆವರು ಸಾಲೆಗಳು ನಾಶವಾಗುವುವು.

ಅಶೋಕ ಆಯ್. ಕಲಾಲ
ಶ್ರೀ ಆಗಸ್ತೆಯ ಆಯುರ್ವೇದ ಚಿಕಿತ್ಸಾಲಯ, ನವಿಪೇಠ, ರಾಮದುರ್ಗ-೫೯೧ ೧೨೩

*ಹಿಂದಿನ ಪುಟದಿಂದ*

ಇವು ಪ್ರಧಾನ ಸ್ತರಕ್ಕೆ ಏರುತ್ತಿವೆ. ಇವುಗಳ ಎದುರು ದಿಕ್ಕಿನಲ್ಲಿ ಸಾಮಾನ್ಯ ಶಿಕ್ಷಣ, ಜನಭಾಷೆಗಳು ನೆಲೆಗೊಳ್ಳುತ್ತಿವೆ. ಮೊದಲನೆಯದರಲ್ಲಿ ಬಂಡವಾಳಶಾಹಿ ಚಿಂತನೆಗಳು ಅರಳಿದರೆ, ಎರಡನೆಯದರಲ್ಲಿ ಜನಪರ ಚಿಂತನೆಯ ನೆಲೆಗಳು ಉಸಿರುಗಟ್ಟಿ ಉಳಿಯುತ್ತವೆ. ಆಗ 'ನಗರ'ವು ಮೊದಲನೆಯದರ ಕಡೆಗೆ ಓಡಿದರೆ, 'ಹಳ್ಳಿ' ಅನಿವಾರ್ಯವಾಗಿ ಎರಡನೆಯದರ ಕಡೆಗೆ ಸಾಗಿ ನಿಲ್ಲುತ್ತದೆ.

ವಸಾಹತುಶಾಹಿ ಪೂರ್ವ ಭಾರತೀಯ ಸಂದರ್ಭದಲ್ಲಿ ಶಿಕ್ಷಣವು ಬಹುಸಂಖ್ಯಾತರಿಂದ 'ಅಸ್ಪೃಶ್ಯ'ವಾಗಿತ್ತು. ಇದಕ್ಕೆ ಸಾಮಾಜಿಕ ಶ್ರೇಣೀಕರಣ ವ್ಯವಸ್ಥೆಯಲ್ಲಿ ಜಾತಿಮೂಲದ ಕಾರಣವನ್ನು ತನ್ನೊಳಗೆ ಇಟ್ಟುಕೊಂಡಿತ್ತು. ಅಂತೂ ಈ ಶಿಕ್ಷಣ ಬ್ರಿಟಿಷ್ ಆಡಳಿತದ ಅವಧಿಯಲ್ಲಿ ಸಾಮಾಜಿಕವಾಗಿ ಸಹ ವಿಕೇಂದ್ರೀಕರಣಗೊಂಡಿತು. ಅಂತಹ ಶಿಕ್ಷಣ ಇತ್ತೀಚಿನ ವರ್ಷಗಳಲ್ಲಿ ಪುನಃ ಕ್ರಮೇಣ ಕೇಂದ್ರೀಕರಣಕ್ಕೊಳಗಾಗುತ್ತಿರುವುದು ವಿಪರ್ಯಾಸವಾಗಿದೆ. ಆದರೆ ಈ ಕೇಂದ್ರೀಕರಣವು ಸಾಮಾಜಿಕ ಶ್ರೇಣೀಕರಣ ವ್ಯವಸ್ಥೆಯನ್ನು ಮೂಲವಾಗಿಸಿಕೊಂಡಿಲ್ಲ, ಬದಲಿಗೆ ಆರ್ಥಿಕ ಶ್ರೇಣೀಕರಣದ ಹಿನ್ನೆಲೆಯನ್ನು ಮೂಲವಾಗಿಸಿಕೊಂಡಿದೆ. ಈ ಹಿನ್ನೆಲೆಯಲ್ಲಿ ಅಂದು ಸಾಮಾಜಿಕ ಮೇಲು ವರ್ಗಕ್ಕೆ ಸಲ್ಲುತ್ತಿದ್ದ ಶಿಕ್ಷಣ ಇಂದು ಆರ್ಥಿಕ ಮೇಲುವರ್ಗದ ಜನಕ್ಕೆ ಸಲ್ಲುತ್ತಿದೆ, ಅಷ್ಟೇ. ಈ ನೆಲೆಯಲ್ಲಿ ಸಾಮಾನ್ಯ ಶಿಕ್ಷಣ-ಜನಭಾಷೆ-ಗ್ರಾಮೀಣ ಪ್ರದೇಶ - ಬಡವರು – ಈ ಕಲ್ಪನೆಗಳು ಪರಸ್ಪರ ನಿಯತವಾದ ಅಂತರ್ ಸಂಬಂಧದಲ್ಲಿ ಕೂಡಿಕೊಳ್ಳುತ್ತವೆ. ಇವುಗಳ ಎದುರು ದಿಕ್ಕಿನಲ್ಲಿ ಶ್ರೀಮಂತರು - ವೃತ್ತಿಶಿಕ್ಷಣ-ಇಂಗ್ಲಿಷ್ ಭಾಷೆ - ನಗರ ಪ್ರದೇಶ ಇವು ಅಂತಹ ಒಳ ಸಂಬಂಧಗಳನ್ನು ಸ್ಥಾಪಿಸಿಕೊಳ್ಳುತ್ತಿವೆ. ಈ ಹಿನ್ನೆಲೆಯಲ್ಲಿ ಹೊಸ ಶ್ರೇಣೀಕರಣದ ಸಾಮಾಜಿಕ ವ್ಯವಸ್ಥೆಯೊಂದು ಇತ್ತೀಚೆಗೆ ಮೂಡುತ್ತಿದೆ. ಇದು ಪ್ರಜಾಪ್ರಭುತ್ವ ಇದೆ ಎಂದು ಹೇಳಲಾಗುತ್ತಿರುವ ಭಾರತದಲ್ಲಿ ಸಂವಿಧಾನಕ್ಕೆ ಒದಗುತ್ತಿರುವ ಅಪಚಾರವಾಗುತ್ತಿದೆ.

ಸಾಮಾನ್ಯ ಶಿಕ್ಷಣ ಇಂದು ಏದುಸಿರು ಬಿಡುತ್ತಿದೆ. ಇದಕ್ಕೆ ಕಾರಣವು ಕೇವಲ ತಾನು ಮತ್ತು ತನ್ನ ಮೂಲದ್ದೇ ಅಲ್ಲ. ಇದಕ್ಕೆ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ನಾವು ಇರಿಸಿ ಕೊಂಡ ಸಂಬಂಧ-ಸನ್ನಿವೇಶಗಳು ಸಹ ಕಾರಣವಾಗುತ್ತಿವೆ. ಈ ನಿಟ್ಟಿನಲ್ಲಿ ನಾವು ಸಾಮಾನ್ಯ ಶಿಕ್ಷಣದ ಸ್ಥಿತಿಗತಿಗಳನ್ನು ಕುರಿತು ಆಡುವ ಮಾತುಗಳು ಅದರಾಚೆಗೂ ಹೋಗಿ ಮುಟ್ಟುತ್ತವೆ.

ಡಾ. ಕಾ. ವೆಂ. ಶ್ರೀನಿವಾಸಮೂರ್ತಿ
ಕನ್ನಡ ಅಧ್ಯಾಪಕ, ಬೆಂಗಳೂರು ವಿಶ್ವವಿದ್ಯಾಲಯ ಸ್ನಾತಕೋತ್ತರ ಕೇಂದ್ರ, ಕೋಲಾರ-೫೬೩ ೧೦೧

ಒಳ್ಳೆಯ ಓದು

**ಬೆಚ್ಚಿ ಬೀಳಿಸಿದ ಬೆಂಗಳೂರು**
*(ಅಂಕಣ ಬರಹ) ಸರ್ಜಾಶಂಕರ್ ಹರಳಿಮಠ*
**ಪುಟ : ೧೬೫ ಬೆಲೆ : ರೂ. ೭೫**
**ನಮ್ಮ ನಾಡು ಪ್ರಕಾಶನ, ಮೊದಲ ತಿರುವು, ಎನ್. ಟಿ. ರಸ್ತೆ, ಜೆ. ಸಿ. ನಗರ, ಶಿವಮೊಗ್ಗ - ೧**

*ಇಂದಿನ ಬೆಂಗಳೂರಿನ ಜನಜೀವನದ ಚಿತ್ರಣದೊಂದಿಗೆ ನೋವು-ನಲಿವುಗಳನ್ನು ಸಹಾ ಲೇಖಕರು ಪರಿಚಯಿಸುತ್ತಾರೆ. ಮೂಲತಃ ಪತ್ರಿಕೆಯೊಂದರ ಅಂಕಣ ಬರಹಗಳ ಸಂಗ್ರಹವಾಗಿದೆ. ದೂರದ ಬೆಟ್ಟ ನುಣ್ಣಗೆನ್ನುವಂತೆ ಉದ್ಯೋಗವನ್ನರಸಿ ಬೆಂಗಳೂರಿಗೆ ಬಂದ ಜನರು ಇಲ್ಲಿ ಬಾಳುತ್ತಿರುವ ರೀತಿ, ಇಲ್ಲಿನ ಕ್ರೌರ್ಯಗಳು ಮಾತ್ರವಲ್ಲದೆ ಅಪರೂಪವಾದರೂ ಇನ್ನೂ ಇರುವ ಸಹೃದಯತೆ ಇಂಥ ವಿಷಯಗಳ ಬಗ್ಗೆ ಒಂದು ನೋಟ ಹರಿಸಲಾಗಿದೆ. ಛಲಗಾರರಿಗೆ, ಕನಸುಗಾರರಿಗೆ ಇಲ್ಲಿ ವೇದಿಕೆ ಯಾವತ್ತೂ ಸಿದ್ಧವಾಗಿದೆ.*

**ಹರಿಶ್ಚಂದ್ರ ಕಾವ್ಯ : ಓದು, ವಿಮರ್ಶೆ**
*ಜೆ. ಎಚ್. ನಾಯಕ*
**ಪುಟ : ೧೧೨ ಬೆಲೆ : ರೂ. ೭೫**
**ಶ್ರೀ ರಾಘವಾಂಕ ಪ್ರಕಾಶನ, ಅಂಬಾರಕೊಡ್ಲ, ಅಂಕೋಲಾ - ೫೮೧ ೩೧೪**

*ರಾಘವಾಂಕನ ಪ್ರತಿಭೆಗೆ ಸಾಕ್ಷಿಯಾಗಿರುವ ಹರಿಶ್ಚಂದ್ರ ಕಾವ್ಯ ಪೌರಾಣಿಕ ಕೃತಿಯನ್ನು ಓದಿ ವಿಮರ್ಶಿಸುವುದು ಅಂಥ ಸುಲಭದ ಮಾತೇನಲ್ಲ. ಹರಿಶ್ಚಂದ್ರ - ಚಂದ್ರಮತಿಯರ ವ್ಯಕ್ತಿತ್ವವನ್ನು ರಾಘವಾಂಕ ಉತ್ತುಂಗಕ್ಕೇರಿಸಿ ಸೊಬಗು ಗಾಂಭೀರ್ಯವನ್ನು ಕೃತಿಯಲ್ಲಿ ತುಂಬಿದ್ದಾನೆ. ಅದನ್ನೋದಿದರೆ ವಿಮರ್ಶೆ ಮಾಡಲು ಅಂತಃಕರಣವೇ ಪ್ರೇರೇಪಿಸುತ್ತದೆ. ಬಾಲ್ಯದಿಂದಲೂ ಹರಿಶ್ಚಂದ್ರನ ವ್ಯಕ್ತಿತ್ವವನ್ನು ಮೆಚ್ಚಿಕೊಂಡ ಪ್ರೊ|| ಜೆ. ಎಚ್. ನಾಯಕ ಸಮರ್ಥವಾಗಿ ಕೃತಿ ವಿಮರ್ಶೆ ಮಾಡಿದ್ದಾರೆ.*

**ಬಾಯಾರಿಕೆ** (ಕವನ ಸಂಕಲನ)
*ಡಾ|| ವಿನಯಾ*
**ಪುಟ : ೭೦ ಬೆಲೆ : ರೂ. ೩೫**
**ಲಡಾಯಿ ಪ್ರಕಾಶನ, ೪೨, ಪ್ರಸಾದ್ ಲಾಡ್ಜ್, ಗದಗ**

*ಸಂತೋಷ-ಸಂಭ್ರಮವಾಗಲೀ, ಶೋಕ-ನಿರುತ್ಸಾಹವಾಗಲೀ, ಮನಸ್ಸಿನಾಳಕ್ಕಿಳಿದಾಗ ತಂತಾನೇ ಸ್ಫುರಿಸುವ ಭಾವನೆಗಳಿಗೆ ಧ್ವನಿ ಕೊಟ್ಟಾಗ ಕವಿತೆ ಜನ್ಮ ತಾಳುತ್ತದೆ. ಆದರ, ಪ್ರೀತಿ ಗಳಿಸಿಕೊಂಡಷ್ಟೂ ಕವಿತೆ ಇನ್ನೂ ಆಪ್ತೀಯವಾಗುತ್ತದೆ. ಮನದಾಳದಿಂದ ನೀರಿನ ಬುಗ್ಗೆಯಂತೆ ಹೊರಹೊಮ್ಮಿದ ಭಾವನೆಗಳನ್ನು ಡಾ|| ವಿನಯಾ ಇಲ್ಲಿ ಪದಗಳ ರೂಪ ಕೊಟ್ಟು ನಮ್ಮ ಮುಂದಿರಿಸಿದ್ದಾರೆ. ಇವೆಲ್ಲ ಅಮೂರ್ತ ಕಲ್ಪನೆಗಳ ಮೂರ್ತ ರೂಪಗಳು. ಕವಿತೆಗಳು ಸ್ತ್ರೀ ಸಂವೇದನೆಯ ನೆಲೆಯಲ್ಲಿ ರೂಪುಗೊಂಡಿವೆ.*

**ಯಾವ ಶಬ್ದದ ಮಾಯೆ** (ಕವನಗಳು)
*ವರದೇಶ ಹಿರೇಗಂಗೆ*
**ಪುಟ : ೫೨ ಬೆಲೆ : ರೂ. ೪೦**
**ಅಕ್ಷರ ಪ್ರಕಾಶನ, ಹೆಗ್ಗೋಡು ಅಂಚೆ, ಸಾಗರ - ೫೭೭ ೪೧೭**

*ಕವಿತೆಗಳ ಮೂಲಕ ಕವಿ ಜನರೊಂದಿಗೆ ಮಾತನಾಡುತ್ತಾನೆ. ಕವಿತೆಗಳನ್ನು ಅರ್ಥೈಸಿಕೊಂಡ ಮೇಲಷ್ಟೇ ಕವಿಯ ಭಾವುಕ ಪ್ರಪಂಚ ಓದುಗನಿಗೆ ಅರಿವಾಗಿ ಆತ ಕವಿಯೊಂದಿಗೆ ಮಾತಾಡತೊಡಗುತ್ತಾನೆ. ಈ ಪರಸ್ಪರ ಸಂಭಾಷಣೆ ರಾಗ-ಲಯ-ಭಾವಗಳ ಮೂಲಕ ನಡೆಯುತ್ತದೆ. ಇಂತಹ ೩೩ ಕವಿತೆಗಳ ಸಂಗ್ರಹವಿದು. ವೇದನೆ-ನಿರಾಸೆ-ಅಂಜಿಕೆಗಳ ಮೂಟೆಯನ್ನೇ ಹೊತ್ತು ಹೊರಟಿರುವ ಇಲ್ಲಿನ ಮನಸ್ಸಿನ ತುಮುಲಗಳು ಸರಿಯಾದ ಜಾಗ ಸಿಕ್ಕಾಗ ಅವನ್ನೆಲ್ಲ ಕಿತ್ತೊಗೆದು ನಿರಾಳವಾಗಬಯಸುತ್ತವೆ.*

**ಅಮೆರಿಕ ಅಂತರಂಗ** (ಲೇಖನ ಸಂಗ್ರಹ)
*ಕೆ. ಗಿರೀಶ್*
**ಪುಟ : ೧೪೦ ಬೆಲೆ : ರೂ. ೬೦**
**ನಮ್ಮ ನಾಡು ಪ್ರಕಾಶನ, ಮೊದಲ ತಿರುವು, ಎನ್. ಟಿ. ರಸ್ತೆ, ಜೆ. ಸಿ. ನಗರ, ಶಿವಮೊಗ್ಗ - ೧**

*ಅಮೆರಿಕ ! ಈ ದೇಶ ಸ್ವರ್ಗಕ್ಕೆ ಕಿಚ್ಚು ಹಚ್ಚುವಂತಹ ನಾಡೆ ? ಅಥವಾ ತನ್ನ ನಿಗೂಢ ಕೈವಾಡಗಳಿಂದ ಇತರ ರಾಷ್ಟ್ರಗಳ ಮಧ್ಯೆ ದ್ವೇಷದ ಕಿಡಿ ಹೊತ್ತಿಸಿ ತನ್ಮೂಲಕ ಭೂಮಿಯ ಮೇಲೆ ಬೆಂಕಿ ಚೆಂಡುಗಳಿಂದ ಆಟವಾಡುತ್ತ ಭೂಲೋಕದ ಸಾವಿನ ಪ್ರತಿನಿಧಿಯಾಗಿರುವ ಅನಿಷ್ಟವೆ ? ಹೌದು, ಎರಡನೆಯದು ಸರಿ ! ಹೋದಲ್ಲೆಲ್ಲ ಕುತಂತ್ರ ಹೆಣೆಯುವ ಅದು ಪ್ರಪಂಚದ ಎಲ್ಲೆಡೆ ಎಸಗಿದ ಪಾತಕಗಳ ವಿವರ ಇಲ್ಲಿದೆ. ಖಂಡಿತ, ಅಮೆರಿಕವೊಂದಿಲ್ಲದಿದ್ದರೆ ಅಪಾರ ಸಂಖ್ಯೆಯ ಬಂದೂಕುಗಳ ಸಂಗ್ರಹವಾಗುತ್ತಿರಲಿಲ್ಲ. ಆಗಿದ್ದರೂ ಬಂದೂಕಿನ ಬಾಯಲ್ಲಿ ಗುಬ್ಬಿಯ ಗೂಡಿರುತ್ತಿತ್ತು.*

**ಗಾಂಧಿಯಿಂದ..... ಗಾವ್ಲಿ ತನಕ** (ಲೇಖನಗಳು)
*ಶ್ರೀನಿವಾಸ ಜೋಕಟ್ಟೆ*
**ಪುಟ : ೧೧೭ ಬೆಲೆ : ರೂ. ೬೦**
**ಅನ್ವೇಷಣೆ ಪ್ರಕಾಶನ, ೩೭/೨ ಎ, 'ನಿಸರ್ಗ' ನಾಗರಬಾವಿ ರಸ್ತೆ, ವಿಜಯನಗರ, ಬೆಂಗಳೂರು - ೫೬೦ ೦೪೦**

*ಕಣ್ತೆರೆದಲ್ಲೆಲ್ಲ ಅಸಹನೀಯ ಕೃತ್ಯಗಳೇ ಗೋಚರಿಸುತ್ತಿರುವ ಇಂದಿನ ಬದಲಾದ ಸಂಸ್ಕೃತಿಯ ಸಂದರ್ಭದಲ್ಲಿ ಕಣ್ಮುಚ್ಚಿ ಕೂರದೆ ಧೈರ್ಯವಾಗಿ ಪತ್ರಿಕಾ ಮಾಧ್ಯಮದ ಮೂಲಕ ಲೇಖನಗಳನ್ನು ಬರೆಯುತ್ತಿರುವ ಜೋಕಟ್ಟೆ ಅವರ ಹರಿತ ಲೇಖನಿಯಿಂದ ಮಾಹಿತಿಗಳ ಮಹಾಪೂರವೇ ಹರಿಯುತ್ತಿದೆ. ಅಪಾಯದತ್ತ ಹೊರಟಿರುವ ಸಂಗತಿಗಳ ಬಗ್ಗೆ ಆತಂಕ ವ್ಯಕ್ತಪಡಿಸುತ್ತಾ, ಅಪರಾಧ ಜಗತ್ತಿನ ಹಲವು ಮುಖಗಳ ಪರಿಚಯ ಮಾಡಿಸುತ್ತಾ ಇಂದು ನಾವಿರುವ ಪರಿಸರ-ಸಂಸ್ಕೃತಿ ಎಷ್ಟು ಮಲಿನವೆಂದು ಮನಗಾಣಿಸುತ್ತಾರೆ.*

**ತೌಲನಿಕ ದ್ರಾವಿಡ ಭಾಷಾ ವಿಜ್ಞಾನ**
*ಡಾ|| ಸಂಗಮೇಶ ಸವದತ್ತಿ ಮಠ*
**ಪುಟ : ೨೭೭ ಬೆಲೆ : ರೂ. ೧೨೦**
**ರೂಪರಶ್ಮಿ ಪ್ರಕಾಶನ, 'ಚಿನ್ಮಯ' ಸರಸ್ವತಿಪುರ, ಯೂನಿವರ್ಸಿಟಿ ಪೋಸ್ಟ್, ಗುಲಬರ್ಗಾ - ೫೮೫ ೧೦೬**

*ಭಾಷಾ ವಿಜ್ಞಾನದ ವಿದ್ಯಾರ್ಥಿಗಳಿಗೆ ಅತ್ಯುಪಯುಕ್ತ ನಿಖರ ಮಾಹಿತಿ ನೀಡಬಲ್ಲ ಈ ಗ್ರಂಥ ದ್ರಾವಿಡ ಭಾಷೆಗಳಿಗೆ ಸಂಬಂಧಿಸಿದಂತೆ ವಿಪುಲ ಮಾಹಿತಿಗಳನ್ನು ನೀಡುತ್ತದೆ. ಈ ಕ್ಷೇತ್ರದಲ್ಲಿ ಲೇಖಕರ ಸುದೀರ್ಘ ಅನುಭವ ಈ ಪುಸ್ತಕದುದ್ದಕ್ಕೂ ಹರಿದುಬಂದಿದೆ. ಕನ್ನಡ ಐ.ಎ.ಎಸ್. ಪರೀಕ್ಷೆಗೆ ಸಿದ್ಧತೆ ನಡೆಸುವ ವಿದ್ಯಾರ್ಥಿಗಳಿಗೆ ಪ್ರಯೋಜನವಾಗುವಂತೆ ಈ ಕೃತಿ ಆಮೂಲಾಗ್ರವಾಗಿ ವಿಷಯವನ್ನೊದಗಿಸುತ್ತದೆ. ದ್ರಾವಿಡ ಭಾಷಾ ಗುಂಪಿನ ವಿವಿಧ ಭಾಷೆಗಳ ಅಧ್ಯಯನ.*

**ಅಕ್ಕಡಿ ಕಾಳು** (ಚೌಪದಿಗಳು)
*ತೋಟದ ಮನೆ ಚೆನ್ನಬಸವಯ್ಯ*
**ಪುಟ : ೮೦ ಬೆಲೆ : ರೂ. ೩೫**
**ಹೊಂಬಾಳೆ ಪ್ರಕಾಶನ, ಹುಳಿಯಾರು**

*ಚೌಪದಿಗಳು ಅಥವಾ ಮುಕ್ತಕಗಳೆಂದು ಕರೆಸಿಕೊಳ್ಳುವ ಇಲ್ಲಿನ ನಾಲ್ಕು ಸಾಲಿನ ಪದ್ಯಗಳಲ್ಲಿ ಬಹಳಷ್ಟು ಕಿವಿಮಾತು-ಹಿತನುಡಿಗಳು ಅಡಕವಾಗಿವೆ. ಸರಳ ಆಡುಭಾಷೆಯಷ್ಟೇ ಪ್ರಭಾವಶಾಲಿಯಾದ ಹೇಳಿಕೆಗಳು ಹಾಸ್ಯ-ವ್ಯಂಗ್ಯಗಳಿಂದ ಮೊನಚಾಗಿದ್ದು ಬುದ್ಧಿವಾದದ ಎಳೆಯೊಂದು ಎಲ್ಲ ಕಡೆ ಹಾಸುಹೊಕ್ಕಾಗಿ ಬಂದಿದೆ. ಜೀವನ ಶ್ರದ್ಧೆ - ಪ್ರೀತಿ ಮೈಗೂಡಿಸಿಕೊಂಡ, ವೃತ್ತಿಯಲ್ಲಿ ಅಧ್ಯಾಪಕರಾದ ಲೇಖಕರು ಮೌಲಿಕ ಮಾತುಗಳನ್ನು ಮುಕ್ತಕಗಳ ಮೂಲಕ ನಮ್ಮೆಲ್ಲರಿಗೂ ಹೇಳಿದ್ದಾರೆ.*

- ಇಂದಿರಾಕುಮಾರಿ

# ಕಾರಂತರ ಬದುಕು-ಬರಹದಲ್ಲಿ ಪರಿಸರ ಪ್ರಜ್ಞೆ

**ವಿ. ಚಂದ್ರಶೇಖರ ನಂಗಲಿ**



**ಕಾ**ರಂತರನ್ನು ಕುರಿತು ಧ್ಯಾನಿಸುವಾಗ ನನಗೆ ಕಲಾವಿದ ಹೆಬ್ಬಾರರು ಬಿಡಿಸಿರುವ 'ನಟರಾಜ'ನನ್ನು ನೆನಪಿಸುವ ಶಿವರಾಮ ಕಾರಂತರ ರೇಖಾಚಿತ್ರ ಮನದಲ್ಲಿ ಮೂಡುತ್ತದೆ. ಕಾರಂತರ ಪ್ರಿಯಮಿತ್ರರಾದ ಹೆಬ್ಬಾರರು ಕೆಲವೇ ರೇಖೆಗಳಲ್ಲಿ ಕಾರಂತ ಪ್ರತಿಭೆಯ ಶಕ್ತಿ ಮತ್ತು ಕಾಂತಿಗಳನ್ನು ಬಿಡಿಸಿರುವುದು ಅವಿಸ್ಮರಣೀಯವಾಗಿದೆ.

ಕಾರಂತರ 'ಸಂಚಾರದ ಹವ್ಯಾಸ' ಎಲ್ಲರಿಗೂ ಗೊತ್ತಿದೆ. ಕವಿ ಕುವೆಂಪು ಅವರು ಹೇಳುವ ವಿಶ್ವಮಾನವ ಪ್ರಜ್ಞೆ, ಶಿವರಾಮ ಕಾರಂತರು ಬಿತ್ತರಿಸುವ 'ಸಂಚಾರ ಪ್ರಜ್ಞೆ'ಗಳು ಕನ್ನಡ ಸಂಸ್ಕೃತಿಯ ವಿಶಿಷ್ಟ ವಿಚಾರಗಳೆನ್ನಬಹುದು. 'ಕಾರಂತರು ಎಲ್ಲಿದ್ದರೂ ಕಾರಂತರೇ' ಎಂಬುದಕ್ಕೆ ಈ ನಿದರ್ಶನವನ್ನು ಗಮನಿಸಿ: ಜಪಾನ್ ಪ್ರವಾಸದಲ್ಲಿದ್ದಾಗ ಅಲ್ಲಿನ ಮಾರ್ಗದರ್ಶಿಯು ಮೀನು ಶಿಕಾರಿಗೆ ಬಳಸುವ ಜಲಚರ ಪಕ್ಷಿಯ ಹೆಸರು ನೆನಪಿಗೆ ಬರದೆ ಚಡಪಡಿಸುತ್ತಿರುತ್ತಾನೆ. ಆಗ ಕಾರಂತರು ಆ ಪಕ್ಷಿಯ ಹೆಸರು *ಕಾರ್ಮೊರಾಂಟ್* ಎಂದು ತಟ್ಟನೆ ಹೇಳಿಬಿಡುತ್ತಾರೆ. ಈ ಜಲಚರ ಪಕ್ಷಿಯ ಕೊರಳಿಗೆ ಒಂದು ಉಂಗುರವನ್ನು ತೊಡಿಸುವ ಜಪಾನೀಯರು ಅದಕ್ಕೆ ಮೀನು ಹಿಡಿದು ತರುವ ತರಪೇತಿ ಕೊಟ್ಟಿರುತ್ತಾರೆ. ಉಂಗುರದಿಂದಾಗಿ ದೊಡ್ಡಗಾತ್ರದ ಮೀನುಗಳನ್ನು ಜಠರಕ್ಕೆ ಕಳುಹಿಸಲಾಗದೆ ತನ್ನ ಒಡೆಯನ ಬಳಿಗೆ ಹಿಂದಿರುಗಿ ಬರುವ 'ಕಾರ್ಮೊರಾಂಟ್ ಮೀನು ಶಿಕಾರಿ' ಜಪಾನ್ ದೇಶದಲ್ಲಿ ಪ್ರಚಲಿತವಾಗಿದೆ. ಇದನ್ನು ಬಲ್ಲ ಕಾರಂತರು ಜಪಾನಿನ ಮಾರ್ಗದರ್ಶಿಗೆ ಆ ಪಕ್ಷಿಯ ಹೆಸರು ನೆನಪಿಸಿಕೊಟ್ಟು ತಮ್ಮ ವಿಸ್ತಾರವಾದ ಪರಿಸರ ಜ್ಞಾನವನ್ನಿಲ್ಲಿ ಬಿಂಬಿಸಿದ್ದಾರೆ. ಇದೊಂದು ಸಣ್ಣ ನಿದರ್ಶನ ಮಾತ್ರ !

'ಬೆಟ್ಟದ ಜೀವ' ಕಾದಂಬರಿಯಲ್ಲಿ ''ಕಾಟಿ, ದುಡ್ಡುಗಳ ಉಪದ್ರ''ವೆಂಬ ಮಾತು ಬರುತ್ತದೆ. ಕಾಟಿ, ದುಡ್ಡುಗಳನ್ನು ಪ್ರತ್ಯಕ್ಷವಾಗಿಯೋ ಅಥವಾ ಚಿತ್ರದ ಮೂಲಕವೋ ಕಂಡಂಥ ಸಹೃದಯರಿಗೆ ಅವುಗಳ ಸ್ಮೃತಿ ಚಿತ್ರ ಮನದಲ್ಲಿ ಮೂಡುತ್ತದೆ. ಕಾಟಿ, ದುಡ್ಡುಗಳ ಪರಿಚಯವೇ ಇಲ್ಲದವರ ಪಾಲಿಗೆ ಅವು ಬರಿಯ ಶಬ್ದಗಳಷ್ಟೆ! ಕಾದಂಬರಿಯ ಕಥನವನ್ನು ಗ್ರಹಿಸುವ ದೃಷ್ಟಿಯಿಂದ, ಕಾಟಿ, ದುಡ್ಡುಗಳ ಸ್ಮೃತಿಚಿತ್ರವೊಂದು ಓದುಗರ ಮನದಲ್ಲಿ ಮೂಡುವುದು ಅತ್ಯಗತ್ಯವೆಂದು ನಾನಿಲ್ಲಿ ಪ್ರತಿಪಾದಿಸುತ್ತಿಲ್ಲ, ಆದರೆ, ಕಥನಕ್ಕೆ ಹಿನ್ನೆಲೆಯಾಗಿರುವ ಸಾಮಾಜಿಕ ಪರಿಸರ ಮತ್ತು ಸ್ಥಳೀಯ ಭೂಗೋಳದ ವಿವರಗಳು ಶಾಬ್ದಿಕ ಕಥನವೊಂದು ಓದುಗರ ಅನುಭವದಲ್ಲಿ ಪುನರ್ ಸೃಷ್ಟಿಯಾಗಲು ಅಗತ್ಯವಾದ ಪರಿಕರಗಳಾಗಿರುತ್ತವೆಯೆಂದು ನಾನು ನಂಬಿದ್ದೇನೆ. ಈ ದೃಷ್ಟಿಯಿಂದ ಕುವೆಂಪು ಮತ್ತು ಕಾರಂತರ ಕಾದಂಬರಿಗಳನ್ನೋದುವ ಸಹೃದಯರಿಗೆ ಮಲೆನಾಡು ಮತ್ತು ಕರಾವಳಿ ಬದುಕಿನ ಪ್ರತ್ಯಕ್ಷ ಜ್ಞಾನವು ಅತ್ಯಗತ್ಯವಾಗಿದೆ.

ಕಾರಂತರಲ್ಲಿ ಸಾಮಾಜಿಕ ಕಾಳಜಿ ಮತ್ತು ಪರಿಸರ ಪ್ರಜ್ಞೆಗಳು ಪ್ರತ್ಯೇಕಿಸಲ್ಪಟ್ಟ ಎರಡು ದಡಗಳಲ್ಲ! ಇವು ಒಂದರೊಳಗೊಂದು ಬೆರೆತುಹೋದ 'ಅಖಂಡ ದರ್ಶನ'ವಾಗಿರುವುದನ್ನು ಈ ಮೂರು ಕಾದಂಬರಿಗಳಿಂದ ಮನಗಾಣಬಹುದು: ಚೋಮನ ದುಡಿ (೧೯೩೩), ಮರಳಿ ಮಣ್ಣಿಗೆ (೧೯೪೧), ಬೆಟ್ಟದ ಜೀವ (೧೯೪೩). ಇವನ್ನು ನಾನು ತ್ರಿವಳಿ ಕಥನಗಳೆಂದು ಕರೆಯಲಿಚ್ಛಿಸುತ್ತೇನೆ. ಕಾರಂತರ ಕಥನಗಳ ವಿಶಿಷ್ಟತೆಯನ್ನು ಪರಿಭಾವಿಸು ತ್ತಿದ್ದರೆ, ನನಗೆ ಅಲ್ಲಮ ಪ್ರಭುಗಳ ವಚನವೊಂದು ನೆನಪಾಗುತ್ತಿದೆ : ''ಬೆಂಕಿಯೊಳಗುಳ್ಳ ಗುಣ ಬಿಸಿ ನೀರಲುಂಟೆ ?'' ಬೆಂಕಿಯು ಒರಿಜಿನಲ್ ! ಬಿಸಿ ನೀರು ಡೂಪ್ಲಿಕೇಟ್ ! ಕುದಿಯುತ್ತಿರುವ ಬಿಸಿನೀರು ಕ್ರಮೇಣ ತಣ್ಣಗಾಗಿಬಿಡುತ್ತದೆ. ಆದರೆ, ಬೆಂಕಿಯು (=ಪಂಚಭೂತಗಳಲ್ಲಿ ಒಂದಾದ ಅಗ್ನಿ) ಸದಾ 'ಬೆಂಕಿ'ಯಾಗಿಯೇ ಇರುತ್ತದೆ. ಶರಣನಾದವನು ಬಿಸಿ ನೀರಾಗದೆ, ಬೆಂಕಿಯಂತೆ ಉಜ್ವಲವಾಗಿರಬೇಕೆಂಬ ಭಾವವಿಲ್ಲಿದೆ. ಕಾರಂತರ ಕಥನಗಳು ಅನ್ಯರೊರೆದ ಮತ್ತು ಬರೆದುದನೆ ಬರೆದ ಕಥನಗಳಲ್ಲ. ಇವು ಒರಿಜಿನಲ್ ! ಚೋಮನ ಅನಾಥಪ್ರಜ್ಞೆ, ಪಾರೋತಿ-ಸರಸೋತಿ-ನಾಗವೇಣಿಯರ ಒಂಟಿತನ ಮತ್ತು ದಾರುಣತೆ, ಗೋಪಾಲಯ್ಯನವರ ನಿಸರ್ಗ ಸನ್ನಿಧಿ, ಶಂಭು-ಲಚ್ಚರ ಮೋಹಕ ಮಾಯೆ – ಇವೆಲ್ಲ ಒರಿಜಿನಲ್ ಮತ್ತು ಈ ನೆಲದ ಕಥನಗಳಾಗಿವೆ. ಕಾರಂತರು ಅಧ್ಯಯನ ಮಾರ್ಗಕ್ಕಿಂತಲೂ ಅನುಭವಕ್ಕೆ ತೆರೆದುಕೊಂಡವರು. ಅನುಭವದಿಂದ ಪ್ರಾಪ್ತವಾಗುವ ಪ್ರತ್ಯಕ್ಷಜ್ಞಾನವು ಅಧ್ಯಯನದ ಸೀಮೆಯನ್ನು ಸದಾ ವಿಸ್ತರಿಸುತ್ತಿರುತ್ತದೆ. ಆದರೆ, ಕೇವಲ ಅಧ್ಯಯನಕ್ಕೆ ಮಾತ್ರ ಬದ್ಧರಾದವರು ''ಓದಿ ಓದಿ ಮರುಳಾದ ಕೂಚುಭಟ್ಟ'' ಎಂಬಂತೆ ದಟ್ಟವಾದ ಜೀವನಾನುಭವಗಳಿಲ್ಲದೆ ಶುಷ್ಕ ಪಾಂಡಿತ್ಯಕ್ಕೆ ನಿದರ್ಶನವಾಗಿಬಿಡುತ್ತಾರೆ.

ಮೇಲೆ ಹೇಳಿದ ಕಾರಂತರ ಕಥನಗಳನ್ನು 'ತ್ರಿವಳಿ' ಯೆಂದು ಗುರುತಿಸುತ್ತಿರುವುದು ಅವು ಪ್ರತಿಪಾದಿಸುತ್ತಿರುವ ಸಮಗ್ರ ದರ್ಶನಕ್ಕಾಗಿ. ಕಾರಂತರ ಕಾದಂಬರಿಗಳನ್ನು ಪ್ರತ್ಯೇಕವೆಂಬಂತೆ ಬಿಡಿಬಿಡಿಯಾಗಿ ನೋಡುವವರಿಗೆ ಕಾರಂತರ ಅಖಂಡ ಕಾಣ್ಕೆಯು ಬೋಧೆಯಾಗದು. ಕನ್ನಡ ಭಾಷೆ, ನಿಸರ್ಗ ಪರಿಸರ, ದಲಿತರು, ಹೆಂಗಸರು – ಇದನ್ನೆಲ್ಲ ಒಟ್ಟೊಟ್ಟಿಗೆ ಗ್ರಹಿಸಿರುವ ಕಾರಂತರ ಕಥನಗಳ ಮರು-ವಿಮರ್ಶೆ, ಮರುಚಿಂತನೆ ಈ 'ನೂರು' ವರ್ಷಗಳ ನಂತರವಾದರೂ ಸಮರ್ಪಕವಾಗಿ ನಡೆಯಬೇಕು. 'ಬೆಟ್ಟದ ಜೀವ' ಕಾದಂಬರಿಯಿಂದ ಆಯ್ದ ಈ ಸಾಲುಗಳನ್ನು ಗಮನಿಸಿರಿ :

**ಗೋಪಾಲಯ್ಯ** : ನನ್ನ ಶಂಭುವನ್ನು ಇಂಗ್ಲಿಷು ಶಾಲೆಯೊಂದಕ್ಕೆ ಹಾಕಿದೆ. ಓದುವುದಕ್ಕೆಂದು ಪುತ್ತೂರಿಗೆ ಹೋದ. ಓದುತ್ತ ಹೋದಂತೆ, ಅವನು ಮನೆಗೆ ಬರುವುದೇ ಕಡಿಮೆಯಾಯಿತು. (ಪು. ೨೯)

**ಶಂಕರಮ್ಮ** : ಅವನನ್ನು ಶಾಲೆಗೆ ಕಳುಹಿಸದೆಯೇ ಇರುತ್ತಿದ್ದರೆ, 'ಇದೇ ಸ್ವರ್ಗ' ಎಂದಿರುತ್ತಿದ್ದನೋ ಏನೋ. ಪೇಟೆಯ ಹವೆ ಒಂದು ಸಾರಿ ಹಿಡಿಯಿತೆಂದರೆ ಈ ಕೊಂಪೆ, ದಿನಕ್ಕೆ ಬೇಡವಾಗುತ್ತದೆ. (ಪು. ೧೭)

ಇಂಗ್ಲಿಷ್ ಮೋಹದಿಂದ ನಿರ್ಲಕ್ಷಿತವಾಗುತ್ತಿರುವ ಕನ್ನಡ ಭಾಷೆ, ನಗರ ಜೀವನದ ಆಕರ್ಷಣೆಯಿಂದ ಕೊಂಪೆಯಾಗಿ ಕಾಣುತ್ತಿರುವ ಹಳ್ಳಿಗಾಡುಗಳು, ಲಿಂಗಾಧಾರಿತ ಅಸಮಾನತೆಯಿಂದ ನರಳುತ್ತಿರುವ ಸ್ತ್ರೀ ಸಂಕುಲ, ಜನ್ಮಾಧಾರಿತ ಅಸಮಾನತೆಯಿಂದ ಅವಮಾನಿತರಾಗಿರುವ ದಲಿತರು – ಇವರನ್ನೆಲ್ಲ ಅಖಂಡವಾಗಿ ಗ್ರಹಿಸಿ ನಿರೂಪಿಸಿರುವ ಕಾರಂತರ ಕಥನಗಳನ್ನು ವಿಮರ್ಶಿಸುವಾಗ ಬಿಡಿ ಬಿಡಿಯಾಗಿ ನೋಡಬಾರದು. ನಮ್ಮ ದೇಶದ ಕಹಿ ಸತ್ಯಗಳು ಅಥವಾ ಕಾರಂತರ ಕಥನಗಳ ಪ್ರಧಾನ ಆಶಯಗಳು ಹೀಗಿವೆ.

– ಶಿಕ್ಷಿತರಾಗುವುದೆಂದರೆ ಕನ್ನಡದಿಂದ ದೂರ ಸರಿಯುವುದು.

– ನಾಗರಿಕರಾಗುವುದೆಂದರೆ ನಿಸರ್ಗದಿಂದ ದೂರ ಸರಿಯುವುದು.

– ಕುಲಜರಾಗುವುದೆಂದರೆ ಕುಲ ಹೀನರನ್ನು ಅಪಮಾನಿಸುವುದು.

– ಪುರುಷರಾಗುವುದೆಂದರೆ ಹೆಂಗಸರನ್ನು ಕೀಳುಗಳೆಯುವುದು.

ಚೋಮನ ದುಡಿ, ಮರಳಿ ಮಣ್ಣಿಗೆ ಕಾದಂಬರಿಗಳನ್ನು ಕನ್ನಡದಲ್ಲಿ ವಿಶೇಷವಾಗಿ ಚರ್ಚಿಸಲಾಗಿದೆ. ಬಹುಶಃ ಸಾಮಾಜಿಕ ವಿಮರ್ಶೆ ಮತ್ತು ಸ್ತ್ರೀ ವಾದಿ ವಿಮರ್ಶೆಗಳ ರಭಸಮತಿಯೂ ಇದಕ್ಕೆ ಕಾರಣವಿರಬಹುದು. ಆದರೆ, 'ಬೆಟ್ಟದ ಜೀವ' ಗೋಪಾಲಯ್ಯನವರ 'ನಿಸರ್ಗ ಸನ್ನಿಧಿ'ಯ ನೆಲೆ-ಬೆಲೆಗಳನ್ನು ಸೂಕ್ಷ್ಮ ಚಿಂತನೆಗೆ ಒಳಪಡಿಸಿಲ್ಲ.

''ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೇ ವಿಮರ್ಶೆ'' – ಎಂಬಂತೆ ನಮ್ಮ ಬಹುಮಂದಿ ವಿಮರ್ಶಕರು ಶಂಭುವಿನ ಬಗ್ಗೆ ಹೆಚ್ಚು ಚಿಂತನ-ಮಂಥನ ನಡೆಸಿದ್ದಾರೆ. ನನ್ನ ಕಣ್ಣಿಗೆ, ಗೋಪಾಲಯ್ಯ-ಶಂಕರಮ್ಮ- ಶಂಭು ಎಂಬ ತ್ರಿಕೋನಕ್ಕಿಂತಲೂ ಗೋಪಾಲಯ್ಯ-ಶಂಕರಮ್ಮ-ನಿರೂಪಕ ಶಿವರಾಮಯ್ಯ ಎಂಬ ತ್ರಿಕೋನ ಬಹುಮುಖ್ಯವೆನಿಸುತ್ತದೆ. ಗೋಪಾಲಯ್ಯ ಮತ್ತು ನಿರೂಪಕ ಶಿವರಾಮಯ್ಯರನ್ನು ಕರ್ವಾಲೋ ಕಾದಂಬರಿಯ ಮಂದಣ್ಣ ಮತ್ತು ನಿರೂಪಕರ ಜೊತೆಗಿಟ್ಟು ಪರಿಶೀಲಿಸಬಹುದು.

ಜೇನಿನ ಬಗ್ಗೆ ಏನೂ ತಿಳಿಯದ, ಜೇನುಹುಳುಗಳೆಂದರೆ ಎಕ್ಕಡದಲ್ಲಿ ಹೊಡೆದು ಸಾಯಿಸಬೇಕಾದ ಕ್ಷುದ್ರಕೀಟಗಳೆಂದು ತಿಳಿದಿದ್ದ ನಿರೂಪಕನು ಕ್ರಮೇಣ ಮಂದಣ್ಣ ಮತ್ತು

ಕರ್ವಾಲೋ ಒಡನಾಟದಿಂದ ಬದಲಾಗುತ್ತಾನೆ. ಜೇನಿನ ಬಗ್ಗೆ ಹೊಂದಿದ್ದ ಅಂಜಿಕೆ ಮತ್ತು ಅರಣ್ಯ ಕುರಿತ ಅಜ್ಞಾನಗಳಿಂದ ಕ್ರಮಕ್ರಮೇಣ ಪಾರಾಗುತ್ತಾ ಬರುವ ನಿರೂಪಕನ ವ್ಯಕ್ತಿತ್ವ ಇಲ್ಲಿ ಗಮನಾರ್ಹ! ಕಳುವಾದ ತನ್ನ ಹಸುವನ್ನು ಹುಡುಕುತ್ತಾ ದಾರಿತಪ್ಪಿ, ಗೋಪಾಲಯ್ಯನವರ ಬಳಿಗೆ ಬರುವ ನಿರೂಪಕ ಶಿವರಾಮಯ್ಯ ಆರಂಭದಲ್ಲಿ ಅಂಜುಕುಳಿಯೂ, ಸಂಕ ದಾಟಲಾಗದ ದುರ್ಬಲನಾಗಿಯೂ ಕಾಣಿಸುತ್ತಾನೆ : ''ಎದುರಿಗೊಂದು ನೀರಿನ ತೋಡಿತ್ತು. ಅದನ್ನು ದಾಟಲು ನೀಳವಾದ ಎರಡು ಅಡಿಕೆ ಮರಗಳನ್ನು ಹಾಸಿ ಸೇತುವೆ ಮಾಡಿದ್ದರು. ಅಯ್ಯಾ, ಜಾಗ್ರತೆ ! ಎಂದ ದೇರಣ್ಣ. ದೇರಣ್ಣ, ಜಿಮುಕು ಜಿಮುಕು ಕುಣಿಯುವ ಆ ಅಡಿಕೆ ಮರದ ಸೇತುವೆಯ ಮೇಲೆ ಜಿಗಿದು ಸರಿದ. ನಾನು ಜೀವ ಹಿಡಿದು ನಿಂತೆ; ಕುಳಿತೆ; ಕೊನೆಗೆ ಚತುಷ್ಪಾದ ಪ್ರಾಣಿಯಂತೆ ಅತೀವ ಸಾಹಸದಿಂದ ಆ ನಾಲ್ಕು ಗಜ ದೂರವನ್ನು ದಾಟಿ, ತಿರುಗಿ ಮನುಷ್ಯನಾದೆ'' (ಪು. ೪). ಆರಂಭದಲ್ಲಿ ಹೀಗಿದ್ದ ನಿರೂಪಕನು ಕ್ರಮೇಣ ನಿಸರ್ಗ ಸನ್ನಿಧಿ ಮತ್ತು ಗೋಪಾಲಯ್ಯನ ಒಡನಾಟದಿಂದಾಗಿ ಪರಿವರ್ತನೆಯಾಗುತ್ತಾನೆ. ಈತನೊಬ್ಬನೇ ಕಾಡಿನಲ್ಲಿ ಓಡಾಡುವ ಮತ್ತು ಕಾಟು ಮೂಲೆಯಲ್ಲಿರುವ ನಾರಾಯಣನನ್ನು ಒಂಟಿಯಾಗಿಯೇ ಭೇಟಿ ಮಾಡಿಕೊಂಡು ಬರುವ ವಿವರಗಳು ಕಾದಂಬರಿಯಲ್ಲಿದೆ. ಕಾರಂತರು ನಿರೂಪಿಸಿರುವಂತೆ ನಿಸರ್ಗ ಸನ್ನಿಧಿಯಲ್ಲಿ ಪ್ರಾಪ್ತವಾಗುವ ಈ ತನುಮನ ಪಟುತೆ ಗಮನಾರ್ಹ !

ಬಾಲದಲ್ಲಿ ಬೆಳಕು ಬೀರುವ ಗ್ಲೋವರ್ಮ್, ಹಾರುವ ಓತಿಗಳ ಚಲನ-ವಲನ, ಜೀವನ ಕ್ರಮಗಳನ್ನು ಬಲ್ಲ ಮಂದಣ್ಣನು ಒಬ್ಬ ನ್ಯಾಚುರಲಿಸ್ಟ್. ನಿಜವಾದ ಅರ್ಥದಲ್ಲಿ ಬೆಟ್ಟದ ಜೀವವೇ ಆಗಿರುವ ಗೋಪಾಲಯ್ಯ ಕೂಡ ನ್ಯಾಚುರಲಿಸ್ಟ್. ಶಿವರಾಮಯ್ಯನ ಜೊತೆ ನಡೆಯುತ್ತಿರುವಾಗ ಗೋಪಾಲಯ್ಯ ಹೇಳುವ ಮಾತಿದು : ''ಈ ಹಪ್ಪಳ ಕರಿದ ವಾಸನೆಯುಂಟಲ್ಲ; ಅದು ಕನ್ನಡಿ ಹಾವಿನದ್ದು'' (ಪು. ೨೦). ವಾಸನಾಬಲದಿಂದಲೇ ಕನ್ನಡಿ ಹಾವಿನ ಅಸ್ತಿತ್ವವನ್ನು ಗುರುತಿಸಬಲ್ಲ ಗೋಪಾಲಯ್ಯನು ಮಂದಣ್ಣನಂತೆಯೇ ಪಕ್ಕಾ ನ್ಯಾಚುರಲಿಸ್ಟ್! ಇಂಥ ಕಾಡು ಜ್ಞಾನಕ್ಕೆ ಜಾತಿ ಗೋಡೆಗಳೆಂದೂ ಅಡ್ಡವಲ್ಲವೆಂಬುದನ್ನಿಲ್ಲಿ ಮನಗಾಣಬೇಕಾಗಿದೆ.

'ಬೆಟ್ಟದ ಜೀವ' ಕಾದಂಬರಿಯಲ್ಲಿ ಗೋಪಾಲಯ್ಯ ಮತ್ತು ನಿರೂಪಕ ಶಿವರಾಮಯ್ಯನ (= ಶಂಭು ಕೂಡ) ಸಂಬಂಧಗಳಲ್ಲಿ ಪ್ರಕಟಗೊಳ್ಳುವ ಗ್ರಾಮೀಣ-ನಗರೀಯ, ಬೆವರು ಸಂಸ್ಕೃತಿ - ಕುರ್ಚಿ ಸಂಸ್ಕೃತಿಯ ಸಂಘರ್ಷಗಳನ್ನು ಮರೆಯಬಾರದು. ಈ ಸಂವಾದ ಗಮನಿಸಿ:

**ಗೋಪಾಲಯ್ಯ** : ನಿತ್ಯವೂ ಇವನ್ನೇ ನೋಡುತ್ತ ಎಲ್ಲೋ ತಿರುಗಾಡುತ್ತಿರುವ ನಮಗೆ ಇದು ಬರಿಯ ಬೆಟ್ಟ. ಏನೋ, ಪೇಟೆಯಿಂದ ಬರುವ ನಿಮ್ಮಂಥವರು ಅದರ ಚಂದವನ್ನು ಬಣ್ಣಿಸಿದರೇನೆ ಅದು ಚಂದವೆಂದು ನಮಗೆ ತಿಳಿಯಬೇಕು. ಆ ಕಣ್ಣು ಪೇಟೆಯವರಿಗಿರದೆ ನಮಗೆಲ್ಲಿದೆ ?

**ಶಿವರಾಮಯ್ಯ** : ಹಾಗೇನಿಲ್ಲ; ಪೇಟೆಯವರಿಗೂ ಇಂಥ ಬೆಟ್ಟದ ನೋಟಗಳು ಬೇಕಾಗಿಲ್ಲ. ಅವರಿಗೆ ರೂಪಾಯಿ ನೋಟುಗಳನ್ನು ಕಂಡರೆ ಕುಮಾರ ಪರ್ವತದಷ್ಟು ದೊಡ್ಡದಾಗಿ ಕಾಣುತ್ತವೆ.

**ಗೋಪಾಲಯ್ಯ** : ನಿಜ ! ಪೇಟೆಯಲ್ಲಿ ಕಾಸಿಲ್ಲದೆ ಯಾವುದೂ ಆಗುವುದಿಲ್ಲ; ಅಲ್ಲಿ ದುಡ್ಡೇನೆ ದೊಡ್ಡಪ್ಪ. ಆದರೆ ಹಳ್ಳಿಯವರಿಗೂ ಹಣ ಬೇಡವೆಂದಲ್ಲ; ರೂಪಾಯಿ ನೋಟು ಕಹಿಕುತ್ತದೆಂದಲ್ಲ. ಆದರೆ ಎಷ್ಟೋ ಸಂಗತಿಗಳಲ್ಲಿ ದುಡ್ಡಿಲ್ಲದೆಯೂ ಇಲ್ಲಿ ನಡೆಯುತ್ತದೆ. ಇಲ್ಲಿ ಬೇಕಾದ ಒಡವೆಗಳನ್ನೆಲ್ಲಾ ನಾವೇ ಬೆಳೆಯಿಸುತ್ತೇವೆ. ಊರಲ್ಲಿ ನಮಗೆ ಹಣದ ಅವಶ್ಯಕತೆಯಿರುವುದಿಲ್ಲ, ಪೇಟೆಯ ಹಂಗೂ ಕಡಿಮೆ. (ಪು. ೨೧)

ಮತ್ತೊಂದು ಸಂವಾದ ಭಾಗ ಹೀಗಿದೆ :

**ಗೋಪಾಲಯ್ಯ** : ನಿಮ್ಮ ಈ ಪ್ರಾಯದಲ್ಲಿ ನಾನು ಕಲ್ಲು ತಿಂದು ಕರಗಿಸುತ್ತಿದ್ದೆ.

**ಶಿವರಾಮಯ್ಯ** : ನೀವು ಹಗಲೆಲ್ಲ ಮೈಗೆಲಸ ಮಾಡಿ ದುಡಿಯುವವರು. ಎಷ್ಟು ಉಂಡರೂ ಜೀರ್ಣವಾಗಬಹುದು. ನಾನೋ, ಕೂತಲ್ಲೇ ಕೂತಿರುವ ಬರಿಯ ಕುರ್ಚಿಯ ರಾವುತ. ಇಷ್ಟನ್ನು ತಿಂದರೇನೆ ಅರಗಿಸುವುದು ಕಷ್ಟ! (ಪು. ೩೩).

ಇಂಥ ಸಂವಾದಗಳು ಮತ್ತು ತತ್ಸಂಬಂಧಿಯಾದ ವರ್ಣನೆಗಳು ಇದುವರೆಗಿನ ಕನ್ನಡ ವಿಮರ್ಶೆಯಲ್ಲಿ ಅಲಕ್ಷಿತ ವಿವರಗಳಾಗಿವೆ. ಕಾರಂತರ ಕಥನಗಳನ್ನು ಬಿಡಿ ಬಿಡಿಯಾಗಿ ಕಂಡು ತಮ್ಮದೇ ಆದ ಅಪೇಕ್ಷೆಗಳಿಗನುಗುಣವಾಗಿ ವಿಮರ್ಶಿಸುವವರಿಗೆ ಇಂಥ 'ಅಲಕ್ಷಿತ ವಿವರಗಳು' ಮುಖ್ಯವೆನಿಸುವುದಿಲ್ಲ. **ಕಾರಂತರ ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ, ಜಾನಪದ ಪ್ರಜ್ಞೆ, ಸ್ತ್ರೀವಾದಿ ಪ್ರಜ್ಞೆ, ಪರಿಸರ ಪ್ರಜ್ಞೆ ಎಂಬಂಥ ಕಂಪಾರ್ಟ್‌ಮೆಂಟಲೀಕರಣ ಒಳ್ಳೆಯದಲ್ಲ. ಇವೆಲ್ಲ ಜಟಕಾ ಕುದುರೆಯ ನೋಟಗಳಾಗಿ ಮುಂಬರುವ ತಲೆಮಾರುಗಳ ಕಟುವಿಮರ್ಶೆಗೆ ಗುರಿಯಾಗುತ್ತವೆ.**

ಚೋಮನ ದುಡಿ - ಬೆಟ್ಟದ ಜೀವ - ಮರಳಿ ಮಣ್ಣಿಗೆ ಈ ತ್ರಿವಳಿ ಕಥನಗಳನ್ನು ಒಟ್ಟಿಗೆ ನೋಡಿದಾಗ ನಮ್ಮ ಮನಸ್ಸಿನಲ್ಲಿ ಮೂಡಿಕೊಳ್ಳುವ 'ಗ್ರಾಮಭಾರತ' ಮತ್ತು 'ನಗರಭಾರತ'ಗಳ ದರ್ಶನ ಅಪೂರ್ವವಾದುದು. ಆಗಲೇ ಪ್ರಸ್ತಾಪಿಸಿದಂತೆ, ಬಿಡಿಬಿಡಿಯಾಗಿ ನೋಡದೆ ಇಡಿಯಾಗಿ ನೋಡಿದಾಗ ಒಂದು ಪಾತ್ರದೊಂದಿಗೆ ಮತ್ತೊಂದು ಪಾತ್ರವು ಬೆರೆತುಹೋಗುತ್ತದೆ. ಉದಾಹರಣೆಗೆ, ನಗರದ ಮೋಹಕ ಮಾಯೆಗೊಳಗಾಗುವ ಶಂಭು-ಲಚ್ಚ, ನಿಸರ್ಗ ಸನ್ನಿಧಿಯ ಗೋಪಾಲಯ್ಯ- ಮರಳಿ ಮಣ್ಣಿಗೆ ಬರುವ ರಾಮ ಐತಾಳ, ಬೆಟ್ಟದ ಜೀವದ ಬಟ್ಯ, ಚೋಮ, ಬೆಳ್ಳಿ, ಸೂರ, ಬಚ್ಚಿ, ಬೆಟ್ಟದ ಜೀವದ ಶಂಕರಮ್ಮ-ಪಾರೋತಿ, ಸರಸೋತಿ-ನಾಗವೇಣಿ ಇತ್ಯಾದಿ. ಇವರೆಲ್ಲ ಈ ತ್ರಿವಳಿ ಕಥನಗಳಲ್ಲಿ ಬರುವ ಸಹಚರರು !

'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿ ಕಡಲು ಕೂಡ ಒಂದು ವ್ಯಕ್ತಿತ್ವದಂತೆ ನಿರೂಪಿತವಾಗಿರುವುದನ್ನೂ, ರಾಮನಿಗೂ ಕಡಲಿಗೂ ಇರುವ ತಾದಾತ್ಮ್ಯವನ್ನೂ ಎಲ್ಲರೂ ಗಮನಿಸಿದ್ದಾರೆ. ಈ ಕುರಿತ ಸಂಭ್ರಮವೇ ಶಿವರಾಮ ಕಾರಂತರಿಗೆ 'ಕಡಲ ತೀರದ ಭಾರ್ಗವ' ಎಂಬ (ಅಪ)ಖ್ಯಾತಿ ತಂದಿರಬಹುದೆನಿಸುತ್ತದೆ. ಆದರೆ ಕಡಲಿಗೆ ಸಂಬಂಧಿಸಿದಂತೆ 'ಮರಳಿ ಮಣ್ಣಿಗೆ' ಕಾದಂಬರಿಯಲ್ಲಿರುವ ಸೂಕ್ಷ್ಮ ವಿಚಾರವೊಂದು ತುಂಬಾ ಪ್ರಸ್ತುತವೆನಿಸುತ್ತದೆ. ಈ ಕಾದಂಬರಿಯಲ್ಲಿರುವ ಕಡಲುಗಳ ವರ್ಣನೆ ಏಕರೂಪಾತ್ಮಕವಲ್ಲ! ಉದಾಹರಣೆಗೆ ಕೋಡಿಯ ಕಡಲು, ಮದ್ರಾಸ್ ಕಡಲು, ಚೌಪಾಟಿ ಕಡಲು – ಇವುಗಳ ವರ್ಣನೆಯನ್ನು ಗಮನಿಸಬೇಕು. ಕಡಲನ್ನೇ ಮೈದುಂಬಿಕೊಳ್ಳುವ ರಾಮ ಐತಾಳನಿಗೆ ಕೋಡಿಯ ಕಡಲು ಆಪ್ತವಾಗುವಂತೆ ಮದ್ರಾಸ್ ಕಡಲು, ಚೌಪಾಟಿ ಕಡಲು ಆಪ್ತವಾಗುವುದಿಲ್ಲ. ಈ ಕಡಲುಗಳ ಮೂಲಕ 'ಗ್ರಾಮ ಭಾರತ' ಮತ್ತು 'ನಗರ ಭಾರತ'ಗಳ ಸಂಘರ್ಷ ಮತ್ತು ವೈರುಧ್ಯಗಳನ್ನು ಕಾರಂತರು ಮನಗಾಣಿಸಿದ್ದಾರೆ :

''ಚೌಪಾಟಿಯ ಕಡಲ ನೀರು ಕೊಳೆಯನ್ನು ಹೊತ್ತು ಸಹಜ ನಗುವನ್ನು ಕಳೆದುಕೊಂಡಿತ್ತು. ನಗರವನ್ನು ಸೇರಿಕೊಂಡ ಆ ಕಡಲಿಗೆ ಸ್ವಾಭಾವಿಕವಾದ ಉಕ್ಕು ಸೊಕ್ಕುಗಳಾವುದೂ ಇರಲಿಲ್ಲ. ಮಳೆ ನೀರಿನ ಭಾರದಿಂದ ಕದಡಿ ಕಲಕಿದ ಕೆರೆಯಂತಿತ್ತು ಅಲ್ಲಿನ ಸಮುದ್ರ.'' (ಪು. ೪೫).

ಕನ್ನಡ ಸಂಸ್ಕೃತಿಗೆ ಲಭ್ಯವಾದ ಅಜ್ಜನ ಹೆಗಲ ನೋಟ ಕಾರಂತ ಕಥನಗಳ ಮತ್ತೊಂದು ವೈಶಿಷ್ಟ್ಯವಾಗಿದೆ. ಕಾರಂತರು ಸೃಷ್ಟಿಸಿದ ಪಾತ್ರಗಳು, ಸನ್ನಿವೇಶಗಳು ಕನ್ನಡ ಕಥನ ಪರಂಪರೆಯಲ್ಲಿ ಬಗೆಬಗೆಯ ಅವಸ್ಥಾಂತರಗಳಿಗೆ ಒಳಗಾಗಿ 'ಸ್ಥಾವರ'ವಾಗದೆ 'ಜಂಗಮ'ವಾಗಿದೆ.

– ಚೋಮ ಕುರಿಯಯ್ಯನಾಗಿ ಮೂಡಿಬಂದದ್ದು ದಲಿತ ಜೀವನದ ದಾರುಣತೆಯ ರೂಪಕವಾಗಿದ್ದಾನೆ. ಆದರೆ, ಲೇಖಕರನ್ನು ಜಾತಿ ದೃಷ್ಟಿಯಿಂದ ನೋಡುವ ವಿಮರ್ಶಕರು ಚೋಮ ಮತ್ತು ಕುರಿಯಯ್ಯನನ್ನು ಪ್ರತ್ಯೇಕ ದಡಗಳಂತೆ ಪರಿಗಣಿಸಿದ್ದಾರೆ. ಇದು ಸರಿಯಲ್ಲ.

– ಶಂಭು-ಲಚ್ಚರು 'ಸಂಸ್ಕಾರ'ದಲ್ಲಿ ನಾರಾಯಣಪ್ಪನಾಗಿ, ಕುಂ.ವೀ.ಯಲ್ಲಿ ಶಾಮಣ್ಣ, ಅಶ್ವತ್‌ನಾರಾಯಣರಾಗಿ, ಬಿಳುಮನೆ ರಾಮದಾಸ್ ಅವರ 'ನಂಬಿಕೆಟ್ಟವರಿಲ್ಲವೋ'ದಲ್ಲಿ ಬೊಮ್ಮಯ್ಯನಾಗಿ ಅವತರಿಸುತ್ತಾ ಬಂದಿದ್ದಾರೆ.

– ಸರಸೋತಿ ಮತ್ತು ಸಾಕವ್ವ ಇವರಿಬ್ಬರ ಒಂಟಿತನ ಮತ್ತು ದಾರುಣತೆಗಳು ಜನ್ಮಾಧಾರಿತ ಅಸಮಾನತೆಯನ್ನು ಹೊರತುಪಡಿಸಿದರೆ ಉಭಯ ಸಾಮಾನ್ಯವಾಗಿದೆ. ಜಾತಿ ಪಿರಮಿಡ್ಡಿನ ತುದಿ ಮತ್ತು ತಳ – ಇವೆರಡೂ ಹೆಣ್ಣಿನ ಪಾಲಿಗೆ ಒಂದೇ ಆಗಿದೆ. ಹೆಣ್ಣು ಯಾವ ಕುಲದಲ್ಲೇ ಹುಟ್ಟಲಿ 'ಹೆಣ್ಣು' ಎಂಬ ಕಾರಣಕ್ಕಾಗಿಯೇ 'ಪುರುಷ'ನಿಂದ ಕೀಳುಗಳೆಯಲ್ಪಡುತ್ತಾಳೆ.

– ಗೋಪಾಲಯ್ಯ ನಿರೂಪಕನಿಗೆ ಮಾಡಿಸುವ ಸ್ನಾನ 'ಸೂರ್ಯನ ಕುದುರೆ' ಕಥೆಯಲ್ಲಿ ಹಡೆವೆಂಕಟ ಮತ್ತು ಅನಂತುವಿನಲ್ಲಿ ವಿಸ್ತೃತವಾದ ಅಭಿವ್ಯಕ್ತಿಯಾಗಿದೆ.

– 'ಬೆಟ್ಟದ ಜೀವ' ಕಾದಂಬರಿಯ ನಿರೂಪಕನಂತೆಯೇ 'ಕರ್ವಾಲೋ' ಕಾದಂಬರಿಯ ನಿರೂಪಕನೂ ಕ್ರಮಕ್ರಮೇಣ ವಸ್ತುಗತಿಯಲ್ಲಿ ಸೇರಿಹೋಗುತ್ತಾನೆ.

ಬಾಳ್ವೆಯೇ ಬೆಳಕು (೧೯೪೫), ಪರಮಾಣು ಇಂದು-ನಾಳೆ (೧೯೫೭) ಇವೆರಡು ಕೃತಿಗಳ ಪ್ರಸ್ತುತತೆ ಇಪ್ಪತ್ತೊಂದನೆಯ ಶತಮಾನದಲ್ಲೂ ಸಲ್ಲುವುದನ್ನು ಗಮನಿಸಲೇಬೇಕು. ತನ್ನ ಸ್ವಾರ್ಥವನ್ನಷ್ಟೆ ನೋಡುವ 'ಮನುಷ್ಯ ಕೇಂದ್ರಿತ' ದೃಷ್ಟಿಕೋನಕ್ಕೆ ಬದಲಾಗಿ, ಸೃಷ್ಟಿಯ ಕನಿಷ್ಠ ಜೀವಿಗಳನ್ನೂ ಸರಿಸಮಾನವಾಗಿ ಕಾಣುವ 'ಜೀವ ಕೇಂದ್ರಿತ' ದೃಷ್ಟಿಕೋನದ ಪ್ರತಿಪಾದನೆ 'ಬಾಳ್ವೆಯೇ ಬೆಳಕು' ಕೃತಿಯಲ್ಲಿದೆ. ಇದರಿಂದಾಯ್ದ ಈ ಉಲ್ಲೇಖಗಳನ್ನು ಮನದಲ್ಲೊಮ್ಮೆ ಪರಿಭಾವಿಸಿ :

''.... ಎಲ್ಲ ಜೀವಿಗಳಿಗಿಂತ ಮನುಷ್ಯನೇ ಶ್ರೇಷ್ಠ – ಎಂಬ ಭಾವನೆಯು ಸಾಮಾನ್ಯ ಯಾವತ್ತೂ ಮತಗಳ ತೀರ್ಮಾನವಾಗಿದೆ... ಈ ಭಾವನೆಯಿಂದಾಗಿ ಇತರ ಜೀವಿಗಳು ತಮ್ಮ ಲಾಭಕ್ಕಾಗಿ ಇವೆಯೆಂದು ತಿಳಿಯುವುದರಿಂದ, ಅವುಗಳ ಹಾನಿಗೆ ಕಾರಣವಾಗಿಯೂ ಇದ್ದಾರೆ...'' (ಪು. ೨೭).

''..... ಇತರ ಜೀವಿಗಳಿಗಿಂತ ತನ್ನನ್ನು ಪ್ರಧಾನವಾಗಿರಿಸಿಕೊಳ್ಳುವುದು; ತನ್ನ ಜನವನ್ನು ಇತರರ ಮೇಲಿರಿಸುವುದು; ತನ್ನ ಪ್ರಪಂಚವನ್ನು ವಿಶ್ವಕ್ಕೆ ಆದರ್ಶವಾಗಿ ಹಿಡಿಯುವುದು – ಇವು ಯಾವುವೂ ಸತ್ಯ ಹುಡುಕುವ ವ್ಯಕ್ತಿಗೆ ಹಿತವಾದ ದಾರಿಗಳಲ್ಲ... ಉಳಿದೆಲ್ಲ ಜೀವಿಗಳ ಬದುಕಿನ ಬಗೆಯನ್ನು ಎಷ್ಟು ಹೆಚ್ಚಾಗಿ ನಾವು ತಿಳಿಯುವೆವೋ ಅಷ್ಟು ಚೆನ್ನಾಗಿ ನಮ್ಮ ಜೀವನದ ಹಿತವನ್ನೂ ಮಿತಿಯನ್ನೂ ತಿಳಿಯಲು ಸಹಾಯವಾದೀತು..'' (ಪು. ೭೫).

೧೯೪೫ರಷ್ಟು ಹಿಂದೆಯೇ ಕಾರಂತರು ಎತ್ತಿ ಹಿಡಿದಿರುವ 'ಜೀವ ಕೇಂದ್ರಿತ' ದೃಷ್ಟಿಕೋನವನ್ನಿಲ್ಲಿ ವಿಶೇಷವಾಗಿ ಗುರುತಿಸಬೇಕಾಗಿದೆ. 'ಹೊಸತು' (ನವೆಂಬರ್-೨೦೦೧) ಮಾಸ ಪತ್ರಿಕೆಯಲ್ಲಿ, ಕನ್ನಡದಲ್ಲಿ ಪ್ರಕಟವಾಗಿರುವ ನಾಸ್ತಿಕ ಕೃತಿಗಳ ಪರಿಶೀಲನೆಯೊಂದು ಪ್ರಕಟವಾಗಿತ್ತು. ವಸುದೇವ ಭೂಪಾಲಂ ಅವರ 'ದೇವರು ಸತ್ತ', ಬೀಚಿಯವರ 'ದೇವರಿಲ್ಲದ ಗುಡಿ', ಎ. ಎನ್. ಮೂರ್ತಿರಾಯರ 'ದೇವರು' ಮುಂತಾದ ಕೃತಿಗಳನ್ನು ಆ ಲೇಖನದಲ್ಲಿ ಸ್ಮರಿಸಲಾಗಿತ್ತು. ಕಾರಂತರ 'ಬಾಳ್ವೆಯೇ ಬೆಳಕು' ಕೃತಿಯ ಪ್ರಸ್ತಾಪ ಅದರಲ್ಲಿರಲಿಲ್ಲ. ಈ ಕುರಿತು ಮರು ತಿಂಗಳು 'ಹೊಸತು'ವಿನಲ್ಲಿ ಪ್ರಕಟವಾದ ಪ್ರತಿಕ್ರಿಯೆಯೊಂದು ಇದನ್ನೊಂದು ಕೊರತೆಯೆಂದು ಭಾವಿಸಿ 'ಬಾಳ್ವೆಯೇ ಬೆಳಕು' ಕೃತಿಯನ್ನು ನಾಸ್ತಿಕ ಕೃತಿಗಳ ಸಾಲಿನಲ್ಲಿ ಸೇರಿಸಿಕೊಳ್ಳಬೇಕೆಂಬ ಸೂಚನೆಯನ್ನು ನೀಡಿತ್ತು. ನನ್ನ ದೃಷ್ಟಿಯಲ್ಲಿ 'ಬಾಳ್ವೆಯೇ ಬೆಳಕು' ಕೇವಲ ನಾಸ್ತಿಕ ಕೃತಿ ಮಾತ್ರವೆಂದು ಹೆಸರಿಸಬೇಕಾಗಿಲ್ಲ. ಇದರಲ್ಲಿ ಪ್ರತಿಪಾದಿತವಾಗಿರುವ 'ಜೀವ ಕೇಂದ್ರಿತ' ದೃಷ್ಟಿಕೋನ, ಇಹಜೀವನದ ಘನತೆ, ಸೃಷ್ಟಿಯ ಕನಿಷ್ಠ ಜೀವಿಗಳೊಡನೆ ಸಹಜ ಮೈತ್ರಿ, ಮುಕ್ತ ಮನಸ್ಸಿನಿಂದ ಬಾಳನ್ನು ಆಪ್ತವಾಗಿ ಒಳಗೊಳ್ಳುವುದು – ಮುಂತಾದ ಸುವಿಚಾರಗಳನ್ನು ಗಮನಿಸಿದ್ದೇ ಆದರೆ, 'ನಾಸ್ತಿಕ ಕೃತಿ'ಯೆಂಬ ಹಣೆ ಪಟ್ಟಿಯ ನಿರರ್ಥಕತೆ ಮನದಟ್ಟಾಗುತ್ತದೆ.

'ಬಾಳ್ವೆಯೇ ಬೆಳಕು' ಕೃತಿಯನ್ನು ಆಧುನಿಕ ಯುಗದ ಭಗವದ್ಗೀತೆ ಎನ್ನಬಹುದು. ಗ್ಲಾನಿಗೊಳಗಾಗಿರುವ ಆಧುನಿಕ ಭಾರತಕ್ಕೆ, ಸಮೃದ್ಧ ವ್ಯಕ್ತಿತ್ವದ ಕಾರಂತರು ವಿಶ್ವರೂಪ ದರ್ಶನವನ್ನೇ ಮಾಡಿಸಿದ್ದಾರೆ. 'ವಸ್ತು'ವನ್ನು ಹೇಗೆ ಗ್ರಹಿಸಬೇಕು ಎಂಬ ಸಹಜ ಜ್ಞಾನದ ಪ್ರತಿಪಾದನೆ ಈ ಕೃತಿಯಲ್ಲಿದೆ. ಮನುಷ್ಯನ ಸಕಲಾನುಭವಗಳನ್ನು ಕಾರಂತರು 'ಶಬ್ದ' ಮತ್ತು 'ಬಿಂಬ' (abstract and concrete)ವೆಂಬ ಪರಿಭಾಷೆಗಳಿಂದ ವಿವರಿಸಿದ್ದಾರೆ. ಐಂದ್ರಿಯಿಕ ಜ್ಞಾನ ಸಮಸ್ತವು 'ಬಿಂಬ'ವೆನಿಸಿಕೊಳ್ಳುತ್ತವೆ. ಐಂದ್ರಿಯಿಕವಲ್ಲದವು 'ಶಬ್ದ'ವಾಗುತ್ತದೆ. ಉದಾ : ಗುಬ್ಬಚ್ಚಿಯು 'ಬಿಂಬ'ವೆನಿಸಿಕೊಂಡರೆ, ದೇವರು ಬರಿಯ 'ಶಬ್ದ' ಮಾತ್ರವಾಗುಳಿಯುತ್ತದೆ. ಇಂಥ 'ಶಬ್ದ' ವಿಚಾರಗಳು ನಮ್ಮ ಅರಿವಿಗೆ ಬರುವುದು ಆಯಾ ಸ್ಥಳೀಯ 'ಬಿಂಬ'ಗಳ ಮೂಲಕವೇ ಎಂಬುದನ್ನು ಕಾರಂತರು ಸ್ಪಷ್ಟವಾಗಿ ಬಿಂಬಿಸಿದ್ದಾರೆ.

ಬಾಳಿನ ವಸ್ತು ವಿಷಯಗಳು, ಧಾರ್ಮಿಕ ನೆಲೆಯ ಪರವಸ್ತು, ಸಾಹಿತ್ಯ ಕಲೆಯ ವಸ್ತುಗತಿ – ಇವೆಲ್ಲವುಗಳನ್ನು ಅನುಭವ ಮೂಲದಿಂದ ಎದುರುಗೊಳ್ಳುವ ಬಗೆ ಸದಾ ಚಲನಶೀಲವಾಗಿರುತ್ತದೆ. ಇದನ್ನು ಬಿಂಬಾತ್ಮಕ ಗ್ರಹಿಕೆ ಎನ್ನಬಹುದು. ಅಪಾರವಾದ ವಿದ್ವತ್ತು ಮತ್ತು ಘನ ಪಾಂಡಿತ್ಯಗಳಿಂದ 'ವಸ್ತು'ವನ್ನು ಗ್ರಹಿಸುವ ಕ್ರಮವು ಶಾಬ್ದಿಕ ಗ್ರಹಿಕೆ ಎನಿಸಿಕೊಳ್ಳುತ್ತದೆ. ದಟ್ಟವಾದ ಜೀವನಾನುಭವಗಳಿಂದ ಹುಟ್ಟಿದ ಕಾರಂತರ ಮತ್ತು ಕುವೆಂಪು ಅಂಥವರ ಕಥನಗಳನ್ನು ನಾವು ನಿಘಂಟು ಮತ್ತು ವಿಶ್ವಕೋಶ ಗ್ರಂಥಗಳಿಂದ ಅರಿತುಕೊಳ್ಳಲು ಸಾಧ್ಯವಿಲ್ಲ... ಇದಕ್ಕೆ ಅನುಭವದ ವಿಸ್ತಾರ, ವೈವಿಧ್ಯ, ಸಾಮ್ಯತೆಗಳೇ ಸೋಪಾನ ಮಾರ್ಗವೆಂದು ತಿಳಿಯಬೇಕು !

ಪರಿಸರ ವಿನಾಶದಿಂದ ತತ್ತರಿಸುತ್ತಿರುವ ಇಂದಿನ ದಿನಗಳಲ್ಲಿ ಮಾತ್ರವಲ್ಲ, ಕಾರಂತರ ಆಲೋಚನೆ ಮತ್ತು ಕ್ರಿಯೆಗಳು ಮುಂಬರುವ ತಲೆಮಾರುಗಳಿಗೂ ಮಾರ್ಗದರ್ಶಿಯಾಗಿವೆ. ಕಾರಂತರನ್ನು 'ಪರಿಸರವಾದಿ' ಎಂದು ಕರೆಯುವುದು 'ರೈತ'ನೊಬ್ಬನನ್ನು 'ರೈತವಾದಿ' ಎಂದು ಕರೆದಷ್ಟೇ ಹಾಸ್ಯಾಸ್ಪದವಾದುದು. ನಮ್ಮ ದೇಶದಲ್ಲಿ ಪರಿಸರವಾದ, ಪರಿಸರ ಚಳುವಳಿಗಳು ಕೂಡ ''ತೋರಿ ಉಂಬ ಲಾಭ''ವಾಗಿದೆ. ಅಲ್ಲದೆ, ಸಮಗ್ರ ದೃಷ್ಟಿಯ ತೀವ್ರ ಅಭಾವದಿಂದ ಪರಿಸರವಾದಿಗಳು ಎಡಬಿಡಂಗಿಗಳಾಗಿ ಕಾಣುತ್ತಾರೆ. ಕೈಗಾ ಅಣುಸ್ಥಾವರವನ್ನು ಸರಳುತಿರುವ ಪರಿಸರವಾದಿಗಳು ಎಡಬಿಡಂಗಿಗಳಾಗಿ ಕಾಣುತ್ತಾರೆ. ವಿರೋಧಿಸುವ ಪರಿಸರವಾದಿಗಳೇ, ಪೋಖ್ರಾನ್ ಅಣುಸ್ಫೋಟಕ್ಕೆ ಭಾರಿ ಬೆಂಬಲ




ವ್ಯಕ್ತಪಡಿಸಿದ್ದಾರೆ. ಕಾರಂತರ ಅಣುವಿರೋಧಿ ದೃಷ್ಟಿಕೋನ ಐವತ್ತರ ದಶಕದಿಂದಲೂ (=ಪರಮಾಣು ಇಂದು ಮತ್ತು ನಾಳೆ-೧೯೫೨) ಮೂಡಿಬಂದಿದೆ. ಕಾರಂತರ ಪರಿಸರ ಪ್ರಜ್ಞೆ ಮತ್ತು ದಕ್ಷಿಣ ಕನ್ನಡದ ಪರಿಸರದ ಚಳುವಳಿಗಳನ್ನು ವ್ಯಷ್ಟಿ ಮತ್ತು ಸಮಷ್ಟಿಗಳ ಬೆಸುಗೆಯಾಗಿ ನೋಡಬೇಕು.

ಕೊನೆಯದಾಗಿ, ಕಾರಂತರು ಪ್ರತಿಪಾದಿಸಿರುವ 'ಸ್ಥಳೀಯ ಭೂಗೋಳ'ದ ಬಗ್ಗೆ ಕೆಲವು ಮಾತುಗಳನ್ನು ಹೇಳಲಿಚ್ಛಿಸುತ್ತೇನೆ. 'ವಿಶ್ವಗ್ರಾಮ' ಮತ್ತು 'ಸ್ಥಳೀಯ ಭೂಗೋಳ' ಇಪ್ಪತ್ತೊಂದನೆ ಶತಮಾನದ ಬಹುದೊಡ್ಡ ವೈರುಧ್ಯಗಳೆಂದು ನಾನು ತಿಳಿದಿದ್ದೇನೆ. ಕನ್ನಡಿಯ ಗಂಟಿಗಿಂತ ಕೈಯಲ್ಲಿರುವ ದಂಟು ಮೇಲು – ಎಂಬ ಗಾದೆ ಮಾತಿನ ನೆರವಿನಿಂದ ಹೇಳುವುದಾದರೆ ವಿಶ್ವಗ್ರಾಮವು ಕನ್ನಡಿಯ ಗಂಟು; ಸ್ಥಳೀಯ ಭೂಗೋಳವು ಕೈಯ ದಂಟು ! ನಾಡು-ನಿಸರ್ಗ-ಪರಿಸರ ಕುರಿತು ಕಾರಂತರ ಬರೆಹಗಳನ್ನೆಲ್ಲ ಆಯ್ದು ಸಂಪುಟ-೭ರಲ್ಲಿ ಪ್ರಕಟಿಸಲಾಗಿದೆ. (=ಮಂ.ವಿ.ವಿ.ದ ಪ್ರಕಟಣೆ) ಈ ಸಂಪುಟ ದಿಂದ 'ಸ್ಥಳೀಯ ಬಿಂಬ'ವನ್ನು ಲಕ್ಷಿಸಿ ಮೂರು ಲೇಖನಗಳನ್ನಿಲ್ಲಿ ಪ್ರಸ್ತಾಪಿಸುತ್ತಿದ್ದೇನೆ.

೧. ನನ್ನ ಊರಿನ ಸೊಗಸುಗಳು

೨. ಕಣ್ಮುಂದಿನ ಸ್ವರ್ಗ, ಕಸದಂತೇಕೆ ?

೩. ತಿಂಗಳೆ

ಈ ಲೇಖನಗಳಲ್ಲಿ ಕಾರಂತರು ಪ್ರತಿಪಾದಿಸಿರುವ 'ಸ್ಥಳೀಯ ಭೂಗೋಳ' ಸ್ಫೂರ್ತಿದಾಯಕವಾಗಿದೆ. ನನ್ನ ಮಟ್ಟಿಗೆ ಹೇಳುವುದಾದರೆ, 'ಕಾಡು-ತೋಪು' ಎಂಬ ನನ್ನ ಕೃತಿಯ ಹಿಂದೆ, ಕಾರಂತರು ನಂಬಿದ ಸ್ಥಳೀಯ ಭೂಗೋಳದ ದರ್ಶನ ದೃಷ್ಟಿಯಿದೆ. ಕಾರಂತರ ಗ್ರಂಥ ಸಂಪುಟದಿಂದ ಆಯ್ದ ಈ ಉಲ್ಲೇಖಗಳನ್ನು ಗಮನಿಸಿ :

೧. ಮನೆಯ ಮುಂದಿನ ತೋಟದಲ್ಲಿ ಬೆಳಗಿಂದ ಸಂಜೆಯ ತನಕ ಹಾಯುವ ನೂರೊಂದು ಬಗೆಯ ಹಕ್ಕಿಗಳಿವೆಯಲ್ಲ, ಅವಕ್ಕೆ ಸರಿಯಾದ ಹೆಸರಾದರೂ ನಮಗೆ ತಿಳಿದಿದೆಯೋ ? ಅವುಗಳನ್ನು ತಿಳಿದು ಹೆಸರಿಡಲು ವಿದೇಶೀಯರು ಬರಬೇಕೆ ?.... ನಮ್ಮ ಬೇಲಿಯಲ್ಲಿ ಕುಣಿಯುವ ಹೂಗುಬ್ಬಿ, ತಾಳೆಗುಬ್ಬಿ, ಜೇನು ಕುಡಿಕ, ಇನ್ನೆಷ್ಟೋ ಬಗೆಯವು ತಮ್ಮ ಬಣ್ಣದಿಂದ, ಹಾರಾಟದಿಂದ ನಮ್ಮನ್ನು ಬಹುವಾಗಿ ಸಂತೋಷಗೊಳಿಸಬಹುದು. ಚಿಕ್ಕ ಕೀಟಗಳು, ಇರುವೆಗಳು, ಬರ್ಕ, ಮೊಲ, ಕಡವೆ, ಜಿಂಕೆ, ಚಿಪ್ಪು ಹಂದಿ ಮುಂತಾದವು ನಮ್ಮ ಆಯುಷ್ಯಕ್ಕೆ ಸಾಕಷ್ಟು ಆನಂದ ಸಾಮಗ್ರಿಗಳನ್ನು ಒದಗಿಸಬಲ್ಲವು. ಇಷ್ಟೆ ಅವುಗಳನ್ನು ಪರಿಶೀಲಿಸಲು ನಾವು ಕಲಿಯಬೇಕು. (ಪು. ೮೦).

೨. ನಾವು ವಾಸ ಮಾಡುವ ತಾವಿನಲ್ಲೇ ನಿಸರ್ಗ ಇದ್ದೇ ಇರುತ್ತದೆ. ಅಲ್ಲಿಯೂ ಗಿಡ, ಮರ, ನದಿ, ಬೆಟ್ಟಗಳನ್ನು ಕಾಣಬಹುದು. ಆದರೆ ಕಂಡದ್ದನ್ನೇ ಕಾಣುವವರಿಗೆ ಸ್ಥಳೀಕ ನಿಸರ್ಗದಲ್ಲಿ ಇರಬಹುದಾದ ವೈಶಿಷ್ಟ್ಯಗಳ ಕಡೆಗೆ ಗಮನ ಹರಿಯುವುದಿಲ್ಲ. (ಪು. ೧೭೪).

'ವಿಶ್ವಗ್ರಾಮ'ವೆಂಬ ಶಬ್ದಕ್ಕೂ 'ಸ್ಥಳೀಯ ಭೂಗೋಳ'ವೆಂಬ ಬಿಂಬಕ್ಕೂ ಇರುವ ನೈಜ ವ್ಯತ್ಯಾಸಗಳನ್ನು ಗಮನಿಸಿದ್ದೇ ಆದಲ್ಲಿ ನಿಜದುದಯವಾಗಬಹುದು. ಪ್ರಪಂಚದ ಯಾವುದೋ ಮೂಲೆಯಲ್ಲಿ ಘಟಿಸುವ ವಿದ್ಯಮಾನವನ್ನು ಮತ್ತೊಂದು ಮೂಲೆಯಲ್ಲಿ ಕುಳಿತು ದರ್ಶಿಸಿದ ಮಾತ್ರಕ್ಕೆ ನಾನು ವಿಶ್ವಗ್ರಾಮದ ಮೂರ್ತಿವೆತ್ತ ಚೇತನವಾಗಲಾರೆ. ನನಗೆ ದಕ್ಕುವುದು ನನ್ನ ಊರು ಅಷ್ಟೆ! ಬನವಾಸಿಯ ಪಂಪ, ಕಲ್ಯಾಣದ ವಚನಕಾರರು, ಹಂಪೆಯ ಹರಿಹರ, ಗದುಗಿನ ನಾರಾಯಣಪ್ಪ, ಕುಪ್ಪಳ್ಳಿಯ ಕುವೆಂಪು, ಸಾಧನಕೇರಿಯ ಬೇಂದ್ರೆ, ಕೋಟದ ಕಾರಂತರು – ಇವರೆಲ್ಲರೂ ಸ್ಥಳೀಯ ಭೂಗೋಳ ಮತ್ತು ಕಾರಯಿತ್ರಿ ಪ್ರತಿಭೆಯ ಕೂಡಲಸಂಗಮಕ್ಕೆ ನಿದರ್ಶನವಾಗಿದ್ದಾರೆ. ಆದ್ದರಿಂದ ಲೇಖಕನಾದವನು ಪ್ರಜ್ಞಾಪೂರ್ವಕವಾಗಿ ಶಾಬ್ದಿಕ ವಲಯದಿಂದ ತನ್ನನ್ನು ಬಿಡಿಸಿಕೊಂಡು, ಮುಕ್ತಮನದಿಂದ ಬಿಂಬಾತ್ಮಕ ನೆಲೆಯನ್ನು ಸದಾ ಒಳಗೊಳ್ಳುತ್ತಿರಬೇಕಾಗುತ್ತದೆ. ಈ ಪರಿ ಸಾಹಿತ್ಯದ ಸೃಷ್ಟಿಗಂತೋ ಅಂತೆಯೇ ಅದನ್ನು ಪರಿಭಾವಿಸುವ ದೃಷ್ಟಿಗೂ ಅವಶ್ಯವೆಂಬುದನ್ನಿಲ್ಲಿ ಮರೆಯಬಾರದು.

ಶಬ್ದ ಸಂಭ್ರಮದಲ್ಲಿ ಹಿಂದುಗಾಣರು, ಮುಂದುಗಾಣರು, ತಮ್ಮ ತಾವರಿಯರು –
ಇದು ಕಾರಣ.

ಮೂರು ಲೋಕವೆಲ್ಲವು ಬರುಸೂರೆವೋಯಿತ್ತು, ಗುಹೇಶ್ವರ. – ಅಲ್ಲಮಪ್ರಭು

ಎ. ಚಂದ್ರಶೇಖರ ನಂಗಲಿ
೩೨೮೪, ಪಿ.ಸಿ. ಬಡಾವಣೆ, ಕೋಲಾರ-೫೬೩ ೧೦೧

# ಗ್ರಹಗಳ ನೃತ್ಯದ ಹೊಸ ಅಂಕ



**ಕ**ಳೆದ ಕೆಲವು ತಿಂಗಳುಗಳಿಂದ ನಡೆದಿರುವ ಗ್ರಹಗಳ ನೃತ್ಯದ ಇನ್ನೊಂದು ಅಂಕ ಈ ತಿಂಗಳು ನಡೆಯಲಿದೆ. ಪಾತ್ರಧಾರಿಗಳ ಸಂಖ್ಯೆ ಇಳಿದಿದೆ. ದಿನದಿನಕ್ಕೆ ಪಶ್ಚಿಮಕ್ಕೆ ಸರಿದ ಗ್ರಹಗಳಲ್ಲಿ ಈಗ ಸಂಜೆಯ ಅಂಕಣದಲ್ಲಿ ಉಳಿದಿರುವುದು ಗುರು, ಶುಕ್ರ ಮತ್ತು ಮಂಗಳ ಮಾತ್ರ. ದಿಗಂತದ ಅಂಚಿನಲ್ಲಿ ಇರುವ ಕ್ಷೀಣವಾದ ಮಂಗಳಗ್ರಹವನ್ನು ಕಾಣುವುದು ಅಸಾಧ್ಯ ಎಂದೆನ್ನಬಹುದು. ೧೨ರಂದು ಚಂದ್ರ ಮಂಗಳ ಗ್ರಹವನ್ನು ಮರೆಮಾಡುವ ''ಆಚ್ಛಾದನೆ'' ನಡೆಯಲಿದೆ. ಆದರೆ ಸಂಧ್ಯಾಪ್ರಕಾಶದಲ್ಲಿ ಇವು ಮುಚ್ಚಿಹೋಗುತ್ತವೆ – ಚಂದ್ರನೂ ಅಷ್ಟೆ.

ಪಶ್ಚಿಮದ ಅಂಚಿನಲ್ಲಿ ಸೂರ್ಯಾಸ್ತವಾಗುತ್ತಿದ್ದ ಹಾಗೆಯೇ ಫಳಗುಟ್ಟುವ ಎರಡು ಕಾಯಗಳು ಗುರು ಮತ್ತು ಶುಕ್ರ. ಹೆಚ್ಚಿನ ಪ್ರಕಾಶದ್ದು ಶುಕ್ರ. ಜೂನ್ ೧ ರಂದು ಅವುಗಳ ನಡುವಿನ ಕೋನ ಸುಮಾರು ಎರಡೂವರೆ ಡಿಗ್ರಿಗಳು. ಜೋಡಿ ಕಣ್ಗಳಂತೆ ಅವು ಕಾಣುವುವು. ಪ್ರತಿ ಸಂಜೆ ಇವನ್ನು ಗಮನಿಸುತ್ತಿದ್ದರೆ ಶುಕ್ರದ ಓಟದ ಅಂದಾಜು ಸಿಗುವುದು. ಜೂನ್ ೧ ರಂದು ಈ ಜೋಡಿಯ ಮೇಲೆಯೇ ಇನ್ನೊಂದು ನಕ್ಷತ್ರ ಜೋಡಿಯೂ ಕಾಣುವುದು. ಇವೇ ಮಿಥುನ ರಾಶಿಯ ಪುನರ್ವಸುಗಳು. ಕ್ಯಾಸ್ಟರ್ ಮತ್ತು ಪೊಲಕ್ಸ್ ಎಂಬುದು ಅವುಗಳ ಪಾಶ್ಚಾತ್ಯ ಹೆಸರುಗಳು. ಈ ಎರಡೂ ಜೋಡಿಗಳು ಡಬಲ್ಸ್ ಬ್ಯಾಟ್‌ಮಿಂಟನ್ ಆಟಗಾರರಂತೆ ಕಾಣುತ್ತವೆ. ಆದರೆ ಶುಕ್ರ ೧೨ ನೆಯ ತಾರೀಖಿಗೆ ಪುನರ್ವಸುಗಳ ನೇರಕ್ಕೆ ಬಂದಾಗ ಆಟ ರದ್ದಾಗಲೇ ಬೇಕಾಗುತ್ತದೆ. ಹಾಗೆಯೇ ಮುಂದುವರೆದು ಶುಕ್ರ, ಕ್ಷೀಣವಾದ ಕಟಕರಾಶಿಯನ್ನು ದಾಟಿ, ಸಿಂಹದ ಮುಖದ ಹತ್ತಿರ ಬಂದಾಗ ಜೂನ್ ತಿಂಗಳು ಮುಗಿಯುತ್ತದೆ.

ಕಳೆದ ತಿಂಗಳವರೆಗೂ ಸಂಜೆ ಕಾಣುತ್ತಿದ್ದ ಬುಧ ಈಗ ಬೆಳಗಿನ ಝಾವ ಕಾಣುತ್ತದೆ. ೨೧ ರಂದು ಬೆಳಗ್ಗೆ ಪೂರ್ವದಿಕ್ಕಿನಲ್ಲಿ ಗರಿಷ್ಠ ಎತ್ತರದಲ್ಲಿ ಫಳಗುಟ್ಟುತ್ತದೆ.

ಸೂರ್ಯ ವೃಷಭದಿಂದ ಮಿಥುನಕ್ಕೆ ಚಲಿಸುವುದನ್ನು ಗುರ್ತಿಸಲು ಈಗ ಒಳ್ಳೆಯ ಅವಕಾಶವಿದೆ. ಕಳೆದ ತಿಂಗಳು ಪಶ್ಚಿಮದ ಅಂಚಿನಲ್ಲಿ ಬೆಳಗಿದ ಪ್ರಕಾಶಮಾನಗ್ರಹಗಳಲ್ಲಿ ಶನಿಯೂ ಇತ್ತಲ್ಲವೇ? ಅದರ ಹಿನ್ನೆಲೆಯಲ್ಲಿದ್ದುದು ವೃಷಭರಾಶಿ. ಈಗದು ಕಾಣುತ್ತಿಲ್ಲ ಎಂದರೆ ಸೂರ್ಯ ವೃಷಭರಾಶಿಯ ಹಿನ್ನೆಲೆಯಲ್ಲಿದೆ ಎಂದಾಯಿತು. ಜೂನ್ ಆರಂಭದಲ್ಲಿ ಗುರು ಮತ್ತು ಶುಕ್ರ ಎರಡೂ ಮಿಥುನದಲ್ಲಿರುತ್ತವೆ. ದಿನಗಳೆದಂತೆ ಮುಂದೆ ಮುಂದೆ ಶುಕ್ರ ಓಡಿತಾದರೂ, ಗುರು ಮಿಥುನದಲ್ಲೇ ಉಳಿಯುತ್ತದೆ. ತಿಂಗಳ ಕೊನೆಯಲ್ಲಿ, ಗುರುಗ್ರಹವೂ ಕಾಣದಂತಾದಾಗ ಸೂರ್ಯ ಮಿಥುನದತ್ತ ಸರಿದಿದೆ ಎಂದು ತಿಳಿಯಬಹುದು.

ಪ್ರತಿ ಸಂಜೆ ಗಮನಿಸಿದರೆ, ಶುಕ್ರ ಗ್ರಹ ದಿನವೂ ಒಂದೇ ಎತ್ತರದಲ್ಲಿ ಕಾಣುತ್ತದೆ; ಗುರುಗ್ರಹ ಮಾತ್ರ ದಿನದಿನಕ್ಕೆ ಕೆಳಗೆ (ಅಂದರೆ ದಿಗಂತಕ್ಕೆ ಸಮೀಪವಾಗಿ) ಸರಿಯುತ್ತಿದೆ ಎನ್ನಿಸುತ್ತದೆ. ವಾಸ್ತವವಾಗಿ ಇದು ಶುಕ್ರದ ಓಟ ಮತ್ತು ಭೂಮಿಯ ಚಲನೆ ಎರಡನ್ನೂ ತೋರಿಸಿಕೊಡುತ್ತದೆ. ತಿಂಗಳ ಕೊನೆಯಲ್ಲಿ ಕಟಕ ದಿಗಂತದ ಅಂಚಿನಲ್ಲಿರುತ್ತದೆ.

ಇನ್ನು ನಕ್ಷತ್ರಗಳತ್ತ ದೃಷ್ಟಿ ಹರಿಸೋಣ. ಮಹಾಶ್ವಾನ, ಒರೈಯನ್ ಮುಂತಾದ ಪ್ರಕಾಶಮಾನ ಪುಂಜಗಳು ಮರೆಯಾಗುತ್ತಿದ್ದ ಹಾಗೆ ಆಕಾಶವೇ ಖಾಲಿಯಾಗಿ ಬಿಟ್ಟಿತ್ತೋ ಎನ್ನಿಸುತ್ತದೆ. ನೆತ್ತಿಯಲ್ಲಿ ಫಳಗುಟ್ಟುವ ಚಿತ್ರಾ ನಕ್ಷತ್ರ, ಕೆಂಪು ಬಣ್ಣದ ಸ್ವಾತಿ, ಉತ್ತರದ ಸಪ್ತರ್ಷಿಮಂಡಲ ಹೀಗೆ ಕೆಲವೇ ಪ್ರಕಾಶಮಾನ ನಕ್ಷತ್ರಗಳು ಕಾಣುವುವು. ದಕ್ಷಿಣದಲ್ಲಿ ಮಾತ್ರ ದಕ್ಷಿಣದ ಶಿಲುಬೆ (ಅಥವಾ ತ್ರಿಶಂಕು) ಸೆಂಟಾರಸ್ ಇವು ಸುಂದರವಾಗಿ ಕಾಣುವುವು. ದೂರದರ್ಶಕ ಅಥವಾ ದುರ್ಬೀನಿನ ಮೂಲಕ ದೃಷ್ಟಿ ಹರಿಸಿದಾಗ ಅಲ್ಲಿಯ ನೆಬ್ಯುಲಗಳು, ನಕ್ಷತ್ರಗುಚ್ಛಗಳು ಕಾಣುವುವು. ಆಕಾಶಗಂಗೆಯ ಒಂದು ಭಾಗವಾದ ಈ ಹಾಸು ಹಾಗೆಯೇ ಮುಂದುವರೆದು ಪೂರ್ವದ ಅಂಚಿನಲ್ಲಿ ಉದಯಿಸುತ್ತಿರುವ ವೃಶ್ಚಿಕ ರಾಶಿಗೆ ಸೇರುವುದನ್ನು ಚಂದ್ರನಿಲ್ಲದ ರಾತ್ರಿಗಳಲ್ಲಿ ಗಮನಿಸಬಹುದು.

೧೦ ರಂದು ಅಮಾವಾಸ್ಯೆ. ಅಂದು ಕಂಕಣ ಗ್ರಹಣವೂ ಇದೆ. ನೋಟ ಭಾರತಕ್ಕೆ ಲಭ್ಯವಿಲ್ಲವಾದರೂ, ಕೊನೆಯ ಹಂತದ ಹತ್ತಿಪ್ಪತ್ತು ನಿಮಿಷಗಳು ಈಶಾನ್ಯಭಾಗಕ್ಕೆ ಅಂದರೆ ದಿಬ್ರುಗರ್, ಇಟಾನಗರ್, ಜೋರ್ಹಟ್, ಕೊಹಿಮಾ ಈ ನಗರಗಳ ಭಾಗಕ್ಕೆ ಕಾಣುವುದು. ಈ ಗ್ರಹಣದ ಪೂರ್ಣ ನೆರಳಿನ ಪಥ ಉದ್ದಕ್ಕೂ ಸಾಗರದ ಮೇಲೆ ಇರುವುದೇ ಒಂದು ವಿಶೇಷ. ಅಮೆರಿಕದ ಪೂರ್ವದ ಅಂಚಿನಿಂದ ಆರಂಭವಾಗಿ ಪೆಸಿಫಿಕ್ ಸಾಗರದ ಮೂಲಕ ಹಾದು ನೆರಳು ಇಂಡೋನೇಷಿಯಾದಲ್ಲಿ ಸಮಾಪ್ತಿ ಆಗುತ್ತದೆ.

ಅಮಾವಾಸ್ಯೆಯ ಮುಂದಿನ ದಿನಗಳಲ್ಲಿ ಚಂದ್ರನ ಮಾರ್ಗದರ್ಶನ ಪಡೆದು ನಕ್ಷತ್ರಗಳನ್ನು ಗುರುತಿಸಬಹುದು. ೧೨ ರಂದು ಮಂಗಳ ಗ್ರಹದ ಆಚ್ಛಾದನೆ ಅಲ್ಲದೆ ಗುರುಗ್ರಹಕ್ಕೂ ಪಕ್ಕದಲ್ಲಿಯೇ ಕಾಣುತ್ತದೆ. ೧೪ರಂದು ಶುಕ್ರಗ್ರಹದ ಪಕ್ಕದಲ್ಲಿ ಕಾಣುತ್ತದೆ. ೧೬ ರಂದು ಸಿಂಹರಾಶಿಯ ಮಘನಕ್ಷತ್ರದ ಪಕ್ಕ ಕಾಣುವ ಚಂದ್ರ, ೨೦ ರಂದು ಚಿತ್ರಾನಕ್ಷತ್ರದ ಸಮೀಪ ಕಾಣುತ್ತದೆ. ಹುಣ್ಣಿಮೆಯಂದು ಜ್ಯೇಷ್ಠಾ ನಕ್ಷತ್ರದ ಪಕ್ಕ ಕಾಣುತ್ತದೆ. ೨೫ರ ಹುಣ್ಣಿಮೆಯಂದು ಪಾರ್ಶ್ವ ಛಾಯಾಗ್ರಹಣವೂ ಇದೆ. ಭೂಮಿಯ ನೆರಳಿನ ಅರ್ಧ ಛಾಯಾ ಪ್ರದೇಶವನ್ನು ಚಂದ್ರ ಬೆಳಗಿನ ೧ ಗಂ. ೪೮ ನಿ. ದಿಂದ ೪ ಗಂ ೫ ನಿ. ದ ಅವಧಿಯಲ್ಲಿ ಹಾದು ಹೊರಬರುತ್ತದೆ. (ಇಂತಹುದೇ ಗ್ರಹಣ ಮೇ ೨೬ರಂದೂ ಸಂಭವಿಸಿತ್ತು ; ಆದರೆ ಆಗ ಹಗಲಿನಲ್ಲಿ ನಡೆದಿತ್ತು). ಹೀಗೆ ಅರ್ಧಛಾಯಾ ಪ್ರದೇಶವನ್ನು ಹಾಯುವಾಗ ಅದರ ಬೆಳಕು ಕುಂದುವುದಾದರೂ ಆ ವ್ಯತ್ಯಾಸವನ್ನು ನಾವು ಗುರುತಿಸಲಾರೆವು.

ಜೂನ್ ೨೧ರಂದು (ಸಂಜೆ ೬ ಗಂ. ೫೪ ನಿ. ಕ್ಕೆ) ದಕ್ಷಿಣಾಯನದ ಆರಂಭ. ಅಂದು ಸೂರ್ಯ ತನ್ನ ಪಥದ ಉತ್ತರದ ಗರಿಷ್ಠ ಬಿಂದುವನ್ನು ಮುಟ್ಟಿ ಪುನಃ ದಕ್ಷಿಣಕ್ಕೆ ತಿರುಗುತ್ತದೆ. ಇದು ಬೇಸಿಗೆಯ ಮುಕ್ತಾಯದ ಸಂಕೇತ.

ನಕ್ಷೆ ಜೂನ್ ೧೫ಕ್ಕೆ ಅನ್ವಯವಾಗುವುದಾದರೂ ಇಡೀ ತಿಂಗಳು ಸಂಜೆ ಸೂರ್ಯಾಸ್ತವಾದೊಡನೆ ಬಳಸಬಹುದು. ಚಂದ್ರ ಮತ್ತು ಗ್ರಹಗಳ ಸ್ಥಾನಗಳಲ್ಲಿ ಮಾತ್ರ ವ್ಯತ್ಯಾಸವಾಗುವುದು.

ಡಾ॥ ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು-೫೬೦ ೦೦೧

# ವೀರ ಮಹಿಳೆಯರು

ಪುರುಷರು ಮಾತ್ರ ವೀರತನದ ಗುತ್ತಿಗೆ ಪಡೆದಿದ್ದಾರೆ ಎಂದು ಊಹಿಸಲೂ ಕೂಡ ಇತಿಹಾಸ ಅವಕಾಶ ನೀಡುವುದಿಲ್ಲ. ಪುರುಷರಿಗೆ ಸಮಸಮವಾಗಿ ಅಲ್ಲದಿದ್ದರೂ, ಸ್ವಲ್ಪಮಟ್ಟಿಗಾದರೂ ಮಹಿಳೆಯರ ವೀರತನವನ್ನು ಕೆಲವು ಶಾಸನಗಳು ಪ್ರಸ್ತಾಪಿಸಿವೆ. ಮಹಿಳೆಯರನ್ನು ಮಾಸತಿ ಅಥವಾ ಮಹಾ ಸತಿ ಕಲ್ಲುಗಳ ಮೂಲಕ ಮಾತ್ರವೇ ಗುರುತಿಸಬೇಕಾಗಿಲ್ಲ. ಅವು ಸ್ತ್ರೀಯರ ದೃಢ ನಿರ್ಧಾರದ ಸಂಕೇತ ಮಾತ್ರ. ಪತಿಯೊಡನೆ ಸತಿ ಹೋಗುವ ಸಿದ್ಧತೆಯೇ ಹೆಣ್ಣಿನ ಘಟ್ಟಿ ಮನಸ್ಸನ್ನು ಪರಿಚಯಿಸುತ್ತಿದೆ. ಈ ಬಗ್ಗೆ ಉತ್ಪ್ರೇಕ್ಷೆಗೆ ಅವಕಾಶವಿಲ್ಲ.

ಬದುಕಿನ ಬಹುತೇಕ ಎಲ್ಲಾ ಸ್ತರಗಳಲ್ಲಿ ಹೆಣ್ಣು ಗಂಡಿನೊಡನೆ ಸಮಾನವಾಗಿಯೇ ಬಾಳುತ್ತಾಳೆ; ದುಡಿಯುತ್ತಾಳೆ; ಆದರೂ ಅದೇಕೋ ಅವಳಿಗೆ ನಮ್ಮ ಹಿಂದಿನ ಜನ ಅಬಲೆ ಎಂಬ ಹೆಸರನ್ನು ಕೊಟ್ಟಿದ್ದಾರೆ. ಒಂಬತ್ತು ತಿಂಗಳ ಕಾಲ ಒಂದು ಭ್ರೂಣವನ್ನು ಗರ್ಭದಲ್ಲಿ ಹೊತ್ತು ಕಾಪಾಡಿ, ನೋವನ್ನುಂಡು ಹೊಸದೊಂದು ಜೀವಕ್ಕೆ ಜನ್ಮ ನೀಡಿ, ಅದಕ್ಕೆ ಹಾಲೂಡಿ, ಸಾಕಿ ಸಲಹುವ ತಾಯಿಯನ್ನು ಅಬಲೆ ಎಂದು ಏಕೆ ಕರೆಯಲಾಯಿತು? ಹೆಣ್ಣು ಜೀವಗಳ ಮೇಲಿನ ಅನುಕಂಪ ಅಥವಾ ಮರುಕದಿಂದ ಇಂತಹ ಮಾತುಗಳು ವ್ಯಕ್ತವಾಗುವ ಅವಶ್ಯಕತೆ ಇಲ್ಲ. ಯಾವುದೇ ಹೆಣ್ಣನ್ನು ಕಂಡಾಗ ರಾಷ್ಟ್ರಕೂಟ ದೊರೆ ಮೂರನೆಯ ಕೃಷ್ಣನ ಜುರ ಶಾಸನವು ನೆನಪಿಗೆ ಬಂದು, ಅಲ್ಲಿಯ ಅಬಸಿರೊಳಗಿಜ್ಜಾಡಿದ ಚಿತ್ತಂ ಪರಾಂಗನಾ ಪುತ್ರಕನ' ಎಂಬ ಮಾತಿನ ಅರ್ಥವನ್ನು ತಿಳಿಯುವ ಪ್ರಯತ್ನ ಮಾಡಬೇಕಾಗುತ್ತಿದೆ. ಎಲ್ಲರೂ ಮೂರನೆಯ ಕೃಷ್ಣನಂತೆ ಯೋಚಿಸಲೂ ಸಾಧ್ಯವಾಗದಿರಬಹುದು. ಆದರೆ, ಯಾವುದೇ ಹೆಣ್ಣಿನ ಶಕ್ತಿ, ಸಾಮರ್ಥ್ಯಗಳನ್ನು ಹೀಯಾಳಿಸುವುದೂ ತಪ್ಪಾಗಬಹುದು; ಶಾಸನಗಳ ಮೂಲಕ ವೀರವನಿತೆಯರ, ಮಹಾಸತಿಯರ, ಆಡಳಿತ ಪಟುಗಳ, ವಿದ್ಯಾವಂತರ, ದಾನವಿನೋದಿಗಳ, ಕಲಾ ರಸಿಕರ, ಕವಯಿತ್ರಿಯರ, ವಿದ್ಯಾವಂತರ ಪರಿಚಯ ಆಗಿದೆ. ಸಂದರ್ಭ ಬಂದಾಗಲೆಲ್ಲಾ ಅಂತಹವರ ಬಗ್ಗೆ ತಿಳಿಯುವ ಪ್ರಯತ್ನ ಮಾಡಲಾಗಿದೆ. ಕೇವಲ ಸತಿಯರಾಗಿ, ಕವಿಗಳಾಗಿ, ಆಡಳಿತ ಪಟುಗಳಾಗಿ, ಕಲಾವಿದರಾಗಿ ಮಾತ್ರವಲ್ಲದೆ ಕಲಿಗಳಾಗಿಯೂ ಸಾಹಸ ಮೆರೆದ ಕೆಲವು ಮಹಿಳೆಯರಿದ್ದಾರೆ. ಅಂಥವರಲ್ಲಿ ಕೆಲವರು ಈ ಹೊತ್ತಿಗೆ ಜನಪದರ ಮೂಲಕ ದೇವತೆಗಳಾಗಿಯೂ ಉಳಿದಿದ್ದಾರೆ.

ತುಮಕೂರು ಜಿಲ್ಲೆಯ, ತುರುವೇಕೆರೆ ತಾಲ್ಲೂಕಿನ ದಂಡಿನ ಶಿವರವು ಈಗ ಅದಕ್ಕೆ ಹೊಂದಿಕೊಂಡ ಅಮ್ಮಸಂದ್ರದ ಮೂಲಕ ಹೆಸರು ಪಡೆದಿದೆ. ದಂಡಿನ ಶಿವರದಲ್ಲಿ ಈಗ ಪ್ರತಿ ವರ್ಷವೂ 'ಹೊನ್ನಮ್ಮನ ಜಾತ್ರೆ' ನಡೆಯುತ್ತಿದೆ. ಈ ಹೊನ್ನಮ್ಮನನ್ನು ಬೆಂಗಳೂರು ಜಿಲ್ಲೆಯ ನೆಲಮಂಗಲ ತಾಲ್ಲೂಕಿನ ಶಿವಗಂಗೆಯ ಹೊನ್ನಮ್ಮ (ಹೊನ್ನಾದೇವಿ = ಸ್ವರ್ಣಾಂಬಾ = ಪಾರ್ವತಿ)ನಿಗೆ ಸಮೀಕರಿಸಲಾಗುತ್ತಿದೆ. ಸಾಮಾನ್ಯವಾಗಿ ಶಿವಗಂಗೆಯಲ್ಲಿ ಹೊನ್ನಮ್ಮನ ಜಾತ್ರೆ ಆದ ಹದಿನೈದು ದಿನಗಳಿಗೆ ದಂಡಿನಶಿವರದಲ್ಲಿ ಹೊನ್ನಮ್ಮನ ಜಾತ್ರೆ ಆಗುತ್ತದೆ. ಇದು ಜಾನಪದ ಆಚರಣೆ. ದಂಡಿನಶಿವರಕ್ಕೆ ಹೊಂದಿಕೊಂಡ ಅರಕೆರೆ ಗ್ರಾಮದಲ್ಲಿ ಕ್ರಿ.ಶ. ೯೬೫ಕ್ಕೆ ಸೇರಿದ ವೀರಗಲ್ಲಿನ ಮೇಲಿರುವ ಶಾಸನವು, ಹೆಸರು ಸ್ಪಷ್ಟವಾಗಿ ತಿಳಿಯದ(ಶಾಸನದ ■ ಭಾಗ ಅಸ್ಪಷ್ಟ) ಒಬ್ಬ ಗೌಡನು ಸಿರಿವುರದ ಕಾಡಿನಲ್ಲಿ, ಎರೆನಲ್ಲೂರಿನ ಬಳಿ ಬೀಡು


ಹರಿಯಕ್ಕನ ವೀರಗಲ್ಲು

ಬಿಟ್ಟಿದ್ದಾಗ ಹೆಸರು ಸ್ಪಷ್ಟವಾಗಿ ತಿಳಿಯದ(ಶಾಸನದ ಆ ಭಾಗ ಅಸ್ಪಷ್ಟ) ಒಬ್ಬ ಸೆಟ್ಟಿಯ ಮಗಳು ಪೊನ್ನಕ್ಕ ಇರಿದಳು ಅಥವಾ ಇರಿಯಲ್ಪಟ್ಟಳು ಎಂಬ ವಿಷಯವನ್ನು ದಾಖಲಿಸಿದೆ. ಪೊನ್ನಕ್ಕ ಇರಿಯಲ್ಪಟ್ಟಳು ಎಂಬ ಅರ್ಥಕ್ಕಿಂತ ಇರಿದಳು ಎಂಬ ಅರ್ಥವೇ ಸರಿ ಎಂದು ಭಾವಿಸಲು ಅವಕಾಶಗಳಿವೆ. ಬಹುಶಃ ಸಿರಿವುರದ ಕಾಡಿನಲ್ಲಿ ಬೀಡು ಬಿಟ್ಟಿದ್ದ ಗೌಡನೊಬ್ಬ ಯಾರೋ ಒಬ್ಬ ಸೆಟ್ಟಿಯನ್ನು ಕೊಂದಿರಬೇಕು. ತಂದೆಯ ಸಾವನ್ನು ಕಂಡ ಮಗಳು ಪೊನ್ನಕ್ಕ ತಂದೆಯನ್ನು ಕೊಂದ ಸೆಟ್ಟಿಯ ವಿರುದ್ಧ ಹೋರಾಡಿ ಸತ್ತಿರಬೇಕು. ವೀರತನದಿಂದ ಹೋರಾಡಿದ ಪೊನ್ನಕ್ಕನ ನೆನಪಿಗೆ ವೀರಗಲ್ಲನ್ನು ಹಾಕಿಸಲಾಗಿದೆ. ಅಂದು ವೀರತನವನ್ನು ಪ್ರದರ್ಶಿಸಿದ ಪೊನ್ನಕ್ಕನನ್ನು, ಆ ಭಾಗದ ಜನ ಅಥವಾ ಅವಳ ಕುಟುಂಬದವರು ದೇವತೆಯನ್ನಾಗಿ ಪರಿಗಣಿಸಿ ಪೂಜಿಸತೊಡಗಿರಬೇಕು. ದೈವತ್ವ ಪಡೆದ ಪೊನ್ನಕ್ಕನೇ ಈಗ ಹೊನ್ನಮ್ಮನಾಗಿ ಪೂಜೆಗೊಳ್ಳುತ್ತಿದ್ದಾಳೆ ಎಂದು ಊಹಿಸಲಾಗಿದೆ.

ಶ್ರವಣಬೆಳಗೊಳದ ಚಿಕ್ಕ ಬೆಟ್ಟದ ಮೇಲೆ, ಬಾಹುಬಲಿ ಬಸದಿಯ ಬಳಿ ಇರುವ ಸುಮಾರು ೧೦ನೆಯ ಶತಮಾನದ ಒಂದು ವೀರಗಲ್ಲು ಶಾಸನವು ಸಾವಿಯಬ್ಬೆ ಎಂಬ ಮಹಿಳೆಯ ಸಾವನ್ನು ದಾಖಲಿಸಿದೆ. ಶ್ರಾವಕ ಧರ್ಮದಲ್ಲಿ ಹೆಸರು ಪಡೆದಿದ್ದ ಸಾವಿಯಬ್ಬೆಯು ಯಾವುದೋ ಹೋರಾಟದಲ್ಲಿ ಭಾಗವಹಿಸಿ, ಯುದ್ಧದಲ್ಲಿ ಗಾಯಗೊಂಡು, ನಂತರ ಸಲ್ಲೇಖನ ವ್ರತವನ್ನು ಸ್ವೀಕರಿಸಿ, ಪ್ರಾಣತ್ಯಾಗ ಮಾಡಿರಬಹುದೆಂದು ಡಾ|| ಶೇಷಶಾಸ್ತ್ರಿ ಊಹಿಸಿದ್ದಾರೆ. ಈ ವೀರಗಲ್ಲಿನ ಮೇಲಿರುವ ಶಿಲ್ಪವು ಸಾವಿಯಬ್ಬೆಯು ಕುದುರೆಯ ಮೇಲೆ ಕುಳಿತು ಹೋರಾಡುತ್ತಿರುವ ಮತ್ತು ಜಿನಧ್ಯಾನ ಮಾಡುತ್ತಾ ಪ್ರಾಣತ್ಯಾಗ ಮಾಡಿ, ಜಿನಲೋಕ ಸೇರಿರುವುದನ್ನು ಚಿತ್ರಿಸಿದೆ. ಮಾಚಗಾವುಂಡ ಎಂಬುವವನ ಮಗಳು ಲಕ್ಷ್ಮಮ್ಮ ಗಾವುಂಡಿ ಎಂಬುವವಳು ಕ್ರಿ.ಶ.೧೦೪೧ರಲ್ಲಿ ಗೋಗ್ರಹಣ ಒಂದರಲ್ಲಿ . ಯುದ್ಧ ಮಾಡಿ, ಗೋವುಗಳನ್ನು ಹಿಂದಿರುಗಿಸಿ ಸತ್ತ ವಿಷಯವನ್ನು ಸಿದ್ಧನ ಹಳ್ಳಿಯ ವೀರಗಲ್ಲೊಂದು ತಿಳಿಸಿದೆ.

ಕಲ್ಯಾಣ ಚಾಲುಕ್ಯ ವಂಶದ ದಶವರ್ಮ್ಮ ಮತ್ತು ಭಾಗಲಾದೇವಿಯರ ಮಗಳು, ಶಿನೆಯ ವಿಕ್ರಮಾದಿತ್ಯ ಮತ್ತು ಅಯ್ಯಣನ ತಂಗಿ ಹಾಗೂ ಹಾನುಗಲ್ಲು ಕದಂಬ ವಂಶದ ಮಯೂರವರ್ಮನ ರಾಣಿಯಾಗಿದ್ದ ಅಕ್ಕಾದೇವಿಯು ಗುಣದ ಬೆಡಂಗಿ, ಏಕವಾಕ್ಯೆ ಎಂಬ ಬಿರುದುಗಳ ಜೊತೆಗೆ ರಣಭೈರವಿ ಎಂಬ ಬಿರುದನ್ನೂ ಪಡೆದಿದ್ದಳು. ವಿಕ್ರಮಪುರ (ಅರಸಿ ಬೀದಿ) ವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳುತ್ತಿದ್ದ ಅಕ್ಕಾದೇವಿಯು ಐದು ನೂರು ವಿದ್ಯಾರ್ಥಿಗಳ ಊಟ, ಬಟ್ಟೆ ಮತ್ತು ವಸತಿಗಳಿಗಾಗಿ ಭೂದಾನ ಮಾಡಿದ್ದಳು. ಇಂತಹ ಉತ್ತಮ ಕೆಲಸಗಳಲ್ಲಿ ಆಸಕ್ತಿ ಇದ್ದ ಅಕ್ಕಾದೇವಿಯು ಕ್ರಿ.ಶ. ೧೦೪೭ರ ಒಂದು ಶಾಸನದ ಪ್ರಕಾರ ಗೋಕಾಕದ ಕೋಟೆಗೆ ಮುತ್ತಿಗೆ ಹಾಕಿ, ಅಲ್ಲಿಯ ತಂಟೆಕೋರ ಅಥವಾ ರಾಜದ್ರೋಹಿಯಾದ ಮಾಂಡಲಿಕನಿಗೆ ಬುದ್ಧಿ ಕಲಿಸಿದ್ದಳು.

ಹೊಯ್ಸಳ ಬಲ್ಲಾಳನ ರಾಣಿ ಉಮಾದೇವಿಯು ಬೆಳಗವರ್ತಿಯ ಮಂಡಳೇಶ್ವರ ಮಲ್ಲದೇವರಸನ ಜೊತೆಗೆ ಒಂದೇ ವರ್ಷದಲ್ಲಿ ಮೂರು ಬಾರಿ ಯುದ್ಧ ಮಾಡಿದ್ದನ್ನು ಹೊನ್ನಾಳಿಯ ಒಂದು ಶಾಸನದಿಂದ ತಿಳಿಯಲಾಗಿದೆ.

ಈಗಾಗಲೇ ಪ್ರಸ್ತಾಪಿಸಲಾಗಿರುವ ದಂಡಿನ ಶಿವರದ ಸಮೀಪದ ಅರಕೆರೆ ಗ್ರಾಮದ ಶಾಸನದದಲ್ಲಿ ಉಲ್ಲೇಖಿತಳಾಗಿರುವ ಪೊನ್ನಕ್ಕನಂತೆಯೇ ವೀರತನವನ್ನು ಮೆರೆದ, ಆದರೆ ದೈವತ್ವಕ್ಕೇರದ ಮತ್ತೊಬ್ಬ ಹೆಣ್ಣೆಂದರೆ ಹರಿಯಕ್ಕ. ಶಿವಮೊಗ್ಗ ಜಿಲ್ಲೆಯ ಶಿಕಾರಿಪುರದ ಕೆರೆಯ ಅಂಚಿನಲ್ಲಿದ್ದ (ಈಗ ಶಿವಮೊಗ್ಗದ ಶಿವಪ್ಪನಾಯಕನ ಅರಮನೆಯ ವಸ್ತು ಸಂಗ್ರಹಾಲಯದಲ್ಲಿದೆ) ಶಾಸನ ಸಹಿತ ವೀರಗಲ್ಲು ಶಾಸನವು ಮಾದಿಗವುಡನ ಮಗಳು ಹರಿಯಕ್ಕನು 'ತಂದೆಯ ಕೂಡೆ ಕಾದುವರ ಕೂಡೆ ಕಾದಾಡಿ ಹರಿಯಕ್ಕ ದೇವಲೋಕಕ್ಕೆ ಹೋದಡೆ ತಂಮ ಚಿಕ್ಕ ತಂದೆ ಚೆಂನನು ನಿಲ್ಸಿದ ಬೀರಗಲು' ಎಂದು ದಾಖಲಿಸಿದೆ. ಈ ಶಾಸನದ ಕಾಲ ಕ್ರಿ.ಶ.೧೪೪೬.

ಹೀಗೆ ಶಾಸನಗಳು ಆಯಾ ಕಾಲದಲ್ಲಿನ ಕೆಲವು ಮಹಿಳೆಯರ ಸಾಧನೆಗಳನ್ನು ದಾಖಲಿಸಿವೆ. ಅದು ಸರ್ವ್ವಶಾಸ್ತ್ರ ಪ್ರಸಿದ್ಧೆ ಎಂಬ ಬಿರುದು ಪಡೆದಿದ್ದ 'ಸಾವಿನಿರ್ಮ್ಮಡಿ' ಇರಬಹುದು, ಸಹಗಮನ ಮಾಡಿ ಕೀರ್ತಿ ಪಡೆದ 'ದೇಕಬ್ಬೆ' ಆಗಿರಬಹದು, ದಾನ ಚಿಂತಾಮಣಿ ಎಂಬ ಬಿರುದು ಪಡೆದಿದ್ದ 'ಅತ್ತಿಮಬ್ಬೆ' ಆಗಿರಬಹುದು, ದೇವಾಲಯಗಳನ್ನು ಕಟ್ಟಿಸಿದ ಲೋಕ ಮಹಾದೇವಿ ಮತ್ತು ತ್ರೈಲೋಕ್ಯ ಮಹಾದೇವಿ ಆಗಿರಬಹುದು , ಪಿಸುಣರ ಮಾತನ್ನು ಕೇಳಿ ತನ್ನ ಪ್ರಜೆಗಳ ಮೇಲೇ ಧಾಳಿ ಮಾಡಿ, ತಪ್ಪು ತಿಳಿದ ಬಳಿಕ ನೊಂದು, ಪ್ರಜೆಗಳ ಕ್ಷಮೆ ಕೇಳಿದ ಚೋಳ ಮಹಾದೇವಿ ಆಗಿರಬಹುದು, ನಾಟ್ಯದಲ್ಲಿ ಹೆಸರು ಮಾಡಿದ್ದ ಶಾಂತಲೆ ಆಗಬಹುದು , ಹೀಗೆ ಪುರುಷರಂತೆಯೇ ತಮ್ಮ ಕ್ಷೇತ್ರಗಳಲ್ಲಿ ಪ್ರಸಿದ್ಧರಾಗಿದ್ದ ಮಹಿಳೆಯರ ಬಗೆಗೂ ಶಾಸನಗಳು ಮಹತ್ವದ ಮಾಹಿತಿಗಳನ್ನು ನೀಡುತ್ತಿವೆ.

■ ಎಚ್. ಎಸ್. ಗೋಪಾಲ ರಾವ್
'ಸ್ವಸ್ತಿಶ್ರೀಸ್ಕಂದ',ಅರಸಿನಕುಂಟೆ, ನೆಲಮಂಗಲ ತಾಲ್ಲೂಕು
ಬೆಂಗಳೂರು ಗ್ರಾಮಾಂತರ ಜಿಲ್ಲೆ-೫೬೨೧೨೩

# ಫ್ಯಾಸಿಸಮ್ ಹಿಮ್ಮೆಟ್ಟಿಸಿದ ಫ್ರೆಂಚ್ ಚುನಾವಣೆ

ಫ್ರಾನ್ಸ್ ದೇಶದ ರಾಷ್ಟ್ರಪತಿ ಸ್ಥಾನಕ್ಕೆ ನಡೆದ ಚುನಾವಣೆಗಳು ಪ್ರಪಂಚದ ಎಲ್ಲ ಜನರ ಗಮನ ಸೆಳೆದಿದೆ. ಅದು ಹಾಲಿ ರಾಷ್ಟ್ರಪತಿ ಜೇಕಸ್ ಷಿರಾಕ್ ಅತ್ಯಧಿಕ ಮತ ಗಳಿಸಿ ಪುನರಾಯ್ಕೆಯಾದರೆಂಬ ಕಾರಣದಿಂದಲ್ಲ, ಬದಲಾಗಿ, ಅವರು ಆಯ್ಕೆಗೊಂಡ ರೀತಿಯಿಂದಾಗಿ. ಯುರೋಪು ಖಂಡದಲ್ಲಿ ರಾಜಕೀಯವಾಗಿ ಜಾಗೃತಗೊಂಡಿರುವ ಫ್ರೆಂಚ್ ಜನತೆಯ ಸಮಯಪ್ರಜ್ಞೆಯಿಂದ ಆಡಳಿತ ಫ್ಯಾಸಿಸ್ಟರ ಕೈವಶವಾಗುವುದು ತಪ್ಪಿತು. ಸೋಷಿಯಲ್ ಡೆಮಾಕ್ರಾಟರು, ಸೋಷಲಿಸ್ಟರು, ಕಮ್ಯುನಿಸ್ಟರು ಹೆಚ್ಚು ಕಡಿಮೆ ಸಮಬಲ ಹೊಂದಿರುವ ಫ್ರಾನ್ಸ್‌ನಲ್ಲಿ ಉಗ್ರ ಬಲಪಂಥೀಯರು ಈಚೆಗೆ ಪ್ರಬಲಗೊಳ್ಳುತ್ತಿರುವುದು ಆತಂಕಕಾರಿ ಬೆಳವಣಿಗೆ. ಈ ಸಲದ ರಾಷ್ಟ್ರಪತಿ ಚುನಾವಣೆ ಅದಕ್ಕೆ ನಿದರ್ಶನ. ಮೊದಲ ಸುತ್ತಿನ ಚುನಾವಣೆಗಳಲ್ಲಿ ಉಗ್ರಬಲಪಂಥೀಯವಾದಿ ಜೀನ್ ಮಾರೀ ಲೆಪೆನ್ ಗಳಿಸಿದ ಯಶಸ್ಸು ಹಾಗೂ ಅವರ ಸೋಷಲಿಸ್ಟ್ ಪ್ರಧಾನಿ ಲಿಯೊನೆಲ್ ಜೋಸ್ಪಿನ್ ಪರಾಜಯ ಜನರನ್ನು ಎಚ್ಚರಗೊಳಿಸಿತು. ಅಧ್ಯಕ್ಷ ಷಿರಾಕ್‌ಗೆ ಮೊದಲ ಸುತ್ತಿನಲ್ಲಿ ಲಭಿಸಿದ್ದು ಶೇ. ೨೦ರಷ್ಟು ಮತ. ಹಾಗಾಗಿ ಎರಡನೇ ಸುತ್ತಿನ ಮತದಾನದಲ್ಲಿ ಸೋಷಲಿಸ್ಟ್ ಮತ್ತು ಕಮ್ಯುನಿಸ್ಟ್ ಪಕ್ಷಗಳ ಬೆಂಬಲದಿಂದ ಜೇಕಸ್ ಷಿರಾಕ್‌ಗೆ ಶೇ. ೮೦ರಷ್ಟು ಮತ ದೊರೆತು ಜಯಶಾಲಿಯಾದರು. ಗಮನಾರ್ಹವಾದ ಒಂದು ಅಂಶವೆಂದರೆ ಮೊದಲ ಸುತ್ತಿಗಿಂತ ಎರಡನೇ ಸುತ್ತಿನಲ್ಲಿ ಅಧಿಕ ಸಂಖ್ಯೆಯಲ್ಲಿ ಮತದಾರರು ಮತ ಚಲಾಯಿಸಿದ್ದುದು.

ಈ ಚುನಾವಣಾ ಫಲಿತಾಂಶಗಳು ನಾನಾ ಕಾರಣಗಳಿಂದ ಮಹತ್ವಪೂರ್ಣವಾದ್ದು. ಮೊದಲನೆಯದಾಗಿ, ಫ್ರಾನ್ಸ್‌ನಲ್ಲಿ ಉಗ್ರ ಬಲಪಂಥೀಯ ನ್ಯಾಷನಲ್ ಫ್ರಂಟ್‌ನ ಫ್ಯಾಸಿಸ್ಟ್ ಲೆ ಪೆನ್ ಅಧಿಕಾರಕ್ಕೆ ಬರುವುದು ತಪ್ಪಿತು. ಎರಡನೆಯದಾಗಿ, ಎಡಪಕ್ಷಗಳು, ಪ್ರಜಾಪ್ರಭುತ್ವ ಶಕ್ತಿಗಳ ಛಿದ್ರತೆಯಿಂದ ಲಾಭವಾಗುವುದು ಫ್ಯಾಸಿಸ್ಟ್ ಶಕ್ತಿಗಳಿಗೆ ಎಂಬುದನ್ನು ಸ್ಪಷ್ಟವಾಗಿ ತೋರಿಸಿತು. ಮೂರನೆಯದಾಗಿ, ಬೆಳೆಯುತ್ತಿರುವ ಫ್ಯಾಸಿಸ್ಟ್ ಶಕ್ತಿಗಳ ಬಗ್ಗೆ ಇಡೀ ಯುರೋಪ್ ಜಗತ್ತನ್ನು ಎಚ್ಚರಿಸಿತು. ಫ್ರೆಂಚ್ ಚುನಾವಣೆಗಳಲ್ಲಿ ಜೇಕಸ್ ಷಿರಾಕ್‌ಗೆ ಎಡ ಪಕ್ಷಗಳು ನೀಡಿದ ಬೆಂಬಲ ಆತ ಯೋಗ್ಯ ಅಭ್ಯರ್ಥಿ ಎಂದಾಗಲೀ, ಸೋಷಿಯಲ್ ಡೆಮಾಕ್ರಟರ ನೀತಿಗಳಿಗೆ ಸಮ್ಮತಿ ಎಂದಾಗಲೀ ಅರ್ಥವಲ್ಲ. ''ಫ್ಯಾಸಿಸ್ಟ್‌ಗಿಂತ ವಂಚಕ ಮೇಲು'' ಎಂದು. ಚುನಾವಣೆಗಳಲ್ಲಿ ಕಮ್ಯುನಿಸ್ಟ್, ಸೋಷಲಿಸ್ಟ್ ಹಾಗೂ ಇತರ ಪಕ್ಷಗಳು ಷಿರಾಕ್‌ಗೆ ಬೆಂಬಲ ನೀಡಿದ್ದ ಘೋಷಣೆಯೂ ಅದೇ ಆಗಿತ್ತು. ಸದ್ಯಕ್ಕೇನೊ ಅಪಾಯ ತಪ್ಪಿದೆ. ಆದರೆ ಫ್ಯಾಸಿಸ್ಟ್‌ರನ್ನು ಕಡೆಗಣಿಸುವ ಹಾಗಿಲ್ಲ. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಜನವಿರೋಧಿ ನೀತಿ ಮುಂದುವರಿದಂತೆ, ಬಿಕ್ಕಟ್ಟು ಹೆಚ್ಚಾದಂತೆ ಈ ಶಕ್ತಿಗಳು ಪರಿಸ್ಥಿತಿಯನ್ನು ದುರುಪಯೋಗಪಡಿಸಿಕೊಳ್ಳುವುದು ಖಂಡಿತ.

ಎರಡನೇ ಮಹಾಯುದ್ಧದಲ್ಲಿ ಹಿಟ್ಲರನ ನಾಜಿ ಪಡೆಗಳ ಸೋಲಿನ ಜೊತೆಯಲ್ಲೇ ಫ್ಯಾಸಿಸಮ್ ಕೂಡ ಅವಸಾನ ಹೊಂದಿತು ಎಂದು ಭಾವಿಸುವುದು ಸರಿಯಲ್ಲ. ಯುರೋಪಿನ ರಾಷ್ಟ್ರಗಳಲ್ಲಿ ಹಾಗೂ ಪ್ರಪಂಚದ ಇತರ ರಾಷ್ಟ್ರಗಳಲ್ಲಿ ಫ್ಯಾಸಿಸ್ಟ್ ಪ್ರವೃತ್ತಿಗಳು ವಿವಿಧ ರೂಪಗಳಲ್ಲಿ ಕಾಣಿಸಿಕೊಳ್ಳುತ್ತಿವೆ. ಆರ್ಥಿಕ ಪರಿಸ್ಥಿತಿ ಹದಗೆಡುತ್ತಿದ್ದು ನಿರುದ್ಯೋಗಿಗಳ ಸಂಖ್ಯೆ ಹೆಚ್ಚುತ್ತಿದ್ದು ಸರಕಾರ ಜನತೆಯ ಸಮಸ್ಯೆಗಳನ್ನು ಬಗೆಹರಿಸಲು ವಿಫಲಗೊಳ್ಳುತ್ತಿದ್ದಂತೆ ಅದರ ಲಾಭ ಪಡೆದುಕೊಳ್ಳಲು ಫ್ಯಾಸಿಸ್ಟ್ ಶಕ್ತಿಗಳು ಸಿದ್ಧವಾಗಿರುತ್ತವೆ. ಸಂಕುಚಿತ ರಾಷ್ಟ್ರೀಯವಾದ, ಅನ್ಯದೇಶೀಯರ ಬಗ್ಗೆ ದ್ವೇಷಾಸೂಯೆ ಭಾವನೆಗಳ ಪ್ರಚೋದನೆ ಫ್ಯಾಸಿಸ್ಟರು ಅನುಸರಿಸುವ ತಂತ್ರ. ಯುದ್ಧಾನಂತರ ಮೊದಲ ದಶಕಗಳಲ್ಲಿ ಬಹಿರಂಗವಾಗಿಯೂ ಬರಲು ಹಿಂಜರಿಯುತ್ತಿದ್ದ ಫ್ಯಾಸಿಸ್ಟರು ಯುರೋಪಿನ ದೇಶಗಳಲ್ಲಿ ಕ್ರಮೇಣ ಬೆಳೆಯ ತೊಡಗಿದರು. ಜರ್ಮನಿಯಲ್ಲಿ, ಇಂಗ್ಲೆಂಡಿನಲ್ಲಿ, ರಷ್ಯಧಲ್ಲಿ, ಫ್ರಾನ್ಸ್‌ನಲ್ಲಿ ಹಾಗೂ ಇತರ ದೇಶಗಳಲ್ಲಿ ಫ್ಯಾಸಿಸ್ಟ್ ನ್ಯಾಷನಲ್ ಫ್ರಂಟ್ ರಾಜಕೀಯ ಪಕ್ಷವಾಗಿ ತಲೆ ಎತ್ತಿರುವುದಲ್ಲದೆ, ಮಹತ್ವಪೂರ್ಣ ಗಳಿಕೆಗಳನ್ನು ಸಾಧಿಸಿದೆ. ಸ್ಥಳೀಯ ಚುನಾವಣೆಗಳಲ್ಲಿ, ರಾಷ್ಟ್ರೀಯ ಚುನಾವಣೆಗಳಲ್ಲಿ ಭಾಗವಹಿಸುತ್ತಿವೆ. ಹಲವೆಡೆಗಳಲ್ಲಿ ಫ್ಯಾಸಿಸ್ಟ್ ಯುವಕರ ತಂಡಗಳವರು ಅನ್ಯ ದೇಶೀಯರ ಮೇಲೆ ದಾಳಿ ನಡೆಸಿರುವ ಪ್ರಕರಣಗಳು ವರದಿಯಾಗಿವೆ. ಪರಕೀಯರನ್ನು ಹೊರಗೆ ಹಾಕಬೇಕು ಎನ್ನುವುದು ಅವರ ಪ್ರಮುಖ ಘೋಷಣೆ. ನಿರುದ್ಯೋಗಿಗಳಾದ ಯುವಜನರು ಫ್ಯಾಸಿಸ್ಟರ ಕಡೆಗೆ ವಾಲುತ್ತಿರುವುದು ಅಪಾಯಕಾರಿ ಸಂಜ್ಞೆ.

ಯುರೋಪಿನ ಹಲವು ದೇಶಗಳಲ್ಲಿ 'ಸ್ಕಿನ್ ಹೆಡ್ಸ್' ಎಂಬ ತಲೆ ಬೋಳಿಸಿಕೊಂಡಿರುವ ಯುವಕರನ್ನೂ, ವಿಚಿತ್ರ ಉಡುಪುಗಳನ್ನು ಧರಿಸಿ ನಾಜಿ ಚಿಹ್ನೆಯನ್ನು ಪ್ರದರ್ಶಿಸುವವರನ್ನೂ ಕಾಣಬಹುದು. ಅನ್ಯದೇಶೀಯರ ಮೇಲೆ ಹಲ್ಲೆ ನಡೆಸುವವರಲ್ಲಿ ಇವರೇ ಮುಂದಳ. ಈಗಲೇ ಕ್ರಮ ತೆಗೆದುಕೊಂಡು ಸಂಘಟಿತರೂಪದಲ್ಲಿ ಫ್ಯಾಸಿಸ್ಟ್ ಶಕ್ತಿಗಳನ್ನು ಎದುರಿಸದೇ ಹೋದಲ್ಲಿ ಮುಂದೆ ಅನಾಹುತ ತಪ್ಪಿಸುವುದು ದುಸ್ತರವಾಗುತ್ತದೆ. ಒಂದು ಸಮಾಧಾನಕರ ಸಂಗತಿ ಎಂದರೆ ಫ್ರೆಂಚ್ ರಾಷ್ಟ್ರಪತಿ ಚುನಾವಣೆಗಳ ಮೊದಲ ಸುತ್ತಿನ ಫಲಿತಾಂಶಗಳು ಯುರೋಪಿನ ಪ್ರಜಾಪ್ರಭುತ್ವ ಶಕ್ತಿಗಳನ್ನು ಜಾಗೃತಗೊಳಿಸಿದ್ದು. ಈ ಸಲದ ಮೇ ದಿನದ ರ್‍ಯಾಲಿಗಳಲ್ಲಿ ಪ್ರಾಮುಖ್ಯವಾಗಿ ಕೇಳಿಬಂದದ್ದು ಫ್ಯಾಸಿಸ್ಟ್ ವಿರೋಧಿ ಘೋಷಣೆಗಳು; ಎಲ್ಲ ಯುರೋಪಿನ ದೇಶಗಳಲ್ಲಿ, ರಷ್ಯದಲ್ಲಿ ಜರುಗಿದ ಫ್ಯಾಸಿಸ್ಟ್ ವಿರೋಧಿ ಬೃಹತ್ ಪ್ರದರ್ಶನಗಳು. ಜಾಗತೀಕರಣದ ಪ್ರಕ್ರಿಯೆ, ಯುರೋಪಿನ ಒಕ್ಕೂಟದ ಸ್ಥಾಪನೆಯತ್ತ ಕ್ರಮಗಳು, ವಿದೇಶೀಯರ ವಲಸೆಯ ಹಿನ್ನೆಲೆಯಲ್ಲಿ ಫ್ಯಾಸಿಸ್ಟರಿಗೆ 'ರಾಷ್ಟ್ರೀಯ ಅಸ್ಮಿತೆ' ಹೆಸರಿನಲ್ಲಿ ಜನರನ್ನು ಆಕರ್ಷಿಸಲು ಅನುಕೂಲವಾಗಿದೆ. ಜರ್ಮನಿಯಲ್ಲಿ ಹಿಟ್ಲರ್ ಅಧಿಕಾರ ಗ್ರಹಣ ಮಾಡಿದ್ದು ಉಗ್ರ ರಾಷ್ಟ್ರೀಯತಾವಾದದ ಮೇಲೆ. ಕಮ್ಯುನಿಸ್ಟ್ ಮತ್ತು ಸೋಷಲಿಸ್ಟ್ ಪಕ್ಷಗಳ ನಡುವಣ ವಿರಸ ಅವನ ಮಾರ್ಗವನ್ನು ಸುಗಮವಾಗಿಸಿತು ಎನ್ನುವುದನ್ನು ಮರೆಯುವ ಹಾಗಿಲ್ಲ. ಇಂದು ಜನತೆ ಎದುರಿಸುತ್ತಿರುವ ಸಮಸ್ಯೆಗಳನ್ನು ಸರಕಾರಗಳು ಪ್ರಜಾಪ್ರಭುತ್ವ ರೀತಿಯಲ್ಲಿ ಬಗೆಹರಿಸಲು ತೊಡಗದಿದ್ದಲ್ಲಿ ಪರಿಸ್ಥಿತಿ ಕೈಮೀರಿ ಹೋಗುವುದು ನಿಶ್ಚಿತ.

ಫ್ರೆಂಚ್ ಚುನಾವಣೆಗಳ ಪಾಠ ಭಾರತದ ಪ್ರಜೆಗಳಾದ ನಮಗೂ ಬಹುಮುಖ್ಯ. ಪ್ರಜಾಸತ್ತಾತ್ಮಕ, ಧರ್ಮನಿರಪೇಕ್ಷ ಶಕ್ತಿಗಳ ಛಿದ್ರತೆಯಿಂದ ಪ್ರತಿಗಾಮಿ ಮತೀಯವಾದಿ ಶಕ್ತಿಗಳು ಇಂದು ಅಧಿಕಾರ ಸ್ಥಾನಕ್ಕೇರಿರುವುದೇ ಸಾಕ್ಷಿ. ಅನ್ಯಮತೀಯ ಅಲ್ಪಸಂಖ್ಯಾತರ ವಿರುದ್ಧ ದ್ವೇಷದ ಕಿಚ್ಚೆಬ್ಬಿಸಿ ಹಿಂದೂ ರಾಷ್ಟ್ರದ ಸ್ಥಾಪನೆಯ ಕನಸು ಕಾಣುತ್ತಿರುವ ಸಂಘ ಪರಿವಾರದ ಶಕ್ತಿಗಳು ಏನು ಮಾಡಬಲ್ಲವು ಎಂಬುದನ್ನು ಗುಜರಾತ್ ತೋರಿಸಿದೆ. ಈ ಫ್ಯಾಸಿಸ್ಟ್ ಶಕ್ತಿಗಳನ್ನು ಒಂದುಗೂಡಿ ಎದುರಿಸಿ ಹಿಮ್ಮೆಟ್ಟಿಸದೇ ಹೋದಲ್ಲಿ ವಿಪತ್ತು ಖಂಡಿತ.

ಶಿಯಾರ್ಜ
೮೪೯, ೬ನೇ ಕ್ರಾಸ್, ೧ನೇ ಮೇನ್, ಬನಶಂಕರಿ ೩ನೇ ಹಂತ ೩ನೇ ಫೇಜ್, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು- ೮೫

### ಹೋಳಿ



ಹಲವು ಬಣ್ಣ ಬೆರೆಸಿದ
ನೀರಿನಲಿ ಆಡುವರು ಹೋಳಿ
ಗುಜರಾತಿನಲಿ ಆಡಿದರು
ನರನರದ ನೆತ್ತರಿನ ಹೋಳಿ

ಡಾ|| ರಂಗಾರೆಡ್ಡಿ ಕೋಡಿರಾಂಪುರ
ಗೌರಿಬಿದನೂರು



# ಮಲೆಗಳಲ್ಲಿ ಮದುಮಗಳು
## ಆಧುನಿಕತೆಯ ಕೆಲವು ವಿಭಾಗಗಳು

**ಪು**ಟ್ಟಪ್ಪನವರನ್ನು ನಾವು ನವೋದಯ ಕಾಲಘಟ್ಟದ ಕೃತಿಕಾರರೆಂದು ಗುರುತಿಸುತ್ತೇವೆ. ಹೀಗೆ ಗುರುತಿಸುವಾಗ ನವೋದಯದ ತಾತ್ವಿಕ ಭಿತ್ತಿಗಳು ಅವರ ಕೃತಿಗಳಲ್ಲಿ ಹೇಗೆ ಕಾಣಿಸಿಕೊಳ್ಳುತ್ತವೆ ಎಂದು ನೋಡಬೇಕು. ನವೋದಯವು ಒಡಮೂಡುವುದು ವಸಾಹತುಶಾಹಿಗೆ ಪ್ರತಿಕ್ರಿಯಿಸುವ ಹಿನ್ನೆಲೆಯಲ್ಲಿ. ಹೀಗೆ ವಸಾಹತುಶಾಹಿಗೆ ಪ್ರತಿಕ್ರಿಯಿಸುವಾಗ ಅದು ಎಲ್ಲಿಯೂ ವಸಾಹತುಶಾಹಿಯನ್ನು ದೂರುವುದಿಲ್ಲ; ಬದಲು ಅದನ್ನು ಸ್ವೀಕರಿಸುತ್ತಲೇ, ಅವರಿಂದ ಪಡೆದ ಜ್ಞಾನದ ಹಿನ್ನೆಲೆಯಲ್ಲಿ ಒಂದು ರಾಷ್ಟ್ರದ ಕಲ್ಪನೆಯನ್ನು ಮುಂದಿಡುತ್ತದೆ. ಈ ರಾಷ್ಟ್ರದ ಕಲ್ಪನೆಯು 'ಸ್ವ'ದ ಉಳಿವಿಗಾಗಿ 'ಅನ್ಯ'ವನ್ನು ತಿರಸ್ಕರಿಸುವ ಹಿನ್ನೆಲೆಯಲ್ಲಿರುತ್ತದೆ. ಆದರೆ ಇಲ್ಲಿ ಅವರು ವಸಾಹತುಶಾಹಿಯನ್ನು 'ಅನ್ಯ'ವೆಂದು ಗುರುತಿಸುವುದಿಲ್ಲ. ಕಾರಣವೇನೆಂದರೆ, ವಸಾಹತುಶಾಹಿಯು ಭಾರತೀಯ ಸಂಸ್ಕೃತಿಯನ್ನು ಅವೈಚಾರಿಕವಾದುದು ಎಂದು ಗುರುತಿಸುತ್ತಾ, ಅದು ವೈಚಾರಿಕವಾಗಬೇಕಾದರೆ ಸಾಂಸ್ಕೃತಿಕ, ರಾಜಕೀಯ, ಸಾಮಾಜಿಕ, ಆರ್ಥಿಕ ಪ್ರಗತಿಯ ಜರೂರು ಇದೆಯೆಂದೂ, ವಸಾಹತುಶಾಹಿ ಈ ಪ್ರಗತಿಯನ್ನು ಸಾಧಿಸಲು ಅನುವಾಗುವುದೆಂದೂ, ವಿಚಾರವಾದ ಮತ್ತು ವಿಜ್ಞಾನವನ್ನು ಆಧರಿಸಿದ ಆಧುನಿಕ ವಿಚಾರವನ್ನು ಮುಂದಿಡುತ್ತದೆ. ಆದ್ದರಿಂದ ನವೋದಯದವರು ಪ್ರಾಂತೀಯ ನೆಲೆಯ ರಾಷ್ಟ್ರದ ಕಲ್ಪನೆಯನ್ನು ಮುಂದಿಟ್ಟರು. ಉದಾಹರಣೆಗೆ, ಕನ್ನಡ ನಾಡು ನುಡಿಯ ಉಳಿವಿಗಾಗಿ ಅದು ತನ್ನ ನೆರೆಯ ಬೇರೆ ಬೇರೆ ಭಾಷೆಗಳನ್ನು ತಿರಸ್ಕರಿಸುತ್ತದೆ. ಇದರಿಂದ 'ಅನ್ಯ'ವಾಗಿ ಗೋಚರವಾಗುವುದು ನೆರೆಯ ಬೇರೆ ಬೇರೆ ಭಾಷೆಗಳು. ಹಾಗಾಗಿ ಕನ್ನಡ ನಾಡು ನುಡಿಯ ಒಂದಾಗುವಿಕೆಯ ಹಿನ್ನೆಲೆಯಲ್ಲಿ ಒಂದು ರೀತಿಯ ರಾಷ್ಟ್ರದ ಕಲ್ಪನೆಯನ್ನು ಮುಂದಿಡುತ್ತದೆ.

ಕನ್ನಡ ನವೋದಯದಲ್ಲಿ ಎರಡು ಭಿನ್ನವಾದ ರಾಷ್ಟ್ರೀಯವಾದಿಗಳ ಚಿಂತನೆಗಳನ್ನು ಗುರುತಿಸಬಹುದು. ಭಾರತದಲ್ಲಿ ಒಂದಾಗುವಿಕೆಯ ಬಗ್ಗೆ ಮೊದಲು ಚಿಂತನೆಯನ್ನು ನಡೆಸಿದವರು ತಿಲಕರು ಮತ್ತು ಗಾಂಧೀಜಿ. ಇವರಿಬ್ಬರನ್ನೂ ರಾಷ್ಟ್ರೀಯವಾದದ ಚಿಂತಕರೆಂದು ಗುರುತಿಸಬಹುದು. ಆದರೆ ಇವರ ರಾಷ್ಟ್ರೀಯವಾದದ ಚಿಂತನೆಗಳು ಭಿನ್ನಸ್ವರೂಪದವು. ರಾಷ್ಟ್ರದ ಒಂದುಗೂಡುವಿಕೆಯ ಮೊದಲು ಇಲ್ಲಿರುವ ಜಾತಿಯ ಅಸಮಾನತೆಯನ್ನು ನೀಗಿಸಬೇಕೆಂದು ಗಾಂಧೀಜಿ ಬಯಸುತ್ತಾರೆ. ಆದರೆ ತಿಲಕರು ಹಿಂದೂ ರಾಷ್ಟ್ರದ ಕಲ್ಪನೆಯನ್ನು ಮುಂದಿಡುವ ಮೂಲಕ ಜಾತಿಯ ಅಸಮಾನತೆಯನ್ನು ನೀಗಿಸುತ್ತಾರೆ. ಇದರಿಂದ ಇವರು ಗಣೇಶ ಚೌತಿಯನ್ನು ಮಹಾರಾಷ್ಟ್ರದಲ್ಲಿ ಮೊದಲು ಸಾರ್ವಜನಿಕಗೊಳಿಸುತ್ತಾರೆ. ನಾವು ಅಸಮಾನತೆಯನ್ನು ನೀಗಿಸಿ ನಾವೆಲ್ಲಾ ಒಂದಾಗಿದ್ದೇವೆ ಎಂದು ಸಾರ್ವಜನಿಕರಿಗೆ ತೋರ್ಪಡಿಸುವುದಕ್ಕಾಗಿ ಮಾಡಿದ ಕೆಲಸ ಇದು. ಗಾಂಧೀಜಿ ಬಯಸಿದ ಆಂತರಿಕ ಹಿನ್ನೆಲೆಯ ಸಮಾನತೆಯನ್ನು ಸಾಧಿಸದೆ, ಸಾರ್ವಜನಿಕ ಸಮಾನತೆಯನ್ನು ಸಾಧಿಸುವ ಮೂಲಕ ಒಳಗಿನ ಅಸಮಾನತೆ ಹಾಗೆಯೇ ಉಳಿಯಿತು. ಆದರೆ ಈ ಎರಡೂ ರಾಷ್ಟ್ರೀಯವಾದದ ಹಿನ್ನೆಲೆಯಲ್ಲಿ ಸಾಹಿತ್ಯ ರಚನೆಗಳು ರಚಿತವಾಗಿರುವುದನ್ನು ನವೋದಯದ ಕಾಲಘಟ್ಟದಲ್ಲಿ ಗುರುತಿಸಬಹುದು. ಆಧುನಿಕ ಕನ್ನಡದ ಸಂದರ್ಭಗಳಲ್ಲಿ ಪುಟ್ಟಪ್ಪನವರನ್ನು ಓದುವಾಗ ಅವರ ಕೃತಿಗಳಲ್ಲಿ ಪ್ರಕಟವಾಗುವ ರಾಷ್ಟ್ರೀಯವಾದದ ಸ್ವರೂಪ ಹೇಗೆ ಒಡಮೂಡಿಬಂದಿದೆ ಎಂಬುದನ್ನು ಗಮನಿಸಬೇಕು.

ನವೋದಯದ ಪ್ರಮುಖ ತಾತ್ವಿಕ ಭಿತ್ತಿಯಾದ ರಾಷ್ಟ್ರೀಯತೆಯನ್ನು ಏಕಾಕಾರದಲ್ಲಿ ನೋಡಲು ಸಾಧ್ಯವಿಲ್ಲ. ಇದು ಬಹುರೂಪದಲ್ಲಿ ಪ್ರಕಟವಾಗುತ್ತದೆ. ಆದ್ದರಿಂದ ಬಹುರೂಪಿಯಾದ ರಾಷ್ಟ್ರೀಯತೆ ಕಲ್ಪನೆಯ ಹಿನ್ನೆಲೆಯಲ್ಲಿ ಕುವೆಂಪುರವರ ರಾಷ್ಟ್ರದ ಕಲ್ಪನೆಯ ಸ್ವರೂಪವೇನೆಂದು ನೋಡುವುದೇ ಒಂದು ರೀತಿಯಲ್ಲಿ ಆಧುನಿಕ ವಿಚಾರವನ್ನು ಹೇಳಿದಂತಾಗುತ್ತದೆ.

ಪುಟ್ಟಪ್ಪನವರನ್ನು ಶೂದ್ರ ಕವಿಯೆಂದು ಕೆಲವು ವಿದ್ವಾಂಸರು ಗುರುತಿಸುತ್ತಾರೆ. ಕುವೆಂಪು ಬ್ರಾಹ್ಮಣ ವಿರೋಧಿಯಾಗಿ ಅವರಿಗೆ ಕಾಣುತ್ತಾರೆ. ಇದು ಕೇವಲ ಜಾತಿಯ ಹಿನ್ನೆಲೆಯಲ್ಲಿ ಗುರುತಿಸುವಿಕೆಯಾಗಿದೆ. ಇದನ್ನು ಕೈಬಿಟ್ಟು ಅವರ ಕೃತಿಯಲ್ಲಿ ಆಧುನಿಕ ವಿಚಾರದ ಹಿನ್ನೆಲೆಯಲ್ಲಿ ವ್ಯಕ್ತವಾಗುವ ಸಂಗತಿಗಳಾವುವು ಎಂದು ಗುರುತಿಸಬೇಕು. ಪುಟ್ಟಪ್ಪನವರು ಎಲ್ಲಿಯೂ ಬ್ರಾಹ್ಮಣ ವಿರೋಧಿಯಾಗಿ ಗೋಚರಿಸದೆ, ಒಂದು ರೀತಿಯಲ್ಲಿ ಸನಾತನ ಹಿಂದೂಧರ್ಮದ ಪ್ರತಿಪಾದಕರಾಗಿ ಗೋಚರವಾಗುತ್ತಾರೆ. ಇದು ಪುಟ್ಟಪ್ಪನವರು ಸಮಾಜದಲ್ಲಿದ್ದ ಶೂದ್ರ, ಬ್ರಾಹ್ಮಣರ ಅಸಮಾನತೆಯನ್ನು ನೀಗಿಸಲು ಮಾಡಿದ 'ಪುನರುತ್ಥಾನವಾದಿ' ನಿಲುವಾಗಿದೆ.

ಸನಾತನ ಹಿಂದೂ ಧರ್ಮವು ನಾಲ್ಕು ವರ್ಣಗಳನ್ನು ಒಳಗೊಂಡಿದ್ದರೆ ಅಲ್ಲಿ ಅವರೊಳಗೆ ಅಸಮಾನತೆಯಿರಲಿಲ್ಲವೆಂಬುದು ಒಂದು ಅಭಿಪ್ರಾಯ. ಅಲ್ಲಿರುವ ಅನ್ಯೋನ್ಯತೆಯನ್ನು ಮರುಸ್ಥಾಪಿಸಲು ಪುಟ್ಟಪ್ಪನವರು ಪ್ರಯತ್ನಪಡುತ್ತಿದ್ದವರು. ಅವರು ಶೂದ್ರ ವರ್ಣದಲ್ಲಿದ್ದ ಶ್ರೇಣೀಕರಣವನ್ನು ಕಾದಂಬರಿಯ ಒಳಗಡೆ ಅನಾವರಣ ಮಾಡುತ್ತಾರೆ. ಇಂತಹ ಚಿತ್ರಕ್ಕೆ ಪುಟ್ಟಪ್ಪನವರು ಕಾರಣಗಳನ್ನು ಕಂಡುಕೊಳ್ಳುವಂಥದ್ದು ಬ್ರಾಹ್ಮಣ ಪುರೋಹಿತಶಾಹಿಯ ವಿರೋಧದ ನಿಲುವಿನಲ್ಲಿ.

ಬ್ರಾಹ್ಮಣ ವಿರೋಧದ ಹಿನ್ನೆಲೆಯಲ್ಲಿಯೇ ಮತಾಂತರದ ಅನಿಷ್ಟತೆಗೆ ಒಳಗಾಗುವ ಒಂದು ಚಿತ್ರಣವನ್ನೂ ನೀಡುತ್ತಾರೆ. ರಾಷ್ಟ್ರದ ಅವನತಿಗೆ ಉತ್ತರವಾಗಿ ಹಿಂದೂ ಪುನರುತ್ಥಾನವಾದವನ್ನು ಮುಂದಿಡುತ್ತಾರೆ. ಇಲ್ಲಿ ಕಾದಂಬರಿಯ ಬೇರೆ ಬೇರೆ ವಿವರಗಳನ್ನು ನೋಡಿದರೆ ವ್ಯಕ್ತಿಗಳ ವರ್ತನೆಗೆ ವ್ಯಕ್ತಿಯದೇ ಕಾರಣಗಳಿಲ್ಲ, ಅದು ಜನ್ಮಾಂತರದ ಕಲ್ಪನೆಯ ಅಥವಾ ಕರ್ಮ ಕಲ್ಪನೆಯ ಹಿನ್ನೆಲೆಯಲ್ಲಿರುತ್ತದೆ. ಆದ್ದರಿಂದ ಕಾದಂಬರಿ ರಚನೆಯಲ್ಲಿ ಪೂರ್ವ ನಿರ್ಧರಿತ ಚೌಕಟ್ಟನ್ನು ಗಮನಿಸಬಹುದು. ಸನಾತನ ಧರ್ಮದ ಮಹಿಮೆಯನ್ನು ಸಾರುವ ಉದ್ದೇಶಕ್ಕಾಗಿ ಇಡೀ ಕಾದಂಬರಿಯು ಸನಾತನ ಧರ್ಮದ ಕಲ್ಪನೆಯಲ್ಲಿ ನಿರ್ವಹಣೆಗೊಳ್ಳುತ್ತದೆ. ಕಾದಂಬರಿಯ ವಿಜಯ ಕಾಣುವುದು ಈ ಪುನರುತ್ಥಾನದ ನೆಲೆಯಲ್ಲಿ.

ರಮ್ಯವಾದಿ ಅಧ್ಯಯನಗಳು ಭಾರತವನ್ನು ಆಧ್ಯಾತ್ಮಿಕ ಶ್ರೇಷ್ಠತೆಯಲ್ಲಿ ಮತ್ತು ಪಾಶ್ಚಾತ್ಯೀಕರಣದ ಹಿನ್ನೆಲೆಯಲ್ಲಿ ಚಿತ್ರಿಸುತ್ತವೆ. ಇದರಿಂದಾಗಿ ವಸಾಹತುಶಾಹಿಯ ಸಂದರ್ಭದಲ್ಲಿ ವ್ಯಕ್ತಗೊಳ್ಳುವ ಭಾರತದ ಚಿಂತನೆಗಳಲ್ಲಿ ಈ ಎರಡು ಅಂಶಗಳ ಚಿತ್ರಗಳು ಮಿಶ್ರಣಗೊಳ್ಳುತ್ತವೆ. ಪಾಶ್ಚಿಮಾತ್ಯ ರಾಷ್ಟ್ರಗಳು ಕಳಕೊಂಡ ಔನ್ನತ್ಯವನ್ನು ಭಾರತದ ಮೂಲಕ ಕಾಣಬೇಕು. ಇದರ ಜೊತೆಗೆ ಅದು ಆದರ್ಶವಾದಿ ನಿಲುವನ್ನು ಪ್ರತಿಪಾದಿಸುತ್ತದೆ. ಭಾರತ ವಿಶ್ವಕ್ಕೆ ಒಂದು ಶಕ್ತಿಯನ್ನು ಕೊಡುವ ಬಗೆ ಭಾರತದ ಆಧ್ಯಾತ್ಮಿಕತೆಯಾಗಿದೆ ಎಂಬುದನ್ನು ತಿಳಿಸಲು ಪುಟ್ಟಪ್ಪನವರು ಸನಾತನ ಹಿಂದೂ ಧರ್ಮವನ್ನು ಪ್ರತಿಪಾದಿಸುತ್ತಾರೆ.

ಅವರು ಪ್ರತಿಪಾದಿಸುವ ಆಧುನಿಕತೆಯನ್ನು ಎರಡು ನೆಲೆಗಳಿಂದ ನೋಡಲು ಸಾಧ್ಯ. ಮೊದಲನೆಯದಾಗಿ ಕಾದಂಬರಿ ನಿರೂಪಣಾ ಕ್ರಮದಲ್ಲಿ. ಎರಡನೆಯದಾಗಿ ಕಾದಂಬರಿಯು ಪ್ರತಿಪಾದಿಸುವ ವಿಚಾರದ ನೆಲೆಯಲ್ಲಿ. ಈ ಎರಡು ನೆಲೆಗಳಿಂದ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಪ್ರತಿಪಾದಿತವಾದ ಆಧುನಿಕತೆಯನ್ನು ಗುರುತಿಸಿಕೊಳ್ಳಬಹುದು. ಆಧುನಿಕ ಪೂರ್ವದ ಸ್ಥಿತಿಯನ್ನು ಬೇರೆ ಬೇರೆ ನೆಲೆಗಳಲ್ಲಿ ವಿವರಿಸಲು ಅವರು ತೊಡಗುತ್ತಾರೆ. ಕಾದಂಬರಿಯು ಆಧುನಿಕತೆಯಿಂದ ಬಹುದೂರದ ಸ್ಥಿತಿಯಲ್ಲಿಲ್ಲ; ಬದಲಾಗಿ, ಆಧುನಿಕತೆಗೆ ತನ್ನನ್ನು ತೆರೆದುಕೊಳ್ಳುವ ಸ್ಥಿತಿಯಲ್ಲಿದೆ. ಇಲ್ಲಿ ತನ್ನ ಪರಂಪರೆಯನ್ನು ತೊಡೆದುಕೊಳ್ಳುವ ಸ್ಥಿತಿಯನ್ನು

ಮನಮೋಹನ ಎಂ.

ಕಾಣುತ್ತೇವೆ. ಆಧುನಿಕ ಪೂರ್ವ ಮತ್ತು ಆಧುನಿಕತೆಯ ಮುಖಾಮುಖಿಯ ಸ್ಥಿತಿಯಲ್ಲಿ ಕಾದಂಬರಿಯು ಅನಾವರಣಗೊಳ್ಳುವುದನ್ನು ಕಾಣುತ್ತೇವೆ. ಇಂಥ ಸ್ಥಿತಿಯು ಅಲ್ಲಿನ ಪಾತ್ರ ನಿರೂಪಣೆಯ ಮೂಲಕ ವ್ಯಕ್ತವಾಗಿದೆ. ಶಂಕರ ಹೆಗ್ಡೆ ಮತ್ತು ಸುಬ್ಬಣ್ಣ ಹೆಗಡೆ ಇವರ ಪಾತ್ರ ಚಿತ್ರಣದಲ್ಲಿ ಪರಸ್ಪರ ವಿರುದ್ಧ ಸ್ಥಿತಿ ಒಟ್ಟು ಸೇರುವ ವಿನ್ಯಾಸವಿದೆ. ಸುಬ್ಬಣ್ಣ ಹೆಗಡೆ ಸಂಸ್ಕೃತೀಕರಣಕ್ಕೊಳಗಾಗದ ವ್ಯಕ್ತಿತ್ವವಾಗಿ ಕಂಡುಬರುತ್ತಾನೆ. ಸುಬ್ಬಣ್ಣ ಹೆಗಡೆಯ ಪರಿಸರದೊಂದಿಗೆ ಆತನ ಜೀವನ ಕ್ರಮವೂ ವ್ಯಕ್ತವಾಗುತ್ತದೆ. ಶಂಕರಪ್ಪ ಹೆಗಡೆಯ ಜೀವನದ ಸಂಸ್ಕೃತೀಕರಣವನ್ನು ಸುಬ್ಬಣ್ಣ ಹೆಗಡೆಯ ಹಿನ್ನೆಲೆಯಲ್ಲಿ ಕಾಣುತ್ತೇವೆ. ಶಂಕರಪ್ಪ ಹೆಗ್ಡೆಯ ಜೀವನ ಕ್ರಮದಲ್ಲಿ ಕ್ರಮೇಣ ಬದಲಾವಣೆ ಕಂಡುಬರುತ್ತದೆ. ಇದು ಆಧುನೀಕರಣದ ಪರಿಣಾಮ.

ಕಾದಂಬರಿಯಲ್ಲಿ ಬರುವ ಮತಾಂತರದ ಚಿತ್ರಣದಲ್ಲಿ ಸಾಮಾಜಿಕ ಚಲನೆಯ ಬಗೆಗಿನ ಪುಟ್ಟಪ್ಪನವರ ನಿಲುವನ್ನು ಕಂಡುಕೊಳ್ಳಬಹುದು. ಮತಾಂತರವನ್ನು ಎಲ್ಲಿಯೂ ಒಪ್ಪಿಕೊಳ್ಳದ ರೀತಿಯಲ್ಲಿ ಕಾದಂಬರಿಯ ನಿರೂಪಣಾ ಕ್ರಮವಿದೆ. ಅವರ ಇನ್ನಿತರ ಬರವಣಿಗೆಗಳಲ್ಲೂ ಮತಾಂತರವನ್ನು ವಿರೋಧಿಸುವುದನ್ನು ಕಾಣುತ್ತೇವೆ. ಮತಾಂತರದ ಚಿತ್ರಣದ ಮೂಲಕ ಮತಾಂತರಕ್ಕೆ ಕಾರಣವಾದ ಅಂಶಗಳನ್ನು ವಿವರಿಸುತ್ತಾರೆ. ಮತಾಂತರವನ್ನು ವಿರೋಧಿಸುವ ಪುಟ್ಟಪ್ಪನವರು ಆಧುನಿಕ ರೀತಿಯ ಸಾಮಾಜಿಕ ಚಲನೆಯನ್ನು ಒಪ್ಪಿಕೊಳ್ಳುತ್ತಾರೆ. ವ್ಯಕ್ತಿಚಿತ್ರಣದಲ್ಲಿ ಪರಂಪರೆಯನ್ನು ಚಿತ್ರಿಸುತ್ತಾ ಪರಂಪರೆಯ ಕೊಂಡಿಯನ್ನು ಕೊಡುತ್ತಾರೆ. ಪರಂಪರೆಯ ಕೊಂಡಿಯೊಂದಿಗೆ ಚಲನಶೀಲವಾಗುವ ಸಮಾಜದ ಚಿತ್ರಣವಿದೆ. ಅಲ್ಲಿ ಬಳಕೆಯಾದ ಪದಗಳು ಅಲ್ಲಿನ ಮೌಲ್ಯಗಳನ್ನು ಟೀಕಿಸುವ ರೀತಿಯಲ್ಲಿ ಕಂಡುಬರುತ್ತವೆ. ಸಂಸ್ಕೃತೀಕರಣ ಮತ್ತು ಆಧುನಿಕತೆಯ ನಡುವೆ ಆಧುನಿಕತೆಗೆ ಹೆಚ್ಚು ಒತ್ತನ್ನು ನೀಡುತ್ತಾರಾದರೂ ಆಧುನಿಕತೆ ಮತ್ತು ಸಂಸ್ಕೃತಿಯ ಬೆಸುಗೆಯಿದೆ.

ಆಧುನಿಕತೆಯನ್ನು ಒಂದು ಉಪಕರಣದ ನೆಲೆಯಲ್ಲಿ ಮಾತ್ರ ಕಾಣದೆ ವಿಚಾರದ ನೆಲೆಯಲ್ಲಿಯೂ ಕಾಣಬೇಕಾಗುತ್ತದೆ. ಹಾಗಾಗಿ ಕಾದಂಬರಿಯ ಸಾಂಸ್ಕೃತಿಕ ಲೋಕದಲ್ಲಿ ಆಧುನಿಕತೆಯನ್ನು ಬೇರೆ ಬೇರೆ ಸಂಸ್ಥೆಗಳ ಹಿನ್ನೆಲೆಯಲ್ಲೂ ಕಾಣಬೇಕಾಗುತ್ತದೆ. ಇಲ್ಲಿಯ ಸಾಂಸ್ಕೃತಿಕ ಲೋಕದ ವಿವರಗಳು ಉತ್ಪಾದನಾ ನೆಲೆಯಲ್ಲಿ ಕಂಡುಬರುತ್ತವೆ. ಆ ಬಗೆಯ ಸೂಕ್ಷ್ಮಗಳನ್ನು ವೈಚಾರಿಕವಾಗಿ ನೋಡುವ ದೃಷ್ಟಿ ಆಧುನಿಕತೆಯ ಕಾರಣವಾಗಿ; ಹಾಗಾಗಿ ಆಧುನಿಕತೆಯನ್ನು ವಿಚಾರದ ನೆಲೆಯಲ್ಲಿ ಕಾಣಬೇಕಾಗುತ್ತದೆ. ಜೀವರತ್ನಯ್ಯ ದೇವಯ್ಯನಿಗೆ ಸೈಕಲ್ಲು ಕಲಿಸುವುದರಲ್ಲಿ ಸೈಕಲ್ಲು ಆಧುನಿಕತೆಯ ಉಪಕರಣ ಮಾತ್ರವಾಗಿರದೆ ಧರ್ಮದ ಪ್ರಚಾರವನ್ನು ಮಾಡುವ ಸಾಧನವಾಗಿಯೂ ಇದೆ. ತಂತ್ರಜ್ಞಾನದ ಮೂಲಕವೂ ಮತಾಂತರ ಕಾರ್ಯ ನಡೆಯುತ್ತದೆ ಎನ್ನುವುದನ್ನು ಈ ಮೂಲಕ ಸೂಚಿಸಲು ಯತ್ನಿಸಲಾಗಿದೆ. ಇದಕ್ಕೆ ಸ್ಥಳೀಯ ಜನರ ಪ್ರತಿಕ್ರಿಯೆ ಭಾಷಿಕವಾಗಿ ವ್ಯಕ್ತವಾಗುತ್ತದೆ. ಉದಾಹರಣೆಗೆ, ಬೈಸಿಕಲ್ಲು ಸ್ಥಳೀಯ ಜನರ ಬಾಯಿಯಲ್ಲಿ ಬೀಸುವ ಕಲ್ಲಾಗಿ ಪರಿವರ್ತಿತವಾಗುತ್ತದೆ. ಹೀಗೆ ಪರಕೀಯವಾಗಿರುವ ಸಾಂಸ್ಕೃತಿಕ ಚಿಹ್ನೆ, ತನ್ನ ಸಂಸ್ಕೃತಿಯ ಒಳಗಡೆ ಪ್ರವೇಶಿಸಿದಾಗ ಅದನ್ನು ತನ್ನ ಸಂಸ್ಕೃತಿಯ ಒಳಗೆ ಪರಿವರ್ತಿಸಿಕೊಳ್ಳುತ್ತದೆ. ಈ ರೀತಿಯಲ್ಲಿ ಸಾಂಸ್ಕೃತಿಕ ಬದಲಾವಣೆಯನ್ನು ಗಮನಿಸಿದಾಗ ಇದು ಆಧುನಿಕತೆಯ ಬಗೆಗೆ ಇರುವ ವಿಸ್ಮಯವನ್ನು ಸೂಚಿಸುತ್ತದೆ. ಆಧುನಿಕತೆಯ ಕಾರಣವಾಗಿ ಸಾಮಾಜಿಕ ಔನ್ನತ್ಯವೂ ಲಭಿಸುತ್ತದೆ. ಹಾಗಾಗಿ ತಂತ್ರಜ್ಞಾನ ಉಪಕರಣವಾಗಿ ಮಾತ್ರ ಬರದೆ ಮತೀಯವಾಗಿ ಬೇರೆ ಬೇರೆ ಬದಲಾವಣೆಯನ್ನುಂಟುಮಾಡುತ್ತದೆ. ಮತಾಂತರ ಚಟುವಟಿಕೆಯು ತನ್ನ ಕ್ಷೇತ್ರವನ್ನು ವಿಸ್ತರಣೆ ಮಾಡುವ ರೀತಿಯು ಸಂಸ್ಕೃತಿಯ ಪ್ರತಿನಿಧಿಗಳಲ್ಲಿ ಮಾತ್ರವಲ್ಲದೆ ಕಾದಂಬರಿಕಾರರಲ್ಲೂ ಆತಂಕವನ್ನು ಮೂಡಿಸುತ್ತದೆ. ಹಾಗಾಗಿ ಒಂದು ಕಡೆಯಲ್ಲಿ ಮತಾಂತರದ ಚಟುವಟಿಕೆ ನಡೆಯುತ್ತಿರುವಾಗ ಇನ್ನೊಂದೆಡೆಯಲ್ಲಿ ಅದರ ಸವಾಲನ್ನು ಎದುರಿಸುವ ಶಕ್ತಿಯು ರೂಪುಗೊಳ್ಳುತ್ತದೆ. ಮತಾಂತರದ ಪ್ರಕ್ರಿಯೆಯು ಹಿಂದೂ ಪುನರುತ್ಥಾನವಾದಿತನಕ್ಕೆ ಕಾರಣವಾಗುತ್ತದೆ. ಆಗ ಉಂಟಾದ ಸಾಮಾಜಿಕ ಚಲನೆಯು ಬದುಕಿನ ಪಲ್ಲಟಕ್ಕೆ ಹಾದಿ ಮಾಡಿಕೊಡುತ್ತದೆ.

ಪುಟ್ಟಪ್ಪನವರು ಸಮಾಜದಲ್ಲಿರುವ ಅಸಮಾನತೆಯನ್ನು ಜಾತಿಯ ಹಿನ್ನೆಲೆಯಲ್ಲಿ ಅಲ್ಲದೆ ವರ್ಗದ ಹಿನ್ನೆಲೆಯಲ್ಲೂ ಗುರುತಿಸುತ್ತಾರೆ. ಈ ವರ್ಗದ ಕಲ್ಪನೆ ಅದು ವಸಾಹತುಶಾಹಿಗೆ ಪ್ರತಿಕ್ರಿಯೆಯಾಗಿ ಬರುತ್ತದೆ. ಇದರಿಂದಾಗಿ ಸಮಾಜದಲ್ಲಿರುವ ಜಾತಿಯ ಮೇಲಿನ ಕಲ್ಪನೆಯನ್ನು ಜಮೀನ್ದಾರಿ ಪದ್ಧತಿಯಲ್ಲಿ ಗುರುತಿಸುವ ಮೂಲಕ ವರ್ಗದಲ್ಲಿರುವ ಅಸಮಾನತೆಯನ್ನು ಗುರುತಿಸುತ್ತಾರೆ. ಈ ರೀತಿಯಾಗಿ ವರ್ಗಕಲ್ಪನೆಯೂ ಒಂದು ರೀತಿಯಲ್ಲಿ ಆಧುನಿಕ ವಿಚಾರವಾಗಿದೆ.

''ಮಲೆಗಳಲ್ಲಿ ಮದುಮಗಳು'' ಕಾದಂಬರಿಯ ಮೊದಲ ಅಧ್ಯಾಯದಲ್ಲಿ ಕಂಡುಬರುವ ವರ್ಗದ ಅಸಮಾನತೆಯನ್ನು ಗಮನಿಸಬಹುದು. ಸಿಂಭಾವಿ ಹೆಗ್ಗಡೆ ಮೇಲುವರ್ಗಕ್ಕೆ ಪ್ರತೀಕವಾದರೆ ಗುತ್ತಿ, ಮರಾಟಿ ಮಂಚ ಮುಂತಾದವರು ಕೆಳವರ್ಗಕ್ಕೆ ಪ್ರತೀಕವಾಗುತ್ತಾರೆ. ಈ ರೀತಿಯಲ್ಲಿ ಕುವೆಂಪುರವರು ''ಮಲೆಗಳಲ್ಲಿ ಮದುಮಗಳು'' ಕೃತಿಯ ಆರಂಭವನ್ನೇ ವರ್ಗಭೇದದ ಹಿನ್ನೆಲೆಯಲ್ಲಿ ಮಾಡಿದ್ದಾರೆ. ಇದರ ಮುಖ್ಯ ಉದ್ದೇಶವೇನೆಂದರೆ ಭಾರತದಲ್ಲಿದ್ದ ಜಮೀನ್ದಾರಿ ಪದ್ಧತಿಯ ಧಣಿ – ಒಕ್ಕಲು ಸಂಬಂಧವನ್ನು ಶ್ರೀಮಂತ – ಬಡವ ವರ್ಗಭೇದದ ಹಿನ್ನೆಲೆಯಲ್ಲಿ ನೋಡುವುದು.

ಮನಮೋಹನ ಎಂ.
ಸಂಶೋಧನ ವಿದ್ಯಾರ್ಥಿ, ಕನ್ನಡ ವಿಭಾಗ
ಮದರಾಸು ವಿಶ್ವವಿದ್ಯಾಲಯ, ಮರೀನಾ ಬೀಚ್ ಕ್ಯಾಂಪಸ್
ಚೆನ್ನೈ-೬೦೦ ೦೦೫

## ರಣಹದ್ದುಗಳು



ಯುದ್ಧಕ್ಕೆ ಆಹ್ವಾನ ಇಂದು ಬಂದೀತು
ನಾಳೆ ಬಂದೀತು
ಅಂತ ಕಾದು ಕುಳಿತ ರಣಹದ್ದುಗಳು
ರೆಕ್ಕೆಗಳ ಫಡಫಡಿಸಿ
ಕೊಕ್ಕು ಮಸೆದಿದ್ದೇ ಬಂತು.
ಲೋಕದಧಿಪತಿಗಳ ನಮ್ರ ಸೇವಕರು ನಾವು
ಅಂತ ಬಾಯಿ ಬಡೆದುಕೊಂಡಿದ್ದೇ ಆಯ್ತು.

ಪೆಟ್ರೋಲಿಗಾದರೂ ಈ ಪವಿತ್ರ
ನೆಲದ ಮೇಲಿಳಿಯದೆಯೇ
ಹಾರಿಹೋದವು ಬೋಳುತಲೆಯ ಮೇಲೆ
ವಿಮಾನಗಳು.
ನಿಮ್ಮ ನೆರಳೇ ಬೇಡ
ಅಂದುಬಿಟ್ಟರಲ್ಲ ಧಣಿಗಳು.

ಜನ್ಮವಿಡೀ ಉರುಳು ಸೇವೆ ಮಾಡುತ್ತೇವೆಂದರೂ
ಆದರು ನಗಣ್ಯ.
ಯಾವ ಕರ್ಮದ ಫಲವೋ
ಸಿಗಲೇ ಇಲ್ಲ ಬಿಳಿ ಕೊಡೆ ಹಿಡಿಯುವ ಪುಣ್ಯ.
ಎಷ್ಟು ಬೇಡಿಕೊಂಡರೂ ಕಿವಿಗೊಡಲಿಲ್ಲ
ದೇವದೂತ
ಒಕ್ಕೊರಲಿನಿಂದ ಹಾಡಿದರೂ ಸುಶ್ರಾವ್ಯ
ಸಂಗೀತ.

ಯಾರ ಮನೆಮಕ್ಕಳನ್ನೋ ಬಲಿಕೊಡಲು
ಬಂದಿತ್ತು ಮನಸು.
ತಪ್ಪಿಯೇ ಹೋಯ್ತು ರಣಕೇಕೆ ಹಾಕುವ ಛಾನ್ಸು.

ಮೀನಾ ಸದಾಶಿವ
ನಂ. ೨೭೫೧, ೧೭ನೇ 'ಎ' ಕ್ರಾಸ್
೭ನೇ ಮುಖ್ಯ ರಸ್ತೆ, ಬನಶಂಕರಿ ೨ನೇ ಹಂತ
ಬೆಂಗಳೂರು-೫೬೦ ೦೭೦

**ಪಾ**ರ್ವತಿ ನದಿಯು ಪಾರ್ವತಿ ಕಣಿವೆಯ (೪೮೦೨ ಮೀ.) ಪಶ್ಚಿಮ ದಿಕ್ಕಿನಲ್ಲಿ ಗ್ಲೇಸಿಯಾರ್‌ನಿಂದ ಉದ್ಭವವಾಗುತ್ತದೆ. ಪಾರ್ವತಿ ನದಿಯು ಹರಿದು ಬರುವ ರೀತಿ ನೋಡಿದರೆ ಮೈನವಿರೇಳುತ್ತದೆ. ಕಣಿವೆಯ ಏರುಪೇರುಗಳು, ತಿರುವುಗಳು, ಕಡಿದಾದ ಘಾಟಿಯ ಮೂಲಕ ಹರಿಯುವ ರಭಸವನ್ನು ನೋಡುತ್ತಾ ನಿಂತರೆ ಪಾದಚಾರಿಗಳಿಗೆ ಆಗುವ ಆನಂದ ಹೇಳತೀರದು. ಪಾರ್ವತಿ ನದಿಯು ಆ ಕಡಿದಾದ ಕಣಿವೆಯ ಮೂಲಕ ಹರಿದು ಕುಲು ಪಟ್ಟಣದ ಸಮೀಪದಲ್ಲಿರುವ ಬೂಂತೂರ್ ಎಂಬಲ್ಲಿ ಬೀಯಾಸ್ ನದಿಯನ್ನು ಸೇರುತ್ತದೆ.

ಮಣಿಕರಣ ಇತಿಹಾಸದಲ್ಲಿ ಒಂದು ಮುಖ್ಯ ಯಾತ್ರಾಸ್ಥಳವಾಗಿ ಪ್ರಸಿದ್ಧಿ ಪಡೆದಿದೆ. ಅದು ಕುಲು ಪಟ್ಟಣದಿಂದ ೪೩ ಕಿ. ಮೀ. ದೂರದಲ್ಲಿರುವ ಸ್ಥಳ. ಈ ಮಣಿಕರಣವೇ ನಮ್ಮ ಪಾದಯಾತ್ರೆಯ ಹೊಸ್ತಿಲು, ಪಾರ್ವತಿ ನದಿಯ ತೀರದಲ್ಲಿರುವ ಸಿಖ್ ಪಂಥದ ಒಂದು ಪ್ರಮುಖ ಸ್ಥಳ. ಬಿಸಿನೀರಿನ ಚಿಲುಮೆಗಳಿಗೆ ಈ ಸ್ಥಳ ಪ್ರಸಿದ್ಧ. ಪುರಾಣದಲ್ಲಿ ಹೇಳಿರುವಂತೆ, ಸಿಖ್ ಪಂಥದ ಪ್ರಥಮ ಗುರುವಾದ ಗುರುನಾನಕ್‌ರು ಇಲ್ಲಿಗೆ ತಪಸ್ಸಿಗೆ ಬಂದಾಗ, ಅಲ್ಲಿನ ಚಳಿಗಾಲದಲ್ಲಿ ಅವರು ಅಡುಗೆ ಮಾಡಲು ಕಟ್ಟಿಗೆ ಸಿಕ್ಕಲಿಲ್ಲವಂತೆ. ದೇವರ ಕೃಪೆಯಿಂದ ಅಲ್ಲಿ ಬಿಸಿ ನೀರಿನ ಚಿಲುಮೆ ಉಕ್ಕಿಬಿಟ್ಟಿತಂತೆ! ಆ ಬಿಸಿ ನೀರಿನ ಚಿಲುಮೆಯಲ್ಲಿ ನಾನಕರು ತಮ್ಮ ಆಹಾರವನ್ನು ತಯಾರಿಸಿದರಂತೆ ! ಇದೊಂದು ಪ್ರತೀತಿ.

ಈ ಪ್ರದೇಶದಲ್ಲಿ ಹಲವಾರು ಕಡೆ ಬಿಸಿ ನೀರಿನ ಚಿಲುಮೆಗಳಿವೆ. ಈಗಲೂ ಯಾತ್ರಿಕರು ತಾವು ತಂದ ಅಕ್ಕಿ, ಬೇಳೆ, ತರಕಾರಿಗಳನ್ನು ಬಟ್ಟೆಯಲ್ಲಿ ಕಟ್ಟಿ ಬಿಸಿ ನೀರಿನ ಚಿಲುಮೆಯಲ್ಲಿ ಬೇಯಿಸುತ್ತಾರೆ. ಕೊಂಚ ಸಮಯದಲ್ಲೆ ಬೆಂದು ಆಹಾರ ತಯಾರಾಗುತ್ತದೆ. ಸ್ನಾನ ಮಾಡಬೇಕೆನ್ನುವವರು, ಸ್ವಲ್ಪ ಸ್ವಲ್ಪವಾಗಿ ನೀರನ್ನು ಮೈಮೇಲೆ ಹಾಕಿಕೊಳ್ಳುವರು. ಇನ್ನು ಕೆಲವರು ಸಾಧ್ಯವಾದಲ್ಲಿ ನೀರಿಗೆ ಇಳಿಯುತ್ತಾರೆ. ಇಲ್ಲಿನ ನೀರು ತುಂಬ ಬಿಸಿಯಾಗಿರುತ್ತದೆ. ಈ ಪ್ರಸಿದ್ಧ ಯಾತ್ರಾಸ್ಥಳದ ಗುರುದ್ವಾರದಲ್ಲಿ ಯಾತ್ರಿಕರಿಗೆ ಯಾವ ಕೊರತೆಯೂ ಇಲ್ಲ ! ತಂಗಲು ಕೊಠಡಿಗಳಿವೆ ಮತ್ತು ಇಲ್ಲಿನ 'ಲಂಗರ್'ನಲ್ಲಿ ಊಟೋಪಚಾರಗಳು ಆಗುತ್ತವೆ. ಯಾವುದಕ್ಕೂ ಹಣ ಕೊಡುವ ಹಾಗಿಲ್ಲ. ಅವರು ಕೇಳುವುದೂ ಇಲ್ಲ. ಆದರೆ ಯಾತ್ರಿಕರು ಸ್ವೇಚ್ಛೆಯಿಂದ ಧನ ಸಹಾಯವನ್ನು ಮಾಡಬಹುದು.

ಪಾದಯಾತ್ರೆಯ ಮಾರ್ಗವು ಮಣಿಕರಣದಿಂದ, ಪುಲ್ಗ (೧೯೦೦ ಮೀ.), ರುದ್ರನಾಗ್, ಖೀರ್‌ಗಂಗಾ (೨೯೬೦ ಮೀ.), ಮಂತಲೈ ಮೂಲಕ ಪಿನ್ ಪಾರ್ವತಿ ಕಣಿವೆಗೆ (೪೮೦೨ ಮೀ.), ಹೋಗುತ್ತದೆ. ಈ ಪಾದಯಾತ್ರೆಗೆ 'ಹ್ಞೂಂ'ಕಾರ ಹಾಕಿ ನಮ್ಮನ್ನೆಲ್ಲಾ ಪ್ರೋತ್ಸಾಹಿಸಿದವರೆಂದರೆ, 'ಸ್ಪಾರ್ಕ್' ಸಂಸ್ಥೆಯ ಅಧ್ಯಕ್ಷರು ಮತ್ತು 'ಸೈಂಟ್ ಜಾನ್ ಮೆಡಿಕಲ್ ಕಾಲೇಜ್'ನಲ್ಲಿ ಪ್ರಾಧ್ಯಾಪಕರಾದ ಡಾ॥ ವೆಂಕಟೇಶ್ ಅವರು. ಅವರ ವಾಕ್‌ಚಾತುರ್ಯಕ್ಕೆ ಸಿಕ್ಕಿಬಿದ್ದವರಲ್ಲಿ ೬೧ ವರ್ಷ ಪ್ರಾಯದ ನಾನೂ ಒಬ್ಬ. ನಮ್ಮ ಜೊತೆಗೆ ಚಾರಣಕಾರರಾಗಿ ೬೪ ವರ್ಷ ವಯಸ್ಸಿನ ಶ್ರೀಯುತ ರಾಮಚಂದ್ರ, ವಿಪ್ರೊ ಸಂಸ್ಥೆಯ ಅಧ್ಯಕ್ಷರಾಗಿದ್ದ ೫೮ ವರ್ಷ ವಯಸ್ಸಿನ ಅಶೋಕ್ ಸೂತಾ, ಸೈಂಟ್ ಜಾನ್ ಮೆಡಿಕಲ್ ಕಾಲೇಜಿನಲ್ಲಿ ಇ. ಎನ್.ಟಿ. ಸ್ಪೆಷಲಿಸ್ಟ್ ಆಗಿದ್ದ ೩೭ ವರ್ಷದ ಡಾ॥ ನಳಿನೇಶ ಮತ್ತು ಡೇವಿಸ್ (೩೫) ಹೀಗೆ ಮಧ್ಯಮ ವಯಸ್ಕರ ಮತ್ತು ೫೮ ವಯಸ್ಕರ ಮಿಶ್ರಗುಂಪು. ಕೆಲವರು ಇದಕ್ಕೆ ಮುನ್ನ ಪಾದಯಾತ್ರೆ ಮಾಡಿದವರಲ್ಲ.

ಅತೀವ ಉತ್ಸಾಹ, ನಮ್ಮಲ್ಲಿ ಕೆಲವರ

**ಲೆಫ್ಟಿನೆಂಟ್ ಜನರಲ್ ನರಹರಿ**

ವಯೋಮಿತಿಯನ್ನು ಮುಚ್ಚಿಸಿತ್ತು. ಪಾದಯಾತ್ರೆ ಹೊರಡುವ ಮುನ್ನ ನಮ್ಮ ಸಾಮಗ್ರಿಗಳ ಬಗ್ಗೆ ಚಿಂತೆ. ಟೆಂಟ್, ಮಲಗುವ ಚೀಲ, ಮತ್ತು ಆಹಾರ ಪದಾರ್ಥಗಳನ್ನು ಮುಕ್ಕಾಲು ಭಾಗ ನಾವೇ ತೆಗೆದುಕೊಂಡು ಬೆನ್ನ ಮೇಲೆ ಹೇರಿಕೊಂಡು ಸ್ವಾವಲಂಬಿಗಳಾದೆವು. ಅಲ್ಲದೆ ನಮಗೆ ಸ್ವಲ್ಪ ಭಾರ ಕಡಿಮೆ ಮಾಡಲು ಮತ್ತು ದಾರಿ ತೋರಿಸಲು ಇಬ್ಬರು ಕೂಲಿಗಳನ್ನು ಕರೆದುಕೊಂಡೆವು. ಪ್ರತಿಯೊಬ್ಬರೂ ೧೩ ರಿಂದ ೧೫ ಕೆಜಿ ಭಾರವನ್ನು ಹೊತ್ತುಕೊಂಡಿದ್ದೆವು.

ನಮ್ಮ ತಂಡ ಬೆಂಗಳೂರಿಂದ ಮಣಿಕರಣ ದವರೆಗೂ (೨,೫೦೦ ಕಿ. ಮೀ.) ರಾಮಚಂದ್ರರ ಕಾರಿನಲ್ಲಿ ಹೊರಟಿತ್ತು. ಕಾರಿನ ರಸ್ತೆಯ ಯಾತ್ರೆಯೇ ಒಂದು ಮರೆಯಲಾಗದ ಅನುಭವವಾಗಿತ್ತು. ಬೆಂಗಳೂರನ್ನು ೨೧ನೇ ತಾರೀಖು ಸೆಪ್ಟೆಂಬರ್ ಅಂದು ಬಿಟ್ಟ ನಾವು ಸಿಕಂದರಾಬಾದ್, ನಾಗಪುರ್, ಝಾನ್ಸಿ, ದೆಹಲಿ ಮೂಲಕ ೨೫ನೇ ತಾರೀಖು ಮಣಿಕರಣ ಸೇರಿದೆವು. ದಾರಿಯುದ್ದಕ್ಕೂ ಅಲ್ಲಲ್ಲಿ ಮಳೆ, ಅಷ್ಟೇನೂ ಚೆನ್ನಾಗಿಲ್ಲದ ರಸ್ತೆ, ನಮ್ಮ ಉತ್ಸಾಹವನ್ನೇನು ಕುಗ್ಗಿಸಲಿಲ್ಲ. ಅದಕ್ಕೆಲ್ಲಾ ಕಾರಣ ಟಾಟಾ ಸಿಯಾರ ಕಾರು ಹಾಗೂ ಅದರ ಚಾಲಕರಾದ ರಾಮಚಂದ್ರ ಅವರ ಚಾಲನೆಯ ಸಾಮರ್ಥ್ಯ.

ನಮ್ಮ ತಂಡದ ಪಾದಯಾತ್ರೆಯ ವೇಳಾ ಪಟ್ಟಿಯಂತೆ ನಮ್ಮ ಯಾತ್ರೆಯನ್ನು ೨೬ನೇ ತಾರೀಖು ಸೆಪ್ಟೆಂಬರ್‌ದಂದು ಪ್ರಾರಂಭಿಸಿದೆವು. ನಾವು ಅಂದು ಕೊಂಡಂತೆ ಅಂದೇ ಸುಮಾರು ೧೨-೧೩ ಕಿ. ಮೀ. ದೂರದಲ್ಲಿದ್ದ ಪುಲ್ಗ ಸೇರಬೇಕಿತ್ತು. ಪುಲ್ಗ ಸೇರುವ ಪಾದಯಾತ್ರೆಯ ದಾರಿ ಬಹುತೇಕ ಪಾರ್ವತಿ ನದಿಯ ಬಲಭಾಗದಲ್ಲಿದೆ. ಅಂತೂ ಇಂತೂ ಪಾದ ಯಾತ್ರೆಯು ಹೊರಟಿತು. ಪಾರ್ವತಿ ನದಿಯ ದಡದಲ್ಲಿ ನಾವು ಬಿರುಸಾಗಿ ೨೦೦ ರಿಂದ ೩೦೦ ಅಡಿಗಳ ಕೆಳಗೆ ಪ್ರವಹಿಸುತ್ತಿರುವ ನದಿ, ಅದರ ಭೋರ್ಗರೆಯುವ ಶಬ್ದ, ಅಕ್ಕ ಪಕ್ಕದಲ್ಲಿ ದೇವದಾರ್ ಜಾತಿಗೆ ಸೇರಿದ ಮರಗಳಿಂದ ಮುಚ್ಚಿದ ಬೆಟ್ಟದ ತಪ್ಪಲು, ಆಕಾಶವನ್ನೇ ಮುಟ್ಟಲು ಹೊರಟ ಮೋಡಗಳು, ಅಲ್ಲಿನ ತಂಗಾಳಿಯ ಕೊಂಪು, ಅಲ್ಲಲ್ಲಿ ಸೇಬಿನ ಉದ್ಯಾನವನ




ಮಣಿಕರಣ್‌ನ ಒಂದು ದೃಶ್ಯ

ಗಳು ಮತ್ತು ಗುಡ್ಡ ಬೆಟ್ಟಗಳು, ಗಿರಿಕಂದರಗಳು, ಇವೆಲ್ಲ ಒಟ್ಟಾರೆ ಅಲ್ಲಿನ ಪ್ರಕೃತಿಯನ್ನು ಸುಂದರವಾಗಿ ಆಕರ್ಷಕ ವಾಗಿ ಮೂಡಿಸಿತ್ತು. ಅದನ್ನೆಲ್ಲಾ ನೋಡುತ್ತಾ, ಕಾಲೆಳೆಯುತ್ತಾ ನಡೆದ ನಮಗೆ ದೇವಲೋಕಕ್ಕೆ ಹೊರಟ ಕಿಂದರ ಜೋಗಿಗಳ ನೆನಪು ತರುವಂತಿತ್ತು.

ಅಲ್ಲಲ್ಲಿ ಸೇಬಿನ ಮರಗಳು, ಸೇಬನ್ನು ಕೀಳುವ ಜನರು. ಮರದಿಂದಲೇ ಕಿತ್ತು ತಿನ್ನುವ ರುಚಿಯನ್ನು ಅನುಭವಿಸಿದವರಿಗೇ ಅದರ ಆನಂದ ಗೊತ್ತು. ಸಾಧಾರಣವಾಗಿ ಇಲ್ಲಿಂದ ಸೇಬಿನ ರಫ್ತು, ಜನರ ಬೆನ್ನಿನ ಮೇಲೆ ಮತ್ತು ಹೇಸರ ಕತ್ತೆಗಳ ಮೇಲೆ ಮಣಿಕರಣಕ್ಕೆ ಸಾಗುತ್ತವೆ. ಅಲ್ಲಿಂದ ಸಾರಿಗೆಯ ಮುಖಾಂತರ ದೇಶದ ವಿವಿಧ ಭಾಗಗಳಿಗೆ ಹೋಗುತ್ತವೆ. ಆದರೆ ಆ ಸಮಯದಲ್ಲಿ ದೇಶದಲ್ಲೆಲ್ಲಾ ಲಾರಿ ಮುಷ್ಕರದ ಪರಿಣಾಮವಾಗಿ, ಇಲ್ಲಿಯ ಜನಗಳ ಮುಖ್ಯ ಬೆಳೆಯಾದ ಸೇಬಿನ ಹಣ್ಣುಗಳು ಮಾರಾಟವಾಗದೆ, ಅವರ ಆರ್ಥಿಕ ಜೀವನಕ್ಕೆ ಮುಗ್ಗಟ್ಟು ಆಗಿತ್ತು.

ಈ ಪಾದಯಾತ್ರೆಯ ಸಮಯದಲ್ಲಿ ನಾವು ಅನೇಕ ವಿದೇಶಿ ಪಾದಯಾತ್ರಿಗಳನ್ನು ಭೇಟಿ ಮಾಡಿದೆವು. ಅವರ ಮತ್ತು ನಮ್ಮ ಪರಸ್ಪರ ಪರಿಚಯ ಮಾಡಿಕೊಂಡೆವು. ಆ ಭೇಟಿ ತುಂಬ ಸಂತೋಷಕರ ಹಾಗೂ ಪ್ರೋತ್ಸಾಹದಾಯಕವಾಗಿತ್ತು. ಅಂತೂ ನಾವು ಪುಲ್ಗವನ್ನು ಮಧ್ಯಾಹ್ನ ತಲುಪಿದೆವು. ದಾರಿಯಲ್ಲಿ ಅಲ್ಪ ಸಮಯದ ಮಳೆಯೇ ಹೊರತು ಹವಾಮಾನ ಬಹಳ ಹಿತಕರವಾಗಿತ್ತು. ಪುಲ್ಗ ಸೇರುವ ಹೊತ್ತಿಗೆ ಶ್ರೀಯುತ ರಾಮಚಂದ್ರ ಅವರಿಗೆ, ಕಾಲಿನ ಸೆಳೆತ ಶುರುವಾಗಿ ತುಂಬ ಬಳಲಿದ್ದರು. ಎಲ್ಲಾ ಸಂದರ್ಭಗಳಲ್ಲೂ ಸಿದ್ಧವಾಗಿರುತ್ತಿದ್ದ ಡಾ॥ ವೆಂಕಟೇಶ್ ತಮ್ಮ ಚಿಕಿತ್ಸೆ ನೀಡಿ ರಾಮಚಂದ್ರ ಅವರ ನೋವನ್ನು ಕ್ಷಣದಲ್ಲಿ ನಿವಾರಿಸಿದರು.

ಪುಲ್ಗ ಒಂದು ಶಾಂತಿಯುತ, ಸುಂದರ, ರಮ್ಯ ಪುಟ್ಟ ಹಳ್ಳಿಯಾದರೂ, ಅಲ್ಲಿಯೂ ಜನ ಯಾತ್ರಿಗಳ ಆತಿಥ್ಯ, ಅದರಲ್ಲೂ ವಿದೇಶಿ ಯಾತ್ರಿಗಳ ಆತಿಥ್ಯ ಬಹಳ ಚೆನ್ನಾಗಿ ಮಾಡುತ್ತಾರೆ. ಇಲ್ಲಿ ಚಹದಿಂದ ಮೊದಲಾಗಿ ಚರಸ್‌ವರೆಗೂ ಎಲ್ಲವನ್ನೂ ತಯಾರು ಮಾಡುತ್ತಾರೆ. ಪ್ರಾಯಶಃ ಚರಸ್‌ನ ಆಕರ್ಷಣೆ ಹಲವು ವಿದೇಶಿಯರಿಗೆ ಪ್ರಿಯವಾಗಿರಬಹುದು. ಇಲ್ಲಿ ಯಾತ್ರಿಕರು, ಪ್ರಯಾಣಿಕರು, ತಂಗಲು, ವಿಶ್ರಮಿಸಲು ಸರಳವಾದ ಕೊಠಡಿಗಳಿವೆ, ಅಲ್ಲದೆ ಅರಣ್ಯ ಇಲಾಖೆಯ ವಿಶ್ರಾಂತಿ ಕೋಣೆಗಳಿವೆ.

ನಾವು ಪುಲ್ಗದಲ್ಲಿ ೨೬ನೇ ತಾರೀಖು ರಾತ್ರಿಯನ್ನು ನಮ್ಮ ಟೆಂಟ್‌ನಲ್ಲಿ ಕಳೆದು, ೨೭ನೇಯ ಬೆಳಿಗ್ಗೆ ಕೀರ್ ಗಂಗಾಗೆ ಹೊರಟೆವು. ಪುಲ್ಗದಿಂದ ಕೀರ್‌ಗಂಗಾಗೆ, ಎರಡು ದಾರಿಗಳಿವೆ. ಒಂದು ದಾರಿ ಪಾರ್ವತಿ ನದಿಯ ಎಡ ತೀರದಲ್ಲಿದೆ. ಈ ದಾರಿ ಸ್ವಲ್ಪ ಕಠಿಣವಾದ ಮಾರ್ಗ. ದಟ್ಟವಾದ ಕಾಡಿನ ಮಧ್ಯೆ ಹಾದು ಹೋಗುತ್ತದೆ. ಅಲ್ಲದೆ ಈ ಮಾರ್ಗದಲ್ಲಿ ಕರಡಿಗಳನ್ನು ಭೇಟಿ ಮಾಡಬಹುದು ಎಂದು ತಿಳಿದಾಗ ನಮಗೆ ಗಾಬರಿಯಾಯಿತು. ಏಕೆಂದರೆ, ನಮಗಿಂತ ಸ್ವಲ್ಪ ಮುಂಚೆಯೇ ಹೊರಟಿದ್ದ ರಾಮಚಂದ್ರ ಹಾಗೂ ಡೇವಿಸ್ ದಾರಿ ತಪ್ಪಿ ಈ ಹಾದಿಯಲ್ಲಿ ಹೋಗಿ ನಮಗೆಲ್ಲಾ ಆತಂಕ ಉಂಟುಮಾಡಿದ್ದರು. ಆದರೂ ಕಷ್ಟಪಟ್ಟು ಕೀರ್‌ಗಂಗಾವನ್ನು ಕತ್ತಲು ಆಗುವ ಮೊದಲೇ ಸೇರಿದ್ದರು. ನಾವು ಮತ್ತೆ ನಾಲ್ವರು ಅಲ್ಲದೆ ಕೂಲಿಗಳು, ಪಾರ್ವತಿ ನದಿಯ ಬಲದಡದಲ್ಲಿರುವ ಮಾರ್ಗವನ್ನು ಹಿಡಿದೆವು. ಈ ಮಾರ್ಗ ರುದ್ರನಾಗ್ ಮೂಲಕ ಕೀರ್‌ಗಂಗಾಗೆ ಹೋಗುತ್ತದೆ. ರುದ್ರನಾಗ್‌ವರೆಗಿನ ಈ ಮಾರ್ಗ ತುಂಬ ಕಠಿಣವೇನಲ್ಲ ಮತ್ತು ದೇವದಾರು ಮರಗಳ ಮತ್ತು ಸೇಬಿನ ಗಿಡಗಳ ತೋಟದ ಮಧ್ಯೆ ನಮ್ಮನ್ನು ಕರೆದೊಯ್ಯುತ್ತದೆ. ರುದ್ರನಾಗ್ ಪಾದ ಯಾತ್ರಿಗಳು ಮತ್ತು ತೀರ್ಥಯಾತ್ರಿಗಳು ವಿಶ್ರಮಿಸಲು ಅನುಕೂಲವಾದ ಒಂದು ಪ್ರಶಾಂತ ಸ್ಥಳ. ಇಲ್ಲಿ ಒಂದು ಚಿಕ್ಕ ಜಲಪಾತ, ಒಂದು ಶಿವಲಿಂಗ, ಬಯಲಿನಲ್ಲಿರುವ ದೇವಸ್ಥಾನ ಮತ್ತೊಂದು ಕಡೆ ರಭಸದಿಂದ ಹರಿಯುವ



*ಮಣಿಕರಣ್‌ನಲ್ಲಿ ಬಿಸಿನೀರಿನ ಬುಗ್ಗೆ*

ಪಾರ್ವತಿ ನದಿ, ವಿಶ್ರಮಿಸಲು ಮರ ಮತ್ತು ಕಲ್ಲಿನಲ್ಲಿ ಕಟ್ಟಿರುವ ಒಂದು ಚಿಕ್ಕ ವಿಶ್ರಾಂತಿ ಗೃಹ ಇವೆ. ಇಲ್ಲಿ ಹೊದೆಯುವುದಕ್ಕೆ ಕಂಬಳಿ ಮತ್ತು ಸರಳವಾದ ಊಟ ದೊರೆಯುತ್ತದೆ. ಅದಕ್ಕೆಲ್ಲಾ ಈ ಪ್ರದೇಶದ ಆರು ಹಳ್ಳಿಗಳ ಜನರ ಔದಾರ್ಯವೇ ಕಾರಣ. ನಳಿನೇಶರಿಗೂ ಹಾಗೂ ನನಗೂ ಜಲಪಾತದಲ್ಲಿ ಸ್ನಾನ ಮಾಡುವ ಹಂಬಲ ತಡೆಯಲಾಗಲಿಲ್ಲ, ಮಂಜಿನಂತೆ, ತಣ್ಣಗಿರುವ ನೀರಿನಲ್ಲಿ ಸ್ನಾನ ಮಾಡಿಯೇಬಿಟ್ಟೆವು.

ರುದ್ರನಾಗ್‌ನಿಂದ ಕೀರ್‌ಗಂಗಾ ಹತ್ತಿರವೇ ಇದೆ. ಆದರೆ ೪.೫ ಕಿ. ಮೀ. ಮಾರ್ಗ ಹತ್ತುವುದು ಕಷ್ಟವಾದರೂ ಆ ದೇವದಾರ್ ಜಾತಿಯ ಮರಗಳು ದಾರಿಯುದ್ದಕ್ಕೂ ತುಂಬಿದ್ದು, ತಂಗಾಳಿ ಬೀಸುವುದ ರಿಂದ ಅದರ ಮೂಲಕ ಸಾಗುವಾಗ ಆಯಾಸ ಪರಿಹಾರವಾಗುತ್ತೆ. ರುದ್ರನಾಗ್‌ನಿಂದ ಕೀರ್‌ಗಂಗಾಗೆ ಹೋಗುವ ಸಮಯ ೧ - ೧/೨ ಗಂಟೆ ಅಥವಾ ೨ ಗಂಟೆಗಳಾಗುತ್ತವೆ. ಕೀರ್‌ಗಂಗಾಗೆ ಹೋಗುವಾಗ ಮಾರ್ಗದ ಕೊನೆಯಲ್ಲಿ ಸುಮಾರು ೫೦೦ ಮೀ. ಇರುವ ಒಂದು ಇಳಿಜಾರು ಹುಲ್ಲುಗಾವಲಿದೆ. ಕೀರ್‌ಗಂಗಾ ತನ್ನ ಹೆಸರಿಗೆ ತಕ್ಕಂತೆ ಸ್ವಲ್ಪ ಬಿಳಿ ಬಣ್ಣದ ಬಿಸಿ ನೀರಿನ ಬುಗ್ಗೆ. ಇದರ ಬಳಿ ಒಂದು ಚಿಕ್ಕ ದೇವಸ್ಥಾನ. ಬಿಸಿ ನೀರಿನ ಚಿಲುಮೆಗಳು ಮಣಿಕರಣದ ನೀರಿನಷ್ಟೇನೂ ಬಿಸಿಯಿಲ್ಲ. ನೀರಿನ ಕೆಳಗಿನ ಬಂಡೆಗಳು ನೀರಿನ ರಸಾಯನ ಕ್ರಿಯೆಯಿಂದಾಗಿ ಸ್ವಲ್ಪ ಬಿಳಿಚಿಕೊಂಡಿರುವುದರಿಂದ ನೀರೂ ಬಿಳಿಯಾಗಿ ಕಾಣುತ್ತದೆ. ಇಲ್ಲಿ ಯಾತ್ರಿಗಳು ಸ್ನಾನ ಮಾಡಲು (ಗಂಡಸರಿಗೆ ಹಾಗೂ ಹೆಂಗಸರಿಗೆ) ಪ್ರತ್ಯೇಕ ಚಿಲುಮೆಗಳಿವೆ. ಹೆಂಗಸರಿಗೆ ಮರದ ಗೋಡೆಗಳನ್ನು ಕಟ್ಟಿ ಬೇರೆ ವ್ಯವಸ್ಥೆಯೇ ಮಾಡಿದ್ದಾರೆ. ನಾವು ಈ ಕೊಳದಲ್ಲಿ ದೀರ್ಘಕಾಲ ಕುಳಿತು ಸ್ನಾನ ಮಾಡಿ ನಮ್ಮ ಕೈಕಾಲುಗಳ ನೋವನ್ನು ನಿವಾರಿಸಿಕೊಂಡೆವು. ಇಲ್ಲಿನ ಪೂಜಾರಿ ಬಾಬ, ದೇವಸ್ಥಾನದ ಬಳಿ ಇರುವ ಒಂದು ಗುಹೆಯಲ್ಲಿ ವಾಸಿಸುತ್ತಾರೆ. ಮತ್ತು ಇಲ್ಲಿ ಬರುವ ಯಾತ್ರಿಗಳಿಗೆ ಯಥಾಶಕ್ತಿ ಸಹಾಯ ಮಾಡುತ್ತಾರೆ. ಯಾತ್ರಿಗಳಿಗೆ ವಿಶ್ರಮಿಸಲು ಮೂರುನಾಲ್ಕು ಮರ ಹಾಗೂ ಕಲ್ಲಿನಿಂದ ಕಟ್ಟಿರುವ ಕೊಠಡಿಗಳಿವೆ. ಬಾಬ ಮನಸ್ಸು ಮಾಡಿದರೆ ಯಾತ್ರಿಗಳಿಗೆ ಚಪಾತಿ ಹಾಗೂ ಬೇಳೆ ತೊವ್ವೆ ಸಿಕ್ಕುವ ಸಂಭವವಿದೆ. ಯಾತ್ರಿಕರು ತಮ್ಮ ಕೈಲಾದ ಧನ ಸಹಾಯ ಮಾಡಬಹುದು. ನಾವು ಇಲ್ಲಿ ಕಳೆದ ರಾತ್ರಿ, ಹುಣ್ಣಿಮೆ ಚಂದ್ರ, ಶೀತಲ ಮಾರುತ ಮತ್ತು ಅಲ್ಲಲ್ಲಿ ಹಿಮದಿಂದ ಕವಿದಿರುವ ಪರ್ವತ ಶ್ರೇಣಿಗಳ ಮಧ್ಯೆ ಆಹ್ಲಾದಕರವಾಗಿತ್ತು.

ಕೀರ್‌ಗಂಗಾದಿಂದ ಮಂತಲೆಗೆ ಹೋಗಲು ೩ ದಿನಗಳ ಸಮಯ ಬೇಕು. ಅಲ್ಲದೆ, ಮಾರ್ಗವೂ ಕಠಿಣವಾಗಿರುತ್ತದೆ. ಮಂತಲೆಗೆ ಹೋಗಿ ಹಿಂತಿರುಗಲು ಸಮಯವಿರಲಿಲ್ಲ. ಆದ್ದರಿಂದ ನಾವು ಕೀರ್‌ಗಂಗಾ ದಿಂದ ೨-೩ ಕಿ.ಮೀ. ಮುಂದೆ ಹೋಗಿ ನಮ್ಮ ಪಾದಯಾತ್ರೆಯನ್ನು ಮೊಟಕುಗೊಳಿಸಿ, ಹಿಂತಿರುಗಿ ಬಂದು ಅಂದಿನ ರಾತ್ರಿಯನ್ನು ರುದ್ರನಾಗ್‌ನಲ್ಲಿ ಕಳೆದವು. ಕೀರ್‌ಗಂಗಾದಿಂದ ನಮ್ಮ ಮರು ಪಾದ ಯಾತ್ರೆಯನ್ನು ರುದ್ರನಾಗ್ ಮತ್ತು ಬರ್‌ಶಿಯಾನಿ

ಮೂಲಕ ಮಾಡಿದೆವು. ೨೯ನೇ ತಾರೀಖು ಬರ್‌ಸಿಯಾನಿಯಲ್ಲಿ ಕಳೆದೆವು. ಈ ಹಳ್ಳಿಯಲ್ಲಿ ಯಾತ್ರಿಗಳು ತಂಗಲು ವಿಶ್ರಾಮಗೃಹಗಳ ಸೌಲಭ್ಯ ಇಲ್ಲದ ಕಾರಣ ನಾವು ಟೆಂಟ್‌ನಲ್ಲಿ ಮಲಗಲು ತಯಾರಾಗಿದ್ದೆವು. ಆದರೆ ಅಲ್ಲಿನ ಸ್ಕೂಲ್‌ನ ಮುಖ್ಯೋಪಾಧ್ಯಾಯರ ಬಲವಂತದಿಂದ ನಮ್ಮ ಸಾಮಾನು, ಸಾಮಗ್ರಿಗಳನ್ನು ಶಾಲೆ ಕೊಠಡಿಯಲ್ಲಿಟ್ಟು, ನಮ್ಮಲ್ಲೊಬ್ಬರು ಶಾಲೆಯಲ್ಲಿ ವಿಶ್ರಮಿಸಿದರು. ಉಳಿದವರು ನಮ್ಮ ಟೆಂಟನ್ನು ಒಳ್ಳೆಯ ಸ್ಥಳವನ್ನು ಹುಡುಕಿ ರಚಿಸಿಕೊಂಡೆವು. ನಮಗೆ ಶಾಲೆಯ ಮಕ್ಕಳಿಂದ ಊಟದ ಉಪಚಾರ ಆಯಿತು. ವಾಸ್ತವದಲ್ಲಿ ಇಲ್ಲಿಯ ಜನರು ಸೌಜನ್ಯಶೀಲರು ಮತ್ತು ಉದಾರಿಗಳು. ಅಲ್ಲಿನ ಸಹಾಯಕರಿಗೆ ಕೃತಜ್ಞತೆಗಳನ್ನು ಹೇಳಿ, ನಾವು ೩೦ನೇ ತಾರೀಖು ಪಾದಯಾತ್ರೆಯ ಕೊನೆಯ ಹಂತವನ್ನು, ಬರ್‌ಸಿಯಾನಿಯಿಂದ ಮಣಿಕರಣಕ್ಕೆ ಮುಂದುವರಿಸಿದೆವು. ಕೇವಲ ೩ ಗಂಟೆಗಳ ಈ ಚಾರಣವನ್ನು ಮುಗಿಸುತ್ತಲೇ ನಾವು ಮಣಿಕರಣದ ಬಿಸಿ ನೀರಿನ ಸ್ನಾನದ ಸುಖವನ್ನು ಅನುಭವಿಸಿದೆವು. ಹಲವು ರೀತಿಯ ನೋವು, ನಲಿವಿನಲ್ಲಿ ಹಿಮಾಲಯದ ಬಹುಸುಂದರವಾದ, ರಮ್ಯವಾದ, ಪ್ರಕೃತಿಯ ಮಧ್ಯೆ ಐದು ದಿನಗಳ ಪಾದಯಾತ್ರೆ ಮುಗಿಯಿತು. ಈ ಪಾದಯಾತ್ರೆಯ ಮಾರ್ಗ ಅಷ್ಟೇನು ಕಠಿಣವಾಗಿರಲಿಲ್ಲ. ಪಾದಯಾತ್ರೆಯಲ್ಲಿ ಅನನುಭವಿಗಳಾದ, ಮಧ್ಯಮ ವಯಸ್ಕರಿಗೂ ಇದು ಸಾಧ್ಯ ಎಂಬುದಕ್ಕೆ ಅಶೋಕ ಸೂರ ಹಾಗೂ ಡೇವಿಸ್ ಅವರೇ ಉದಾಹರಣೆ.

ಅದ್ಭುತ ಪರಿಸರದ ನೈಜ ಸೌಂದರ್ಯ ಮತ್ತು ಅದರ ವೈವಿಧ್ಯತೆ ಎಂತಹವರನ್ನಾದರೂ ಚಕಿತಗೊಳಿಸುತ್ತದೆ. ದೇಹವನ್ನು ಹಗುರ ಹಾಗೂ ಮನಸ್ಸನ್ನು ಶಾಂತಗೊಳಿಸುತ್ತದೆ. ಇಲ್ಲಿಯ ಬದುಕು, ಜನಜೀವನ, ಜನರ ಸ್ನೇಹಮನೋಭಾವ ಮತ್ತು ಸರಳತೆ ನಮ್ಮಂತಹವರ ಮನಸ್ಸನ್ನು ಸೆಳೆಯುತ್ತದೆ. ಆ ಕಾಡಿನಲ್ಲಿ, ಬೆಟ್ಟದೆತ್ತರದಲ್ಲಿನ ಜನರು ಪಟ್ಟಣದಿಂದ ದೂರ ಇದ್ದರೂ ತುಂಬ ಚುರುಕಾಗಿದ್ದಾರೆ. ಅವರಿಗೆ ಕರ್ನಾಟಕ ಮತ್ತು ಬೆಂಗಳೂರು ಎಲ್ಲಿದೆ ಎಂದು ತಿಳಿದಿದೆ. ಒಬ್ಬ ಮರ ಕಡಿಯುವವ ಬೆಂಗಳೂರನ್ನು ನೋಡಿದ್ದೇನೆಂದನು. ಅದಕ್ಕೆ, ಯಾವಾಗ ಎಂದು ಕೇಳಿದೆವು. ಅವನು, ''ಭೂಪಟದಲ್ಲಿ ನೋಡಿದ್ದೇನೆ'', ಎಂದು ಚುಟುಕಾಗಿ ಉತ್ತರಿಸಿ ನಮ್ಮನ್ನು ಅಚ್ಚರಿಗೊಳಿಸಿದ. ಆದರೆ ನಮ್ಮೂರಿನಲ್ಲಿ ಸಾಧಾರಣವಾಗಿ ಎಷ್ಟು ಜನಗಳಿಗೆ ಗೊತ್ತು ಮಣಿಕರಣ ಎಲ್ಲಿದೆ ಎಂದು. ನಾವು ಕಂಡ ಸ್ವದೇಶಿ ಯಾತ್ರಿಕರು ಹಾಗೂ ಪಾದಯಾತ್ರಿಕರು ಅಲ್ಪ ಸಂಖ್ಯೆಯಲ್ಲಿ, ಆದರೆ ವಿದೇಶಿ ಪಾದಯಾತ್ರಿಕರು, ನಮ್ಮ ದೇಶದಲ್ಲಿ ಹಲವಾರು ತಿಂಗಳು, ಹಲವಾರು ಚಾರಣ ಸ್ಥಳಗಳನ್ನು, ಪರಿಸರದ ಮುಖ್ಯ ಸ್ಥಳಗಳನ್ನು ಚಾರಣ ಮಾಡಿ ಪ್ರಕೃತಿಯ ನೈಜ ಸೌಂದರ್ಯವನ್ನು ಕಣ್ಣಾರೆ ಕಂಡು ಹಾಡಿ ಹೊಗಳಿ ರಸದೂಟವನ್ನು ಉಣಿಸಿದ್ದಾರೆ. ವಿವಿಧ ದೇಶದ ವಿದೇಶಿಯರು, ದಂಪತಿಗಳು, ಪಾದಯಾತ್ರೆಯನ್ನು ಮಾಡಿದ್ದಲ್ಲದೆ, ಭಾರತದ ಹಲವಾರು ಕಡೆ ಮೋಟಾರ್ ಸೈಕಲ್‌ನಲ್ಲಿ ಸಂಚರಿಸಿದ್ದೂ ಉಂಟು. ಹಲವು ವಿದೇಶಿಯರನ್ನು ಇಲ್ಲಿನ ವೈವಿಧ್ಯಮಯ ನೈಜ ಸೌಂದರ್ಯ ಆಕರ್ಷಿಸಿತ್ತು. ಕಾರಣ ಆ ಹಿಮಾಲಯ ಪರ್ವತ ಶ್ರೇಣಿ, ಅಲ್ಲಲ್ಲಿ ರಮ್ಯವಾದ ಅರಣ್ಯ ಹಾಗೂ ಅಸಂಖ್ಯಾತ ಝರಿಗಳಿಂದ ಕೂಡಿದ್ದ ಸುಂದರ ತಾಣಗಳು ಪ್ರಶಾಂತತೆಯನ್ನು ಅಪೇಕ್ಷಿಸುವ, ಸಾಹಸಪ್ರಿಯ ಪ್ರಕೃತಿ ಪ್ರೇಮಿಗಳಿಗೆ ಪ್ರಶಸ್ತ ಸ್ಥಳವಾಗಿದೆ. ಒಂದು ಬಾರಿ ಈ ಸ್ಥಳವನ್ನು ಭೇಟಿ ಮಾಡಿದ ಯಾವ ವ್ಯಕ್ತಿಯೇ ಆಗಲಿ ತನ್ನನ್ನೇ ತಾನು ಮರೆತು ಆ ಪ್ರಕೃತಿ ದೇವಿಯ ಮಡಿಲಲ್ಲಿ ವಿಶ್ರಮಿಸಿಕೊಂಡಾಗ ಮನಸ್ಸಿನಲ್ಲಿ ಉಂಟಾಗುವ ಸುಪ್ರಸನ್ನತೆಯನ್ನು, ಪ್ರಶಾಂತತೆಯನ್ನು ವರ್ಣಿಸಲಸದಳ. ಮತ್ತೆ ಮತ್ತೆ ಹಿಂದಿರುಗಿ ಬರುವ ಆಸೆಯಾಗುತ್ತದೆ. ಒಟ್ಟಿನಲ್ಲಿ ಹಿಮಾಲಯ ಪಾದಯಾತ್ರೆ ಎಲ್ಲರಿಗೂ, ಎಲ್ಲಾ ವರ್ಗದವರಿಗೂ ಒಂದು ಆಕರ್ಷಣೆ, ಅಮೋಘ ಅನುಭವ.



*ಕುಲು ಕಣಿವೆಯ ಒಂದು ಹಳ್ಳಿ*

ಲೆಫ್ಟಿನೆಂಟ್ ಜನರಲ್ ಎನ್. ಎಸ್. ನರಹರಿ
ನಂ. ೨೮, ೬ನೇ ಅಡ್ಡರಸ್ತೆ, ಹಚಿಂಗ್‌ಸನ್ ರಸ್ತೆ
ಸೆಂಟ್ ಥಾಮಸ್ ಟೌನ್, ಬೆಂಗಳೂರು -೫೬೦ ೦೮೪




**ಮನೋವೈದ್ಯಕೀಯ ಸೇವೆಯ ಮುಖಾಂತರ ಸಮಾಜಕ್ಕೆ ಕೊಡುಗೆ**

ಮಾರ್ಚ್ ೩೧ರಂದು ವಿಜಾಪುರದಲ್ಲಿ ಡಾ|| ಸಿ. ಆರ್. ಚಂದ್ರಶೇಖರ್ ಅವರಿಗೆ 'ಮಹರ್ಷಿ ಚರಕ ಪ್ರಶಸ್ತಿ'ಯನ್ನು ನೀಡಲಾಯಿತು.

# ಇತಿಹಾಸದೊಳಗೆ ಪ್ರಶ್ನೆಗಳು

**ನಾ**ನು ಇತಿಹಾಸದ ವಿದ್ಯಾರ್ಥಿಯಾದಾಗಿನಿಂದಲೂ ಕೆಲವೊಂದು ಸಮಸ್ಯೆಗಳು ಪ್ರಶ್ನೆಗಳ ರೂಪದಲ್ಲಿ ಕಾಡುತ್ತಲೇ ಇವೆ. ಈ ತನಕವೂ ಉತ್ತರ ದೊರಕಿಸಿಕೊಳ್ಳಲು ಸಾಧ್ಯವಾಗಿಲ್ಲ !

**ಅಶೋಕ :** ಸಾಮ್ರಾಟ ಅಶೋಕನ ಕುರಿತಾಗಿ ''ಆತನೊಬ್ಬ ಮಹಾನ್ ಧರ್ಮಭೀರು, ಜಗತ್ತಿನ ಬಾಂದಳದಲ್ಲಿ ಹೊಳೆಯುವ ಧ್ರುವತಾರೆ'' ಎಂದೆಲ್ಲಾ ಪರಿಗಣಿಸಲಾಗಿದೆ. ಆಕರಗಳ ಪ್ರಕಾರ ಅವನು ರಾಜನಾಗಿ ಕೈಗೊಂಡ ಏಕೈಕ ಯುದ್ಧ ಕಳಿಂಗ ದಿಗ್ವಿಜಯ (?). ಈ ಸಂಗ್ರಾಮದಲ್ಲಿ ಉಂಟಾದ ಸಾವು ನೋವುಗಳಿಗಾಗಿ ಮರುಗಿ, ಬೌದ್ಧ ಧರ್ಮವನ್ನು ಸ್ವೀಕರಿಸಿ, ಯುದ್ಧವನ್ನು ತ್ಯಜಿಸಿದನೆಂದೇ ನಂಬಿಕೆ. ಅಂದಿನ ಮೌರ್ಯ ಸಾಮ್ರಾಜ್ಯದ ವ್ಯಾಪ್ತಿ ಈ ನಂಬಿಕೆಯನ್ನು ಪುಷ್ಟೀಕರಿಸುವುದಿಲ್ಲ. ದಕ್ಷಿಣದಲ್ಲಿ ಸಿದ್ದಾಪುರ - ರಾಯಚೂರು, ಉತ್ತರದಲ್ಲಿ ತಕ್ಷಶಿಲೆ, ಪೂರ್ವದಲ್ಲಿ ಕಾಮರೂಪ ಹಾಗೂ ಪಶ್ಚಿಮದಲ್ಲಿ ಪರ್ಷಿಯಾದ ಸರಹದ್ದಿನವರೆಗೂ ಹಬ್ಬಿದ್ದ ಸಾಮ್ರಾಜ್ಯವೊಂದು ಯಾವ ಯುದ್ಧವೂ ಇಲ್ಲದೆ ಕಟ್ಟಲ್ಪಟ್ಟಿತ್ತು ಎನ್ನುವುದು ಸತ್ಯಕ್ಕೆ ದೂರವಾದ ವಿಚಾರ.

ಈ ವಿಶಾಲ ಸಾಮ್ರಾಜ್ಯ ಅಶೋಕನಿಗೆ ತನ್ನ ಹಿರಿಯರ ಬಳುವಳಿ ಎನ್ನಬಹುದಿತ್ತೇನೋ? ಆದರೆ ಇತಿಹಾಸ ಉಲ್ಲೇಖಿಸುವಂತೆ ಅಶೋಕನ ತಂದೆ ಬಿಂದುಸಾರನು ಚಂದ್ರಗುಪ್ತ ಮೌರ್ಯನ ಸಾಮ್ರಾಜ್ಯವನ್ನು ಕಳೆದುಕೊಳ್ಳಲೂ ಇಲ್ಲ, ವಿಸ್ತರಿಸಲೂ ಇಲ್ಲ. ಚಂದ್ರಗುಪ್ತನ ಸಾಮ್ರಾಜ್ಯ ಕೇವಲ ಉತ್ತರ ಭಾರತಕ್ಕಷ್ಟೇ ಸೀಮಿತವಾಗಿತ್ತು! ಅಂದಮೇಲೆ ಅಶೋಕನ ಸಾಮ್ರಾಜ್ಯ ವಿಶಾಲಗೊಂಡ ಬಗೆಯಾದರೂ ಹೇಗೆ (ಕಳಿಂಗವನ್ನು ಹೊರತು)?

ಒಂದೊಮ್ಮೆ ಈ ಸಾಮ್ರಾಜ್ಯ ಹಿರಿಯರ ಬಳುವಳಿ ಎಂದೇ ಪರಿಗಣಿಸಿದರೂ ಸಮಸ್ಯೆ ಪರಿಹಾರವಾಗುವುದಿಲ್ಲ. ಬಲಪ್ರಯೋಗಕ್ಕೆ ಎಂದೂ ಮುಂದಾಗದ ಚಕ್ರವರ್ತಿಯೊಬ್ಬ ಅಂದಿನ ಪ್ರಾಂತೀಯ ರಾಜರುಗಳನ್ನು ನಿಶ್ಶಸ್ತ್ರನಾಗಿ ಹದ್ದುಬಸ್ತಿನಲ್ಲಿಡುವುದು ಸಾಧ್ಯವಿತ್ತೇ? ತನ್ನ ಧರ್ಮ ಜಿಜ್ಞಾಸೆಯಿಂದಲೇ ಸ್ವತಂತ್ರ, ಬಂಡಾಯ ಪ್ರವೃತ್ತಿಯ ಸಾಮಂತರುಗಳನ್ನು ಮಾನವೀಯರನ್ನಾಗಿ ಪರಿವರ್ತಿಸಿದನೆಂಬುದು ನಂಬಲರ್ಹವಲ್ಲ. ಏಕೆಂದರೆ ಸಮಯಸಾಧಕರಾಗಿದ್ದ ಅಧೀನ ರಾಜರುಗಳು ಅಶೋಕನಿಗಿಂತ ಹಿಂದೆಯಾಗಲೀ ಆ ನಂತರವಾಗಲೀ ಶಾಂತರೀತಿಯಲ್ಲಿ ಬದುಕಿದ ಉದಾಹರಣೆಗಳೇ ಇಲ್ಲ !

ಆತನ ಸಾಮ್ರಾಜ್ಯ ವ್ಯಾಪ್ತಿಯನ್ನು ಇನ್ನೂ ಒಂದು ದೃಷ್ಟಿಕೋನದಿಂದ ವಿವೇಚಿಸಬೇಕಾಗುತ್ತದೆ. ಅದೆಂದರೆ, ''ಧರ್ಮವಿಜಯ.'' ಧರ್ಮಜ್ಞಾನವನ್ನು ಬಿತ್ತರಿಸುವುದರ ಮೂಲಕ ಪ್ರಾಂತೀಯ ರಾಜರುಗಳು ತನ್ನ ಸಾರ್ವಭೌಮತೆಯನ್ನು ಒಪ್ಪಿಕೊಳ್ಳುವಂತೆ ಅಶೋಕನು ಅವರ ಮನಸ್ಸನ್ನು ಪರಿವರ್ತಿಸಿದ್ದರೂ, ಪ್ರಶ್ನೆಯೊಂದು ಹಾಗೇ ಉಳಿಯುತ್ತದೆ. ಈ ಮೂಲಕ ತನ್ನ ಧಾರ್ಮಿಕ ನೀತಿಯನ್ನು ರಾಜಕೀಯ ಅಸ್ತ್ರವನ್ನಾಗಿ ಬಳಸಿಕೊಂಡನೆಂದೂ ಭಾವಿಸಬಹುದಲ್ಲವೇ?

**ಬುದ್ಧ :** ಏಷ್ಯಾದ ಬೆಳಕು ಎಂದು ಕರೆಯಲ್ಪಟ್ಟ ತತ್ತ್ವಜ್ಞಾನಿ.

ಭಗವಾನ್ ಬುದ್ಧ, ವ್ಯವಸ್ಥೆಯ ಲೋಪದೋಷಗಳನ್ನು ಖಂಡಿಸುವಲ್ಲಿ ಉಳಿದೆಲ್ಲಾ ಧರ್ಮಸುಧಾರಕರಿಗಿಂತಲೂ ಹೆಚ್ಚು ಪ್ರಾಮಾಣಿಕನಾಗಿದ್ದ ಎನ್ನುವುದರಲ್ಲಿ ಸಂಶಯವಿಲ್ಲ. ಆದರೂ ಅಂಗುಲೀಮಾಲನೊಂದಿಗಿನ ಆತನ ವ್ಯವಹಾರ ಪ್ರಶ್ನಾರ್ಹವಾಗಿದೆ.

ದಲಿತ ಸಮುದಾಯಕ್ಕೆ ಸೇರಿದ್ದ ಅಂಗುಲೀಮಾಲನ ಕುಟುಂಬ 'ಲೋಹಿತ್ಯ'ನೆಂಬ ಜಮೀನ್ದಾರನ ಜೀತದಲ್ಲಿತ್ತು. ತನ್ನ ತಂದೆ ಜ್ವರದಿಂದ ನರಳುತ್ತಿದ್ದರೂ ಕ್ರೂರವಾಗಿ ಎಳೆದೊಯ್ದು ಹೊಲದಲ್ಲಿ ದುಡಿಸಿದ ಲೋಹಿತ್ಯನ ಮಗ 'ಯಜ್ಞ'ನ ಮೇಲೆ ಅಂಗುಲೀಮಾಲ ಕ್ರುದ್ಧನಾಗುತ್ತಾನೆ. ಕೆಲಸ ಮಾಡುತ್ತಲೇ ಸತ್ತುಹೋದ ತಂದೆಯ ಮರಣ ವಾರ್ತೆಯನ್ನು ತಲುಪಿಸಲು ಮನೆಗೆ ಮರಳಿದಾಗ ಕಂಡ ದೃಶ್ಯ ಕ್ರೋಧಾಗ್ನಿಗೆ ತುಪ್ಪವೆರೆಯುತ್ತದೆ. 'ಯಜ್ಞ', ತನ್ನ ತಂಗಿ ಸುನೀಲಳ ಶೀಲ ಕೆಡಿಸಿದ್ದಾನೆ. ಆ ಕ್ಷಣ ತನ್ನ ಕುಡುಗೋಲಿನಿಂದ ಯಜ್ಞನನ್ನು ತುಂಡರಿಸಿ ಅತ್ಯಾಚಾರಕ್ಕೆ ಕಾರಣವಾಗಿದ್ದ ಅವನ ಹೆಬ್ಬೆರಳನ್ನು ತುಂಡರಿಸಿ ಮಾಲೆಯಾಗಿ ಧರಿಸುತ್ತಾನೆ. ಅಂದಿನಿಂದ ಅಂಗುಲೀಮಾಲ ರಾಕ್ಷಸನೆನಿಸಿಕೊಂಡ!

ಅನ್ಯಾಯದ ವಿರುದ್ಧದ ಹೋರಾಟ ಅಮಾನವೀಯವಾಗಿರಬಾರದೆನ್ನುವುದು ನಿಜವಾದರೂ ಸಾವಿರಾರು ವರ್ಷಗಳಿಂದ ದಲಿತರನ್ನು ಬಂಧಿಸಿದ್ದ ಸರಪಳಿಯನ್ನು ತುಂಡರಿಸಿದ ಅಂಗುಲೀಮಾಲ ಪ್ರಶಂಸನೀಯನೇ ಹೌದು. ಇದೊಂದು ದಲಿತ ಬಂಡಾಯ. ಅಂಗುಲೀಮಾಲನನ್ನು ಪುಣ್ಯಾಕ್ಷನನ್ನಾಗಿ ಪರಿವರ್ತಿಸಿದ ಬುದ್ಧ ನೀಡಿದ ಕೊಡುಗೆಯಾದರೂ ಏನು? ಊರ ಜನ ಕಲ್ಲು ಹೊಡೆದು ಸಾಯಿಸುತ್ತಿದ್ದಾಗಲೂ (ಅಂಗುಲೀಮಾಲ ಕೈಯೆತ್ತುವುದಿಲ್ಲವೆಂದು ಖಾತ್ರಿಯಾದುದರಿಂದ) ಬುದ್ಧ ಅಸಹಾಯಕನಾಗಿದ್ದ ! ಡಕಾಯಿತ, ರಾಕ್ಷಸ ಎಂದು ಕರೆಸಿಕೊಂಡ ಅಂಗುಲೀಮಾಲನನ್ನೇ ಪರಿವರ್ತಿಸಿದ ಬುದ್ಧ, ತನ್ನ ಶಿಷ್ಯರೇ ಆದ ರಾಜ ಪ್ರಸೇನಜಿತ್ತ ಮತ್ತು ಬಿಂಬಸಾರರುಗಳನ್ನು ಯುದ್ಧದಾಹದಿಂದ ದೂರಮಾಡಲಿಲ್ಲ !

**ವೈಭವೀಕರಣ :** ವೈಯಕ್ತಿಕ ವೈಭವೀಕರಣವು ಇತಿಹಾಸದ ದಿಕ್ಕನ್ನೇ ತಪ್ಪಿಸುತ್ತಿದೆ. ರಾಜರಾಜ ಚೋಳ, ಪಲ್ಲವ ನರಸಿಂಹ ವರ್ಮರೇ ಮೊದಲಾದ ರಾಜರುಗಳನ್ನು ಮಹಾನ್ ನಾಯಕರನ್ನಾಗಿಸುತ್ತಾ ಅವರೇ ನಡೆಸಿದ ಅಮಾಯಕರ ಹತ್ಯಾಕಾಂಡದ ಬಗ್ಗೆ ನಾವೇಕೆ ಪ್ರಶ್ನಿಸುತ್ತಿಲ್ಲ ? ಕಲ್ಯಾಣದ ಆಕ್ರಮಣದ ಸಮಯದಲ್ಲಿ ಸುಮಾರು ಎಂಟು ಸಾವಿರ ಮುಗ್ಧರನ್ನು ಕಡಿದುಹಾಕಿದ ರಾಜರಾಜ ಚೋಳನನ್ನು 'ಮಹಾಶಯ' ಎಂದೇಕೆ ಕರೆಯಬೇಕು? 'ತಾಜ್‌ಮಹಲ್'ನ ಅದ್ಭುತ ಸೃಷ್ಟಿಗಾಗಿ ಷಹಜಹಾನ್‌ನನ್ನು ಪ್ರಶಂಸಿಸುತ್ತೇವೆ. ಅದೇಕಾಲದ (೧೬೩೨) ಭೀಕರ ಬರಗಾಲದಿಂದ ಹೆಣವನ್ನೂ ತಿನ್ನುತ್ತಿದ್ದ ಜನರ ಸ್ಥಿತಿಗತಿಗಳನ್ನು ಏಕೆ ಸುಧಾರಿಸಲಿಲ್ಲ ಎಂದು ಎಂದಾದರೂ ಪ್ರಶ್ನಿಸಿದ್ದೇವೆಯೇ?

ವ್ಯಕ್ತಿ ವೈಭವೀಕರಣಕ್ಕಿಂತಲೂ ಸಾಂಸ್ಕೃತಿಕ ವೈಭವೀಕರಣವು ಹೆಚ್ಚು ಪ್ರಶ್ನಾರ್ಹ. ಸಾಂಸ್ಕೃತಿಕವಾಗಿ ನಾವು ಸರ್ವಶ್ರೇಷ್ಠರೆಂದೇ ಭಾವಿಸಿದ್ದೇವೆ. ''ಇಡೀ ಜಗತ್ತು ಕತ್ತಲಾಗಿದ್ದಾಗ ಭಾರತ ಬೆಳಕಿನ ಮನೆಯಾಗಿ ಬೆಳಗಿತ್ತು'' ಎನ್ನುವುದು ಹಿರಿಯರೊಬ್ಬರ ಅನಿಸಿಕೆ.

ಹೊಯ್ಸಳರ ಗರುಡಪದ್ಧತಿ, ಸತಿಸಹಗಮನ, ಬಾಲ್ಯವಿವಾಹ, ಮಂತ್ರಗಳನ್ನು ಕೇಳಿದ ಮಾತ್ರಕ್ಕೇ ಕಿವಿಗೆ ಕಾದ ಸೀಸವನ್ನು ಹುಯ್ಯಿಸಿಕೊಳ್ಳಬೇಕಾಗಿದ್ದ ದಲಿತ, ಇವೆಲ್ಲವುಗಳ ಬಗ್ಗೆ ಚಕಾರವೆತ್ತುವುದಿಲ್ಲ. 'ವೀರಬಲ್ಲಾಳ'ನ ಚಿತೆಗೆ ಆತನ ಸಾವಿರ ಗರುಡರು ಆಹುತಿಯಾದಾಗ ವೀರ ಸ್ವರ್ಗ, ತ್ಯಾಗ ಎಂದೆಲ್ಲಾ ಕರೆಯಲಾಯಿತು. ಅಂದಿನ ನಾಗರಿಕತೆಯ ವ್ಯವಸ್ಥೆಯಲ್ಲಿ ಒಪ್ಪತಕ್ಕ ಮಾತೇ ಆಗಿರಬಹುದು. ಇಂದೂ ಒಪ್ಪಬೇಕಾದ ಮಾತೇ? ಇಂದಿನ ಸ್ಥಿತಿಯಲ್ಲಿ ಯೋಚಿಸಿದಾಗ ಗರುಡನಾಗಿ ಅಗ್ನಿಪ್ರವೇಶ ಮಾಡುವುದೆಂದರೆ 'ಆತ್ಮಹತ್ಯೆ' ಅಥವಾ 'ಹುಚ್ಚು', ಅಲ್ಲವೇ?

ಸತಿ ಸಹಗಮನ, ಬಾಲ್ಯವಿವಾಹ, ಸ್ತ್ರೀ ಶಿಶುಹತ್ಯೆ ಇವೆಲ್ಲವುಗಳಿಗೂ ಕೊಡುವ ಒಂದೇ ಕಾರಣವೆಂದರೆ ಮುಸ್ಲಿಂ ಆಕ್ರಮಣ ! ಸ್ವಲ್ಪಮಟ್ಟಿಗೆ ಒಪ್ಪಬಹುದಾದರೂ ಸತಿಪದ್ಧತಿಯ ಉಲ್ಲೇಖವು ಮುಸ್ಲಿಂ ಆಕ್ರಮಣಕ್ಕಿಂತ ನಾಲ್ಕು ನೂರು ವರ್ಷಗಳ ಹಿಂದಿನ ಭೋಗಾಜ್ಕ್ಯ್ಗೈ (ಇರಾನ್) ಶಾಸನದಲ್ಲೇ ದೊರೆಯುತ್ತದೆ. ಹಿಂದೂ ರಾಜರುಗಳ ಆಡಳಿತದಲ್ಲಿಯೂ ಮಹಿಳೆಯರ ಮೇಲೆ ಅತ್ಯಾಚಾರ, ಹಿಂಸೆಗಳು ನಡೆಯುತ್ತಲೇ ಇದ್ದವು.

ಸ್ತ್ರೀ ಶಿಶುಹತ್ಯೆ ಇಂದೂ ಅಸ್ತಿತ್ವದಲ್ಲಿದೆ. ಈಗ ಯಾರ ಆಕ್ರಮಣವೂ ಇಲ್ಲವಲ್ಲ ? ಆದರೂ ಮಹಿಳಾ ದೌರ್ಜನ್ಯವಿದೆ ಎಂದಾದರೆ ನಿಜವಾದ ಕಾರಣವನ್ನು ಕಂಡುಹಿಡಿಯಬೇಡವೇ ? ಎಂದೋ ಒಂದು ಕಾಲದಲ್ಲಿ ನಮ್ಮ ಹಿರಿಯರು ಆಚರಿಸಿದ ನಡವಳಿಕೆಗಳೇ ಸಂಸ್ಕೃತಿ ಎಂಬುದು 'ಪ್ರಶ್ನಾತೀತ ಮೌಲ್ಯ'ವಾದರೆ ಐದು ಸಾವಿರ ವರ್ಷಗಳ ಹಿಂದಿನ ನಡವಳಿಕೆಯನ್ನು ಯೋಚಿಸಿ ನೋಡಿ.

ಪಂಡಿತ ರಾಹುಲ ಸಾಂಕೃತ್ಯಾಯನರು ತಮ್ಮ 'ವೋಲ್ಗಾ-ಗಂಗಾ' ದಲ್ಲಿ ಹೇಳುವಂತೆ ಐದು ಸಹಸ್ರಮಾನಗಳ ಹಿಂದೆ ಒಂದು ಕುಟುಂಬದ ಹಿರಿಯ ಸ್ತ್ರೀಯು, ಆಕೆಯ ಗಂಡು ಮಕ್ಕಳು, ಸಹೋದರರು, ಮತ್ತು ಕುಟುಂಬದ ಎಲ್ಲಾ ಪುರುಷ ಸದಸ್ಯರಿಗೆ ಹೆಂಡತಿಯೇ ಆಗಿದ್ದಳು ! ಇದು ಇಂದು ಆಚರಣಾಯೋಗ್ಯವೇ? ಸಂಸ್ಕೃತಿ ಉಳಿಸುವ ಅಭಿಯಾನದೊಂದಿಗೆ ಅಳಿಸಬೇಕಾದ ಸಂಸ್ಕೃತಿಯ ಬಗ್ಗೆಯೂ ಯೋಚಿಸೋಣವೇ? ಋಣಾತ್ಮಕವಾದ ಐತಿಹಾಸಿಕ ವಿಚಾರಗಳನ್ನು ಪ್ರಶ್ನಿಸೋಣವೇ?

ಸಿ. ಜಿ. ಅರವಿಂದ
ಅಧ್ಯಾಪಕರು, ಎಸ್. ಎನ್. ವಿ. ಪ್ರೌ.ಶಾಲೆ, ಕಾರ್ಕಳ - ೫೭೪೧೦೪

## ಸಾಸಿವೆ

ಅಂದು ಬುದ್ಧ
ಕಿಸಾಗೋತಮಿಗೆ ಹೇಳಿದ್ದ-
'ಸಾವಿಲ್ಲದ ಮನೆಯ
ಸಾಸಿವೆ ತಾ'
ಇಂದಾದರೆ ಹೇಳುತ್ತಿದ್ದ -
'ಸಾ(ಲ)ವಿಲ್ಲದ ಮನೆಯ
ಸಾಸಿವೆ ತಾ'

ಎಂ. ವಿ. ಚಕ್ರಪಾಣಿ
ಹಗರಿಬೊಮ್ಮನಹಳ್ಳಿ

# ಸ್ತ್ರೀ - ಪುರುಷ ಅಸಮಾನತೆಯ ಮಾಪನಗಳು

**ಅಭಿವೃದ್ಧಿ ಹೊಂದಿದ ಅಥವಾ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಎಲ್ಲೂ ಸ್ತ್ರೀಯರಿಗೆ ಪುರುಷರೊಡನೆ ಸಮಾನ ಅವಕಾಶಗಳನ್ನು ಪಡೆಯಲು ತಕ್ಕ ವಾತಾವರಣ ಇನ್ನೂ ನಿರ್ಮಾಣವಾಗಿಲ್ಲ. ಅಸಮಾನತೆ ಕ್ರಮೇಣ ಕಡಿಮೆಯಾಗುತ್ತಿದ್ದರೂ ನಿರೀಕ್ಷಿಸಿದ ಮಟ್ಟದಲ್ಲಿ ಅದು ಇನ್ನೂ ಕಡಿಮೆಯಾಗಿಲ್ಲ. ಇದು ಇನ್ನೂ ಅಸಮಾನ ಪ್ರಪಂಚವಾಗಿಯೇ ಇದೆ.**

**ಬಿ. ವಿ. ವೀರಭದ್ರಪ್ಪ**

ಸಮಾಜದಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಪುರುಷರಷ್ಟೇ ಸಂಖ್ಯೆಯಲ್ಲಿರುವ ಸ್ತ್ರೀಯರು ಪುರುಷರ ಪಕ್ಷಪಾತ ನೀತಿಗೊಳಗಾಗಿ ನಾನಾ ರೀತಿಯ ಮಾನಸಿಕ ಹಾಗೂ ಶಾರೀರಿಕ ಬಾಧೆಗಳಿಗೆ ಒಳಗಾಗುತ್ತಿದ್ದಾರೆ. ಎಷ್ಟೋ ಜನ ಅಕಾಲ ಸಾವಿಗೀಡಾಗುತ್ತಿದ್ದಾರೆ. ಪ್ರಪಂಚದಾದ್ಯಂತ ಸ್ತ್ರೀಯರು ಈ ಕಾರಣಗಳಿಂದ ಅನುಭವಿಸಬೇಕಾದ ಹೃದಯವಿದ್ರಾವಕ ಯಾತನೆಗಳಲ್ಲಿ ಕೆಲವನ್ನು 'ವಿಶ್ವಸಂಸ್ಥೆ ಅಭಿವೃದ್ಧಿ ಕಾರ್ಯಕ್ರಮ'ದ ತಜ್ಞರು ನೀಡಿರುವ ಅಂಕೆ ಸಂಖ್ಯೆಗಳಿಂದ ತಿಳಿಯಬಹುದು. ಅದನ್ನು ಸಂಕ್ಷಿಪ್ತವಾಗಿ ಯು. ಎನ್. ಡಿ. ಪಿ. ಎಂದು ಕರೆಯಲಾಗಿದೆ.

೧. ಪೋಷಕ ಪದಾರ್ಥವಾದ ಕಬ್ಬಿಣದ ಕೊರತೆಯಿಂದ ಬರುವ ಶಕ್ತಿಹೀನತೆಗೆ (ಅನೀಮಿಯಾಕ್ಕೆ) ಗುರಿಯಾಗುತ್ತಿರುವವರಲ್ಲಿ ೨೪ ಕೋಟಿ ಪುರುಷರಿದ್ದರೆ, ಸ್ತ್ರೀಯರು ೪೬ ಕೋಟಿ ಇದ್ದಾರೆ.

೨. ಇಡೀ ವಿಶ್ವದಲ್ಲಿ ಜನಿಸುವ ಮಕ್ಕಳಲ್ಲಿ ಶೇ. ೨೮ ರಷ್ಟು ಭಾರತ, ಪಾಕಿಸ್ತಾನ ಮತ್ತು ಬಾಂಗ್ಲಾದೇಶಗಳಲ್ಲಿ ಜನಿಸುತ್ತಾರೆ. ವಿಶ್ವದಾದ್ಯಂತ ಸಾಯುವ ಬಾಣಂತಿಯರಲ್ಲಿ ಶೇ. ೪೮ ರಷ್ಟು ಈ ದೇಶಗಳಿಗೆ ಸೇರಿದವರಾಗಿದ್ದಾರೆ.

೩. ಪ್ರಪಂಚದಲ್ಲಿ ಒಟ್ಟು ಅನಕ್ಷರಸ್ಥರ ಸಂಖ್ಯೆ ೯೦ ಕೋಟಿ ಇದ್ದರೆ, ಅವರಲ್ಲಿ ಪ್ರತಿ ಮಾನವರಿಗೆ ಇಬ್ಬರು ಸ್ತ್ರೀಯರಾಗಿದ್ದಾರೆ.

೪. ಸ್ತ್ರೀ ಹಿಂಸೆ ಮತ್ತು ಪೀಡನೆಗಳು ಯಾವುದೇ ಜಾತಿ, ಮತ, ವರ್ಗ ಮತ್ತು ಭೌಗೋಳಿಕ ಭೇದಗಳಿಲ್ಲದೆ ಪ್ರಪಂಚದ ಎಲ್ಲ ಸಮಾಜಗಳಲ್ಲೂ ಪ್ರಳಯ-ನೃತ್ಯವಾಡುತ್ತಿವೆ.

ಅಭಿವೃದ್ಧಿ ಹೊಂದಿದ ಅಥವಾ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಎಲ್ಲೂ ಸ್ತ್ರೀಯರಿಗೆ ಪುರುಷರೊಡನೆ ಸಮಾನ ಅವಕಾಶಗಳನ್ನು ಪಡೆಯಲು ತಕ್ಕ ವಾತಾವರಣ ಇನ್ನೂ ನಿರ್ಮಾಣವಾಗಿಲ್ಲ. ಅಸಮಾನತೆ ಕ್ರಮೇಣ ಕಡಿಮೆಯಾಗುತ್ತಿದ್ದರೂ ನಿರೀಕ್ಷಿಸಿದ ಮಟ್ಟದಲ್ಲಿ ಅದು ಇನ್ನೂ ಕಡಿಮೆಯಾಗಿಲ್ಲ. ಇದು ಇನ್ನೂ ಅಸಮಾನ ಪ್ರಪಂಚವಾಗಿಯೇ ಇದೆ. ಸ್ತ್ರೀ ಪುರುಷ ಅಸಮಾನತೆಗಳು ಯಾವ ದೇಶದಲ್ಲಿ ಎಷ್ಟು ಪ್ರಮಾಣದಲ್ಲಿವೆ ಎಂಬುದನ್ನು ಸ್ಥೂಲವಾಗಿ ತೋರಿಸುವ ಸೂಚಿಗಳನ್ನು ಯು. ಎನ್. ಡಿ. ಪಿ. ತಜ್ಞರು ರೂಪಿಸಿದ್ದಾರೆ. ಸ್ತ್ರೀ - ಪುರುಷ ಸಮಾನತ್ವ ಸಾಧನೆಯಲ್ಲಿ ಯಾವ ದೇಶ ಯಾವ ಸ್ಥಾನದಲ್ಲಿದೆ, ಆ ಪರಿಸ್ಥಿತಿಯನ್ನು ಸುಧಾರಿಸಲು ಯಾವ ಕ್ರಮಗಳನ್ನು ಕೈಗೊಳ್ಳಬೇಕು ಎಂಬ ಅಂಶಗಳ ಬಗ್ಗೆ ಈ ಸೂಚಿಗಳು ಸಹಾಯಕವಾಗುತ್ತವೆ. ಅವುಗಳನ್ನು ಸಂಕ್ಷಿಪ್ತವಾಗಿ ಪರಿಶೀಲಿಸೋಣ.

**ಮಾನವ ಅಭಿವೃದ್ಧಿ ಸೂಚಿ**

'ಮಾನವ ಅಭಿವೃದ್ಧಿ ಸೂಚಿ'ಯನ್ನು ಸಂಕ್ಷಿಪ್ತವಾಗಿ ಎಚ್. ಡಿ. ಐ. ಎಂದು ಕರೆಯಲಾಗುತ್ತದೆ. ಈ ಸೂಚಿಯ ತಯಾರಿಕೆಗೆ ಮಾನವ ಜೀವನ ಕಾಲಾವಧಿ, ಶಿಕ್ಷಣ ಮಟ್ಟ, ಆದಾಯಗಳನ್ನು ಆಧಾರವಾಗಿ ತೆಗೆದುಕೊಳ್ಳಲಾಗಿದೆ. ಮಾನವನು ದೀರ್ಘಕಾಲ ಬದುಕಿರುವುದಷ್ಟೇ ಅಲ್ಲ, ಆ ಕಾಲದಲ್ಲಿ ಅವನ ಜೀವನ ಆರೋಗ್ಯಪ್ರದವಾಗಿ, ಸುಖದಾಯಕವಾಗಿರಬೇಕು. ಶಿಕ್ಷಣ ಅಂದರೆ ಯಾವುದೋ ಪದವಿ ಪಡೆಯುವುದಷ್ಟೇ ಅಲ್ಲ; ಅದು ಉದ್ಯೋಗದ ಜೊತೆಗೆ ವ್ಯಕ್ತಿಯ ಬುದ್ಧಿ ಮತ್ತು ಮನೋವಿಕಾಸಕ್ಕೆ ಸಹಾಯಕವಾಗಿರಬೇಕು. ಮೇಲೆ ಹೇಳಿದ ಅಂಶಗಳಿಗೆ ಅವುಗಳ ಪ್ರಾಧಾನ್ಯತೆಗೆ ತಕ್ಕ ಹಾಗೆ ಬೆಲೆಯನ್ನು ಕಟ್ಟಲಾಗಿದೆ. ಇವುಗಳ ಆಧಾರದ ಮೇಲೆ ರಾಷ್ಟ್ರಗಳಿಗೆ ಸ್ಕೋರುಗಳನ್ನು ಸಿದ್ಧಪಡಿಸಲಾಗಿದೆ. ಆಯಾ ದೇಶಗಳು ಪ್ರಕಟಿಸಿದ ಅಧಿಕೃತ ಮಾಹಿತಿಯ ಆಧಾರದ ಮೇಲೆ ಯು.ಎನ್.ಡಿ.ಪಿ.ಯ ತಜ್ಞರು ಈ ಸೂಚಿಯನ್ನು ರೂಪಿಸಿದ್ದಾರೆ.

ಆರೋಗ್ಯದಾಯಕವಾಗಿ, ಸುಖಕರವಾದ ಜೀವನವನ್ನು ಮಾನವನು ನಡೆಸುವ ಅವಕಾಶವಿರುವ ದೇಶಕ್ಕೆ ಸೂಚಿ ಸಂಖ್ಯೆ ಒಂದಾದರೆ, ಅದಕ್ಕಿಂತ ಕೆಳಮಟ್ಟದ ಜೀವನವನ್ನು ನಡೆಸುವ ದೇಶದ ಸೂಚಿ ಸಂಖ್ಯೆ ಒಂದಕ್ಕಿಂತ ಕಡಿಮೆ ಇರುತ್ತದೆ. ಅದನ್ನು ದಶಮಾಂಶ ಪದ್ಧತಿಯಲ್ಲಿ ೦.೫೦, ೦.೭೫, ೦.೧೩ ಇತ್ಯಾದಿಯಾಗಿ ಉದಾಹರಿಸಬಹುದು. ಸಾಮಾನ್ಯರಿಗೆ ಸುಲಭ ಗ್ರಾಹ್ಯವಾಗಲಿ ಎಂಬ ದೃಷ್ಟಿಯಿಂದ ಮಾನವ ಜೀವನ ಅತ್ಯುನ್ನತವಾಗಿರುವ ದೇಶಕ್ಕೆ ಯು. ಎನ್. ಡಿ. ಪಿ. ತಜ್ಞರು ಸೂಚಿಸಿರುವ ಒಂದು ಸಂಖ್ಯೆಗೆ ಬದಲು ಇಲ್ಲಿ ೧೦೦ ಎಂದು ಸ್ವೀಕರಿಸಲಾಗಿದೆ. ಇದಕ್ಕಿಂತ ಕಡಿಮೆ ಇರುವ ದೇಶಗಳ ದಶಮಾಂಶಗಳನ್ನು ಅದಕ್ಕೆ ಅನುಗುಣವಾಗಿ ಪೂರ್ಣಾಂಕಗಳನ್ನಾಗಿ ೫೦, ೭೫, ೧೩ ಎಂದು ಪರಿಗಣಿಸಲಾಗಿದೆ. ೧೦೦ ಪಾಯಿಂಟುಗಳಿರುವ ಸ್ಕೋರು ಅಪೇಕ್ಷಿತ ಅಭಿವೃದ್ಧಿಗೆ ಮಾನದಂಡವಾದಾಗ, ಒಂದು ದೇಶಕ್ಕೆ ೫೦ ಪಾಯಿಂಟುಗಳ ಸ್ಕೋರು ಲಭಿಸಿದರೆ ಆಶಿಸಿದ ಅಭಿವೃದ್ಧಿಯ ಅರ್ಧಭಾಗವನ್ನು ಮಾತ್ರ ಆ ದೇಶ ಸಾಧಿಸಿದೆ ಎಂಬ ಅಂಶ ಸುಲಭವಾಗಿ ಅರ್ಥವಾಗುತ್ತದೆ.

**ಲಿಂಗ ಸಂಬಂಧಿ ಅಭಿವೃದ್ಧಿ ಸೂಚಿ**

ಸಮಾಜದಲ್ಲಿ ಪುರುಷರ ಜೀವನ ಮಟ್ಟಕ್ಕಿಂತ ಸ್ತ್ರೀಯರ ಜೀವನಮಟ್ಟ, ಜೀವನ ಸ್ಥಿತಿಗತಿಗಳು ಕೆಳಮಟ್ಟದಲ್ಲಿರುತ್ತವೆ. ಜೀವನ ಕಾಲಾವಧಿ, ಶಿಕ್ಷಣ ಮಟ್ಟ, ಆದಾಯ ಪರಿಮಾಣಗಳಲ್ಲಿ ಸ್ತ್ರೀ ಪುರುಷರ ನಡುವೆ ಇರುವ ಭೇದ ಪ್ರಮಾಣವನ್ನು ಆಧಾರವಾಗಿ ತೆಗೆದುಕೊಂಡು ಈ ತಜ್ಞರು ಸ್ತ್ರೀಯರ ಅಭಿವೃದ್ಧಿಯನ್ನು ಗುರುತಿಸುವ ಮತ್ತೊಂದು ಸೂಚಿಯನ್ನು ರೂಪಿಸಿದ್ದಾರೆ. ಅದನ್ನು ಲಿಂಗ-ಸಂಬಂಧಿ ಅಭಿವೃದ್ಧಿ ಸೂಚಿ ಅಥವಾ ಸಂಕ್ಷಿಪ್ತವಾಗಿ ಜಿ. ಡಿ. ಐ. ಎಂದಿದ್ದಾರೆ. ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಸ್ತ್ರೀ-ಪುರುಷ ಅಸಮಾನತೆ ಪ್ರಮಾಣ ಸೂಚಕವಾಗಿಯೂ ಇದನ್ನು ಸ್ವೀಕರಿಸಬಹುದು. ಸೃಜನಾತ್ಮಕ ಶಕ್ತಿಯ ಅಭಿವೃದ್ಧಿಯ ವಿಷಯದಲ್ಲಿ ಸ್ತ್ರೀಯರ ಹಿಂದುಳಿದಿರುವಿಕೆಗೆ ಇದು ಮಾನದಂಡವಾಗಿದೆ. ಯು. ಎನ್. ಡಿ. ಪಿ. ಯ ತಜ್ಞರು ೧೩೦ ದೇಶಗಳಿಗೆ ಈ ಸೂಚಿಯನ್ನು ಸಿದ್ಧಪಡಿಸಿ ೧೯೯೫ರ ವರದಿಯಲ್ಲಿ ಒದಗಿಸಿದ್ದಾರೆ.

ಈ ಜಿ. ಡಿ. ಐ. ಸೂಚಿಯಲ್ಲಿ ಮೊದಲ ನಾಲ್ಕು ಸ್ಥಾನಗಳನ್ನು ನಾರ್ಡಿಕ್ ದೇಶಗಳೆಂದು ಹೆಸರಾದ ಸ್ವೀಡನ್, ಫಿನ್ಲ್ಯಾಂಡ್, ನಾರ್ವೆ, ಡೆನ್ಮಾರ್ಕ್ ದೇಶಗಳು ಗಳಿಸಿವೆ. ಮೊದಲ ಸ್ಥಾನದಲ್ಲಿರುವ ಸ್ವೀಡನ್‌ನ ಜಿ. ಡಿ. ಐ. ಸ್ಕೋರು ೯೨ ಆಗಿದ್ದರೆ ನಾಲ್ಕನೇ ಸ್ಥಾನದಲ್ಲಿರುವ ಡೆನ್ಮಾರ್ಕಿನ ಸ್ಕೋರು ೯೦ ಆಗಿದೆ. ಆ ದೇಶಗಳ ಸರ್ಕಾರಗಳು ಸ್ತ್ರೀ ಪುರುಷ ಸಮಾನತ್ವ ಸಾಧನೆಯನ್ನು ಒಂದು ರಾಜಕೀಯ ಗುರಿಯನ್ನಾಗಿಟ್ಟುಕೊಂಡು ವ್ಯವಹರಿಸುತ್ತಿರುವುದರಿಂದ ಆ ಅಭಿವೃದ್ಧಿ ಸಾಧ್ಯವಾಗಿದೆ ಎಂದು ಯು. ಎನ್. ಡಿ. ಪಿ. ತಜ್ಞರು ಅಭಿಪ್ರಾಯಪಡುತ್ತಾರೆ.

ಸಿಂಗಪೂರ್, ಉರುಗ್ವೆ, ಥಾಯ್‌ಲ್ಯಾಂಡ್‌ನಂತಹ ಅಭಿವೃದ್ಧಿ ಹೊಂದುತ್ತಿರುವ ಕೆಲವು ದೇಶಗಳು ರ್‍ಯಾಂಕಿಂಗ್‌ನಲ್ಲಿ ೩೩ರ ಸ್ಥಾನಕ್ಕಿಂತ ಮೇಲೆ ಇರುವುದು ಗಮನಾರ್ಹವಾಗಿದೆ. ಶ್ರೀಲಂಕ ೬೬ ಪಾಯಿಂಟುಗಳಿಂದ ೫೮ನೇ ಸ್ಥಾನದಲ್ಲೂ, ಭಾರತ ೪೦ ಪಾಯಿಂಟ್‌ಗಳಿಂದ ೯೯ನೇ ಸ್ಥಾನದಲ್ಲೂ, ಪಾಕಿಸ್ತಾನ ೩೬ ಪಾಯಿಂಟ್‌ಗಳಿಂದ ೧೦೩ನೇ ಸ್ಥಾನದಲ್ಲೂ ಇವೆ. ಕಮ್ಯುನಿಸ್ಟ್ ದೇಶಗಳಲ್ಲಿ ಜಿ. ಡಿ. ಐ. ಸ್ಥಾಯಿ ಅವುಗಳಿಗಿಂತ ಬಹಳ ಉನ್ನತವಾಗಿದೆ. ಕ್ಯೂಬಾ ೭೩ ಪಾಯಿಂಟುಗಳಿಂದ ೪೭ನೇ ಸ್ಥಾನದಲ್ಲಿ, ಚೈನಾ ೫೮ ಪಾಯಿಂಟುಗಳಿಂದ ೭೧ ನೇ ಸ್ಥಾನದಲ್ಲಿ ಮತ್ತು ವಿಯೆಟ್ನಾಂ ೫೪ ಪಾಯಿಂಟುಗಳಿಂದ ೭೪ನೇ ಸ್ಥಾನದಲ್ಲಿವೆ.

ಈ ರ್‍ಯಾಂಕಿಂಗ್‌ನಲ್ಲಿ ಅತಿಕೆಳಗೆ ಇರುವ ಅಫ್ಘಾನಿಸ್ಥಾನ, ಮಾಲಿ ಮುಂತಾದ ದೇಶಗಳು ಮಾನವಾಭಿವೃದ್ಧಿಯಲ್ಲಿ ಹಿಂದೆ ಬಿದ್ದಿರುವುದರಿಂದ ಅವುಗಳ ಜಿ. ಡಿ. ಐ. ಸಹ ಕನಿಷ್ಠವಾಗಿದೆ. ಅಲ್ಲಿಯ ಸ್ತ್ರೀಯರು ಎರಡು ಬಗೆಯ ತೊಂದರೆಗಳನ್ನು ಅನುಭವಿಸಬೇಕಾಗಿದೆ. ಅಭಿವೃದ್ಧಿ ಹೀನತೆಯ

ಕಾರ್ಪಣ್ಯದ ಜೊತೆಗೆ ಅವರು ಲಿಂಗ ತಾರತಮ್ಯದ ಕಷ್ಟಗಳಿಗೂ ಗುರಿಯಾಗುತ್ತಿದ್ದಾರೆ.

ಮಾನವ ಜೀವನಾಭಿವೃದ್ಧಿಯ ರ್‍ಯಾಂಕಿಂಗ್‌ಗಿಂತ ಲಿಂಗ ಸಂಬಂಧಿ ಅಭಿವೃದ್ಧಿ ರ್‍ಯಾಂಕಿಂಗ್ ಉತ್ತಮವಾಗಿರುವುದು ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಮಾತ್ರವಲ್ಲದೆ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲೂ ಕಂಡುಬರುತ್ತಿರುವುದು ಗಮನಾರ್ಹ ಅಂಶವಾಗಿದೆ. ಅಭಿವೃದ್ಧಿ ಹೊಂದಿದ ದೇಶಗಳೆಂದು ಗುರುತಿಸಲಾದ ಸ್ವೀಡನ್, ಡೆನ್ಮಾರ್ಕ್, ಫಿನ್ಲ್ಯಾಂಡ್, ನಾರ್ವೆಗಳ ಜೊತೆಗೆ ಅಭಿವೃದ್ಧಿ ಹೊಂದುತ್ತಿರುವ ದೇಶಗಳಾದ ಮಲೇಶಿಯಾ, ಶ್ರೀಲಂಕ, ಥಾಯ್‌ಲ್ಯಾಂಡ್, ಕ್ಯೂಬಾ ದೇಶಗಳು ಇಂತಹ ಸ್ಥಾನದಲ್ಲಿರುವುದು ಒಂದು ವಿಶೇಷ. ಈ ದೇಶಗಳಲ್ಲೂ ಸ್ತ್ರೀ ಪುರುಷ ಭೇದವಿಲ್ಲದೆ ಶಿಕ್ಷಣ, ಆರೋಗ್ಯಗಳ ಅಭಿವೃದ್ಧಿ ಸಾಧನೆಗೆ ಅಧಿಕ ಬಂಡವಾಳವನ್ನು ಹೂಡಿ ಕಾರ್ಯಸಾಧನೆಗೆ ಕೃಷಿ ಮಾಡಲಾಗಿದೆ. ಇದರಿಂದ ಸ್ತ್ರೀಯರ ಸೃಜನಾತ್ಮಕ ಶಕ್ತಿಗಳ ವಿಕಾಸಕ್ಕೆ, ಅವರ ಆದಾಯಾರ್ಜನೆಯ ಶಕ್ತಿಯ ಬೆಳವಣಿಗೆಗೆ ಅನುಕೂಲವಾಗಿದೆ. ಉಳಿದ ದೇಶಗಳಿಗಿಂತ ಈ ದೇಶಗಳಲ್ಲಿ ಸ್ತ್ರೀಯರ ಅಭಿವೃದ್ಧಿಗೆ ಅಧಿಕ ಕೃಷಿ ನಡೆದಿದೆ ಎಂದು ಯು. ಎನ್. ಡಿ. ಪಿ. ತಜ್ಞರು ಅಭಿಪ್ರಾಯ ಪಡುತ್ತಾರೆ.

ಕೆಲವು ಅಭಿವೃದ್ಧಿ ಹೊಂದಿದ ದೇಶಗಳು ಎಚ್. ಡಿ. ಐ. ರ್‍ಯಾಂಕಿಂಗ್‌ನಲ್ಲಿ ಮೇಲೆ ಇದ್ದರೂ ಜಿ. ಡಿ. ಐ. ರ್‍ಯಾಂಕಿಂಗ್‌ನಲ್ಲಿ ಕೆಳಗಿನ ಸ್ಥಾನದಲ್ಲಿರುವುದು ಕಂಡುಬರುತ್ತದೆ. ೯೫ ಅಂಕಗಳಿಂದ ಎಚ್. ಡಿ. ಐ. ರ್‍ಯಾಂಕಿಂಗ್‌ನಲ್ಲಿ ೨೭ನೇ ಸ್ಥಾನದಲ್ಲಿರುವ ಲುಕ್ಸಂಬರ್ಗ್ ಜಿ. ಡಿ. ಐ. ರ್‍ಯಾಂಕಿಂಗ್‌ನಲ್ಲಿ ೩೫ನೇ ಸ್ಥಾನದಲ್ಲಿದೆ. ೯೪ ಅಂಕಗಳಿಂದ ಎಚ್. ಡಿ. ಐ. ರ್‍ಯಾಂಕಿಂಗ್ ೪ ನೇ ಸ್ಥಾನ ಆಕ್ರಮಿಸಿರುವ ನೆದರ್‌ಲ್ಯಾಂಡ್ಸ್ ಜಿ. ಡಿ. ಐ. ರ್‍ಯಾಂಕಿಂಗ್‌ನಲ್ಲಿ ೮೫ ಅಂಕಗಳಿಂದ ೨೦ನೇ ಸ್ಥಾನದಲ್ಲಿದೆ ! ಎಚ್. ಡಿ. ಐ. ರ್‍ಯಾಂಕಿಂಗ್‌ನಲ್ಲಿ ೯ ನೇ ಸ್ಥಾನದಲ್ಲಿರುವ ಸ್ಪೈನ್ ಜಿ. ಡಿ. ಐ. ರ್‍ಯಾಂಕಿಂಗ್‌ನಲ್ಲಿ ೩೪ನೇ ಸ್ಥಾನದಲ್ಲಿದೆ. ಈ ಮೂರು ದೇಶಗಳಲ್ಲಿ ಶಿಕ್ಷಣ, ಆರೋಗ್ಯ ವಿಷಯಗಳಲ್ಲಿ ಸ್ತ್ರೀ ಪುರುಷರ ನಡುವೆ ಅಷ್ಟು ವ್ಯತ್ಯಾಸವಿಲ್ಲ, ಆದರೆ ಪುರುಷರ ಸಂಪಾದನೆಗಿಂತ ಸ್ತ್ರೀಯರ ಸಂಪಾದನೆ ಕಡಿಮೆ ಇರುವುದರಿಂದ ಜಿ. ಡಿ. ಐ. ರ್‍ಯಾಂಕಿಂಗ್‌ನಲ್ಲಿ ಕೆಳಗಿನ ಸ್ಥಾನಗಳಿಗೆ ಇಳಿದಿವೆ ಎಂದು ತಜ್ಞರು ಭಾವಿಸುತ್ತಾರೆ. ಪುರುಷರಿಗಿಂತ ಕಡಿಮೆ ಸಂಖ್ಯೆಯ ಸ್ತ್ರೀಯರು ವೇತನಾರ್ಜನೆಗೆ ಹೋಗುತ್ತಿರುವುದು ಪುರುಷರ ವೇತನಗಳಿಗಿಂತ ಸ್ತ್ರೀಯರ ವೇತನಗಳು ಕಡಿಮೆ ಇರುವುದು ಈ ಇಳಿಮುಖಕ್ಕೆ ಕಾರಣವೆಂದು ಅವರು ವಿವರಿಸಿದ್ದಾರೆ.

ಜಿ. ಡಿ. ಐ. ರ್‍ಯಾಂಕಿಂಗ್‌ನಲ್ಲಿ ಪ್ರಥಮ ಸ್ಥಾನವನ್ನಾಕ್ರಮಿಸಿರುವ ಸ್ವೀಡನ್‌ನಲ್ಲಿ ಸ್ತ್ರೀಯರ ಆದಾಯ ಪುರುಷರ ಆದಾಯದ ಶೇ. ೭೧ ರಷ್ಟು ಇದೆ. ಮೇಲಿನ ದೇಶಗಳನ್ನು ಸ್ವೀಡನ್‌ಗೆ ಹೋಲಿಸಿದರೆ ಅವುಗಳ ಸ್ತ್ರೀಯರ ಆದಾಯ ಸ್ವೀಡನ್ ಸ್ತ್ರೀಯರ ಆದಾಯದ ಶೇ. ೨೩- ಶೇ. ೪೧ರ ನಡುವೆ ನಿಲ್ಲುತ್ತದೆ.

ಅಭಿವೃದ್ಧಿ ಹೊಂದಿದ ದೇಶಗಳು ಶಿಕ್ಷಣ, ಆರೋಗ್ಯ ಪೋಷಣೆಯ ವಿಷಯಗಳಲ್ಲಿ ಲಿಂಗಭೇದವನ್ನು ಬಹುಮಟ್ಟಿಗೆ ನಿವಾರಿಸಿವೆ. ಆದ್ದರಿಂದ ಸೃಜನಾತ್ಮಕ ಶಕ್ತಿಗಳ ಅಭಿವೃದ್ಧಿ ವಿಷಯದಲ್ಲಿ ಸ್ತ್ರೀ ಪುರುಷರ ನಡುವಿನ ಇಲ್ಲವೇ ಇಲ್ಲವೆನ್ನುವಷ್ಟು ಕಡಿಮೆಯಾಗಿದೆ. ಆದ್ದರಿಂದ ಸ್ತ್ರೀ ಪುರುಷ ಸಮಾನತ್ವ ಸಾಧನೆಯ ಸಮಸ್ಯೆ ಈ ದೇಶಗಳಲ್ಲಿ ಆ ರಂಗಗಳಿಂದ ಈಗ ಆರ್ಥಿಕ ಮತ್ತು ರಾಜಕೀಯ ರಂಗಗಳತ್ತ ತಿರುಗಿದೆ.

ಈ ವಿಶ್ಲೇಷಣೆಯ ಆಧಾರದ ಮೇಲೆ ಯು. ಎನ್. ಡಿ. ಪಿ. ತಜ್ಞರು ಕೆಲವು ನಿರ್ಣಯಗಳಿಗೆ ಬಂದಿದ್ದಾರೆ:

೧. ಪುರುಷನೊಡನೆ ಸಮಾನವಾದ ಸ್ಥಾನವನ್ನು ಸ್ತ್ರೀಗೆ ಪ್ರಪಂಚದಲ್ಲಿ ಯಾವ ಸಮಾಜವೂ ನೀಡಿಲ್ಲ. ಲಿಂಗ ಸಂಬಂಧಿ ಅಭಿವೃದ್ಧಿ ಸೂಚಿ ( ಜಿ. ಡಿ. ಐ.) ಇದನ್ನು ದೃಢಪಡಿಸುತ್ತದೆ. ಸ್ತ್ರೀ ಪುರುಷ ಸಮಾನತ್ವವಿದ್ದಾಗ ಈ ಸೂಚಿಯ ಪ್ರಕಾರ ಸ್ಕೋರ್ ೧೦೦ ಅಂಕಗಳಿರಬೇಕು. ಯಾವ ದೇಶವೂ ಅಷ್ಟು ಸ್ಕೋರ್ ಮಾಡಿಲ್ಲ. ಎಲ್ಲ ಸ್ಕೋರ್‌ಗಳಿಗಿಂತ ಹೆಚ್ಚು ಸ್ಕೋರ್, ೯೨ ಅಂಕಗಳನ್ನು, ಸ್ವೀಡನ್ ಪಡೆದಿದೆ. ಯು. ಎನ್. ಡಿ. ಪಿ. ತಜ್ಞರು ೧೩೦ ದೇಶಗಳಿಗೆ ಜಿ. ಡಿ. ಐ. ಸ್ಕೋರುಗಳನ್ನು ಲೆಕ್ಕ ಹಾಕಿದ್ದಾರೆ. ಆ ದೇಶಗಳ ಸರಾಸರಿ ಸ್ಕೋರ್ ೬೦ ಅಂಕಗಳು ಮಾತ್ರ. ಇದರಿಂದ ಸ್ತ್ರೀ ಪುರುಷ ಸಮಾನತೆಯ ಗುರಿಮುಟ್ಟಲು ಇನ್ನೂ ಸಾಕಷ್ಟು ಶ್ರಮಿಸಬೇಕಾಗಿದೆ ಎಂಬುದು ಸ್ಪಷ್ಟವಾಗುತ್ತದೆ

೨. ಸ್ತ್ರೀ ಪುರುಷ ಸಮಾನತೆಯ ಪರಿಮಾಣ ದೇಶದ ಅಭಿವೃದ್ಧಿ ಸ್ಥಾಯಿಯನ್ನು ಆಧರಿಸಿಲ್ಲ. ದೇಶದ ವ್ಯಕ್ತಿಯ ಸರಾಸರಿ ಆದಾಯವನ್ನು ಜಿ. ಡಿ. ಐ. ಸ್ಕೋರಿನೊಡನೆ ನೋಡಿದಾಗ ಈ ವಿಷಯ ಸ್ಪಷ್ಟವಾಗುತ್ತದೆ. ಸೌದಿ ಅರೇಬಿಯಾದ ಪ್ರಜೆಗಳ ತಲಾ ಆದಾಯದ ಐದರಲ್ಲೊಂದು ಭಾಗ ಮಾತ್ರ ಇರುವ ಚೈನಾ, ಜಿ. ಡಿ. ಐ. ರ್‍ಯಾಂಕಿಂಗ್‌ನಲ್ಲಿ ಆ ದೇಶಕ್ಕಿಂತ ಮೇಲಿನ ಸ್ತರದಲ್ಲಿದೆ. ಜಿ.ಡಿ.ಐ. ಸ್ಕೋರು ೫೮ ಇರುವ ಚೈನಾ ೭೧ರ ರ್‍ಯಾಂಕಿನಲ್ಲಿದ್ದರೆ, ೫೧ ಸ್ಕೋರು ಇರುವ ಸೌದಿ ಅದಕ್ಕಿಂತ ಹತ್ತು ರ್‍ಯಾಂಕು ಕೆಳಗೆ ೮೧ರ ಸ್ಥಾನದಲ್ಲಿದೆ. ಚೈನಾಕ್ಕಿಂತ ಬಡದೇಶವಾದ ಕ್ಯೂಬಾ ೭೨ ಅಂಕಗಳಿಂದ ೪೭ನೇ ರ್‍ಯಾಂಕನ್ನು ಗಳಿಸಿದೆ.

೩. ಸ್ತ್ರೀ ಪುರುಷ ಸಮಾನತೆಯ ಸಾಧನಾ ಕೃಷಿ ಮುಂದುವರಿಯುತ್ತಲೇ ಇದೆ. ಕಳೆದ ಎರಡು ದಶಕಗಳ ಕಾಲಾವಧಿಯಲ್ಲಿ ಅದರ ಸತ್ಪರಿಣಾಮಗಳನ್ನು ನಾವು ನೋಡಬಹುದು. ಸ್ತ್ರೀಯರ ಅಭಿವೃದ್ಧಿ ಗೋಚರಿಸುತ್ತದೆಯಾದರೂ ಸಾಧಿಸಿರುವುದಕ್ಕಿಂತ ಸಾಧಿಸಬೇಕಾಗಿರುವುದು ತುಂಬಾ ಇದೆ ಎಂದು ಆ ತಜ್ಞರು ಸ್ಪಷ್ಟಪಡಿಸಿದ್ದಾರೆ. ೧೯೭೦ರಿಂದ ದೇಶಗಳ ಜಿ. ಡಿ. ಐ. ಸ್ಕೋರ್ ಬೆಳೆಯುತ್ತಿರುವುದು ಕಾಣಿಸುತ್ತಿದೆ. ಈ ವಿಷಯದಲ್ಲಿ ಅಭಿವೃದ್ಧಿ ಸಾಧಿಸಲಾರಂಭಿಸಿರುವ ಯಾವುದೇ ದೇಶ ಹಿಂದೆ ಸರಿಯದೆ ಅಭಿವೃದ್ಧಿ ಪಥದಲ್ಲಿ ಮುನ್ನಡೆಯುತ್ತಿರುವುದು ಗಮನಾರ್ಹ ಅಂಶವೆಂದು ತಜ್ಞರು ಗುರುತಿಸಿದ್ದಾರೆ. ದೇಶಗಳು ಸಾಧಿಸುತ್ತಿರುವ ಅಭಿವೃದ್ಧಿಯ ಪರಿಮಾಣ ಒಂದೇ ರೀತಿಯಲ್ಲಿಲ್ಲ; ತೀವ್ರವಾದ ಹೆಚ್ಚು - ಕಡಿಮೆಗಳಿವೆ. ಯು. ಎನ್. ಡಿ. ಪಿ. ತಜ್ಞರು ೭೯ ದೇಶಗಳ ೧೯೭೦ ಮತ್ತು ೧೯೯೦ರ ಜಿ. ಡಿ. ಐ. ಪಟ್ಟಿಯನ್ನು ತಯಾರಿಸಿ, ಆ ದೇಶಗಳ ಕಾರ್ಯ ಸಾಧನೆಯ ಪರಿಮಾಣಗಳನ್ನು ಹೋಲಿಸಿ ನೋಡಿದ್ದಾರೆ. ಈ ಎಲ್ಲ ದೇಶಗಳ ಸರಾಸರಿ ಸ್ಕೋರು ೧೯೭೦ರಲ್ಲಿ ೪೩ ಅಂಕಗಳಾಗಿದ್ದುದು ೧೯೯೦ಕ್ಕೆ ಅದು ೬೪ ಕ್ಕೆ ಬೆಳೆದಿದೆ. ಈ ಎರಡು ದಶಕಗಳ ಅವಧಿಯಲ್ಲಿ ಸ್ಕೋರು ಶೇ. ೪೮ ರಷ್ಟು ವೃದ್ಧಿಯಾಗಿದೆ. ಅಭಿವೃದ್ಧಿ ಹೊಂದಿದ ದೇಶಗಳ ಸರಾಸರಿ ಜಿ. ಡಿ. ಐ. ಸ್ಕೋರು ೧೯೭೦ರಲ್ಲಿ ೬೯ ಇದ್ದುದು ೧೯೯೦ರಲ್ಲಿ ೮೭ ಕ್ಕೆ ಏರಿದೆ. ಅಲ್ಲಿ ಈ ಎರಡು ದಶಕಗಳಲ್ಲಿ ಬೆಳೆದ ಜಿ. ಡಿ. ಐ. ಸ್ಕೋರಿನ ಪರಿಮಾಣ ಶೇ. ೨೮ ಎಂದು ಗುರುತಿಸಲಾಗಿದೆ. ಅಭಿವೃದ್ಧಿ ಹೊಂದದ ಅಥವಾ ಹೊಂದುತ್ತಿರುವ ದೇಶಗಳ ಸರಾಸರಿ ಸ್ಕೋರು ೧೯೭೦ರಲ್ಲಿ ೩೫ ಅಂಕಗಳಿದ್ದುದು, ೧೯೯೦ರಲ್ಲಿ ೫೬ಕ್ಕೆ ಏರಿದೆ. ಈ ದೇಶಗಳಲ್ಲಿ ಆ ಎರಡು ದಶಕಗಳ ಅವಧಿಯಲ್ಲಿ ಶೇ. ೬೨ರಷ್ಟು ಅಭಿವೃದ್ಧಿ ಸಾಧಿಸಲಾಗಿದೆ. ಅಭಿವೃದ್ಧಿ ಹೊಂದುತ್ತಿರುವ ದೇಶಗಳು ಅತಿ ಕಡಿಮೆ ಮಟ್ಟದ ಸ್ಥಿತಿಯಿಂದ ಅಭಿವೃದ್ಧಿ ಸಾಧನೆಯನ್ನು ಪ್ರಾರಂಭಿಸಿರುವುದರಿಂದ ಅವು ಸಾಧಿಸುತ್ತಿರುವ ಅಭಿವೃದ್ಧಿಯ ದರ ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಅಭಿವೃದ್ಧಿ ದರಕ್ಕಿಂತ ಹೆಚ್ಚಾಗಿ ಕಾಣಿಸುತ್ತಿದೆ.

ಸ್ತ್ರೀಯರು ಅನುಭವಿಸುತ್ತಿರುವ ಅಸಮಾನತೆಯನ್ನು ಜಿ. ಡಿ. ಐ. ಚಿತ್ರಿಸಲಾರದ ಕೆಲವು ಅಂಶಗಳು [illegible]

## ಅಶ್ವಮೇಧ-ನರಮೇಧ

ಅಳುತ್ತಿದ್ದಾನೆ ರಾಮ
ಅಯೋಧ್ಯೆಯಲ್ಲಿ
ಅಶ್ವಮೇಧ ಮಾಡಿದ ತಪ್ಪಿಗೆ;
ನಗುತ್ತಿದ್ದಾನೆ ಭಕ್ತ
ಗುಜರಾತಿನಲ್ಲಿ
ನರಮೇಧ ಮಾಡಿದ ತೃಪ್ತಿಗೆ.

ಡಾ|| ರಂಗಾರೆಡ್ಡಿ ಕೋಡಿರಾಂಪುರ
ಸಿ. ೧೯೪೬, ಇರುವಂತೆ, ವಿ. ವಿ. ಪುರ ಬಡಾವಣೆ
ಗೌರಿಬಿದನೂರು-೫೬೧ ೨೦೮

ಇವೆ. ಈ ಸೂಚಿಯು ಸ್ತ್ರೀಯ ಆರ್ಥಿಕಾರ್ಜನೆಯ ಸ್ಥಿತಿಯನ್ನು ಚಿತ್ರಿಸುತ್ತಿದೆಯಾದರೂ ಕುಟುಂಬದ ಸದಸ್ಯರ ಮಧ್ಯೆ ಅದರ ವಿನಿಯೋಗ ಹೇಗೆ ನಡೆಯುತ್ತದೆ ಎಂಬ ವಿಷಯವನ್ನಾಗಲಿ, ಅದರಿಂದ ದೊರೆಯುವ ಪೋಷಣೆಯಲ್ಲಿ ಅದನ್ನು ಸಂಪಾದಿಸಿದ ಸ್ತ್ರೀಗೆ ಎಷ್ಟು ಭಾಗ ವಿನಿಯೋಗವಾಗುತ್ತದೆ ಎಂಬ ವಿಷಯವನ್ನಾಗಲಿ ಅದು ಚಿತ್ರಿಸಲಾರದೆ ಹೋಗುತ್ತದೆ. ಕೆಲವು ಕುಟುಂಬಗಳಲ್ಲಿ ತಾನೇ ಗಳಿಸಿದ ಆದಾಯವನ್ನು ಖರ್ಚುಮಾಡಲು ಸಹ ಆ ಸ್ತ್ರೀಗೆ ಅಧಿಕಾರವಿರುವುದಿಲ್ಲ. ಇನ್ನು ಕೆಲವು ಕುಟುಂಬಗಳಲ್ಲಿ ಗಂಡನು ಒಳ್ಳೆಯವನಾಗಿ, ತನ್ನ ಸಂಪಾದನೆಯ ವಿನಿಯೋಗವನ್ನು ಹೆಂಡತಿಗೆ ಒಪ್ಪಿಸಿರಬಹುದು, ಮತ್ತೆ ಕೆಲವು ಕಡೆ ಸ್ತ್ರೀಯು ಗಮನಾರ್ಹ ಆದಾಯವನ್ನು ಕುಟುಂಬಕ್ಕೆ ನೀಡುತ್ತಿದ್ದರೂ, ಆ ಕುಟುಂಬದಲ್ಲಿ ಆಕೆಗೆ ಕನಿಷ್ಠ ಗೌರವ ಕೂಡ ಲಭಿಸದೆ ಪರಾಧೀನಳಾಗಿ ಬದುಕಬೇಕಾದ ಸ್ಥಿತಿ ಬಂದಿರಬಹುದು. ಇಂತಹ ಅಸಮಾನತೆಗಳನ್ನು ಸ್ತ್ರೀಯರು ಅನುಭವಿಸುತ್ತಿರುವುದನ್ನು ಈ ಸೂಚಿಯು ಚಿತ್ರಿಸಲಾರದೆ ಹೋಗುತ್ತಿರುವ ವಿಷಯವನ್ನು ತಜ್ಞರು ಮನಗಂಡಿದ್ದಾರೆ.

**ಸಶಕ್ತೀಕರಣ ಮಾಪನ**

ಉನ್ನತ ಸ್ಥಾನಗಳು ಸ್ತ್ರೀಯರಿಗೆ ಗಗನ ಕುಸುಮಗಳಾಗಲು ಕಾರಣಗಳೇನು? ನಾರ್ಡಿಕ್ ದೇಶಗಳಂತೆ ಇತರ ಅಭಿವೃದ್ಧಿ ಹೊಂದಿದ ದೇಶಗಳು ೯೦ ಕ್ಕಿಂತ ಹೆಚ್ಚು ಜಿ. ಡಿ. ಐ. ಸ್ಕೋರುಗಳನ್ನು ಗಳಿಸಲಾರದೆ ಹೋಗಲು ಆ ದೇಶದೊಳಗಿನ ಆರ್ಥಿಕ, ರಾಜಕೀಯ ಮತ್ತು ಆಡಳಿತಾತ್ಮಕ ಕ್ಷೇತ್ರಗಳಲ್ಲಿ ಸ್ತ್ರೀಯರಿಗೆ ಪುರುಷರೊಡನೆ ಸಮಾನಸ್ಥಾನ ದೊರಕದೇ ಹೋದುದೇ ಕಾರಣವಾಗಿದೆ. ಸ್ತ್ರೀಯರಿಗೆ ಲಭಿಸುತ್ತಿರುವ ಪ್ರಾತಿನಿಧ್ಯದ ಪರಿಮಾಣವನ್ನು ಸೂಚಿಸಲು ಯು.ಎನ್.ಡಿ.ಪಿ. ತಜ್ಞರು 'ಲಿಂಗ ಸಶಕ್ತೀಕರಣ ಮಾಪನ'ವನ್ನು ಬಳಸುತ್ತಾರೆ. ಸಂಕ್ಷಿಪ್ತವಾಗಿ ಅದನ್ನು ಜಿ. ಇ. ಎಮ್. ಎಂದು ಕರೆಯಲಾಗಿದೆ. ಈ ಸೂಚಿಯನ್ನು ರೂಪಿಸಲು ಅವರು ಮೂರು ಅಂಶಗಳನ್ನು ಆಧಾರವಾಗಿ ತೆಗೆದುಕೊಂಡಿದ್ದಾರೆ: ೧. ಸ್ತ್ರೀಯರ ಆದಾಯ ಗಳಿಕೆಯ ಸಾಮರ್ಥ್ಯ. ೨. ಹಣಕಾಸು ವ್ಯವಹಾರದಲ್ಲಿ ಸ್ತ್ರೀಯರ ಪ್ರಾತಿನಿಧ್ಯ ಮತ್ತು ವೃತ್ತಿಪರ ಹಾಗೂ ಆಡಳಿತಾತ್ಮಕ ಉದ್ಯೋಗಗಳಲ್ಲಿ ಅವರ ಪಾಲು. ೩. ರಾಜಕೀಯ ರಂಗದಲ್ಲಿ ಸ್ತ್ರೀಯರ ಪ್ರಾತಿನಿಧ್ಯದ ಪರಿಮಾಣ.

ಈ ಜಿ. ಇ. ಎಮ್. ಸೂಚಿಯನ್ನು ಯು. ಎನ್. ಡಿ. ಪಿ. ತಜ್ಞರು ೧೧೬ ದೇಶಗಳಿಗೆ ಸಿದ್ಧಪಡಿಸಿ ೧೯೯೫ರ ವರದಿಯಲ್ಲಿ ಪ್ರಕಟಿಸಿದ್ದಾರೆ. ಸ್ವೀಡನ್ ೭೬ ಅಂಕ ಗಳಿಸಿ ಪ್ರಥಮ ಸ್ಥಾನದಲ್ಲಿಯೂ, ನಾರ್ವೆ ೭೫ ಅಂಕ ಗಳಿಸಿ ಎರಡನೆ ಸ್ಥಾನದಲ್ಲಿಯೂ, ಫಿನ್ಲ್ಯಾಂಡ್ ೭೨ ಅಂಕ ಗಳಿಸಿ ಮೂರನೆ ಸ್ಥಾನದಲ್ಲಿಯೂ ಮತ್ತು ಡೆನ್ಮಾರ್ಕ್ ೬೮ ಅಂಕ ಗಳಿಸಿ ನಾಲ್ಕನೆಯ ಸ್ಥಾನದಲ್ಲಿಯೂ ನಿಂತಿವೆ. ಸ್ತ್ರೀ ಪುರುಷ ಸಮಾನತೆಯ ಸಾಧನೆಯಲ್ಲಿ ಆದರ್ಶ ರೀತಿಯ ಕೃಷಿಯನ್ನು ಮಾಡುತ್ತಿರುವ ನಾರ್ಡಿಕ್ ದೇಶಗಳು ಈ ವಿಷಯದಲ್ಲೂ ತಮ್ಮ ಘನತೆಯನ್ನು ಕಾಪಾಡಿಕೊಂಡಿವೆ. ರಾಜಕೀಯ ರಂಗದಲ್ಲಷ್ಟೇ ಅಲ್ಲದೆ, ಉನ್ನತ ಹುದ್ದೆಗಳು, ಆಡಳಿತ ನಿರ್ವಹಣೆಯ ಸ್ಥಾನಗಳು, ತಾಂತ್ರಿಕ ಪದವಿಗಳು ಮಹಿಳೆಯರಿಗೆ ಕನಿಷ್ಠ ಮೂರನೆ ಒಂದು ಭಾಗ ದೊರೆಯುವ ರೀತಿಯಲ್ಲಿ ನೋಡಿಕೊಳ್ಳಲಾಗಿದೆ. ಆರ್ಥಿಕವಾಗಿ, ಪಾರಿಶ್ರಮಿಕವಾಗಿ ಅಗ್ರಗಾಮಿಯಾಗಿ ಹೆಸರು ಗಳಿಸಿದ ಅಮೆರಿಕ ೬೨ ಅಂಕ ಗಳಿಸಿ ಎಂಟನೆ ಸ್ಥಾನದಲ್ಲಿದೆ !

ಕ್ಯೂಬಾದಂತಹ ಚಿಕ್ಕ ಮತ್ತು ಬಡ ದೇಶ ಸ್ತ್ರೀ ಸಶಕ್ತೀಕರಣ ಮಾಪನದಲ್ಲಿ ೫೨ ಅಂಕ ಗಳಿಸಿ ೧೬ನೇ ಸ್ಥಾನದಲ್ಲಿದೆ. ೪೮ ಅಂಕ ಗಳಿಸಿದ ಯುನೈಟೆಡ್ ಕಿಂಗ್‌ಡಮ್, ೪೪ ಅಂಕ ಗಳಿಸಿದ ಜಪಾನ್, ೪೩ ಅಂಕ ಗಳಿಸಿದ ಫ್ರಾನ್ಸ್ ದೇಶಗಳು ಕ್ಯೂಬಾಕ್ಕಿಂತ ಕೆಳಗಿನ ಸ್ಥಾನಗಳಲ್ಲಿರುವುದು ಗಮನಾರ್ಹವಾಗಿದೆ.

ಭಾರತ ೧೯೭೦ರಲ್ಲಿ ಇದ್ದ ೨೫ ಜಿ. ಡಿ. ಐ. ಸ್ಕೋರನ್ನು ೧೯೯೦ರಲ್ಲಿ ೪೦ಕ್ಕೆ ಹೆಚ್ಚಿಸಿಕೊಂಡಿದೆ. ೧೯೯೪ರಲ್ಲಿ ಸಂಸತ್ತಿನಲ್ಲಿ ಸ್ತ್ರೀಯರ ಪ್ರಾತಿನಿಧ್ಯ ಶೇ. ೭.೩ ರಷ್ಟು ಮಾತ್ರ ಇತ್ತು. ೧೯೯೨ರ ಅಂದಾಜಿನಂತೆ ದೇಶದ ಉನ್ನತ ಆಡಳಿತ ಮತ್ತು ಮೇನೇಜ್‌ಮೆಂಟ್ ಹುದ್ದೆಗಳಲ್ಲಿ ಶೇ ೨.೩ರಷ್ಟು ಮಾತ್ರ ಮಹಿಳೆಯರಿಗೆ ಲಭಿಸಿವೆ. ಉನ್ನತ ವೃತ್ತಿಪರ ಹಾಗೂ ತಾಂತ್ರಿಕ ಹುದ್ದೆಗಳಲ್ಲಿ ಶೇ. ೨೦.೫ರವರೆಗೆ ಸ್ತ್ರೀಯರಿಗೆ ದೊರಕಿವೆ. ಇದರಿಂದ ಭಾರತದ ಜಿ.ಇ.ಎಮ್. ಸ್ಕೋರು ೨೩ ಇದ್ದು ೧೦೧ನೇ ಸ್ಥಾನದಲ್ಲಿದೆ. ನೇಪಾಲ ೭೩ನೇ ಸ್ಥಾನದಲ್ಲೂ, ಶ್ರೀಲಂಕ ೭೯ರ ಸ್ಥಾನದಲ್ಲೂ ಇರುವುದು ಗಮನಾರ್ಹ.

ದೇಶಗಳಿಗೆ ದೊರೆತ ಜಿ. ಇ. ಎಮ್. ರ್‍ಯಾಂಕುಗಳನ್ನು ಆಯಾ ದೇಶದ ತಲಾ ಆದಾಯದೊಡನೆ ಹೋಲಿಸಿದರೆ ಸ್ತ್ರೀ ಸಶಕ್ತೀಕರಣದಲ್ಲಿ ಹಿಂದುಳಿದಿರುವಿಕೆ ಮತ್ತಷ್ಟು ಕಾಣಿಸುತ್ತದೆ. ತಲಾ ಆದಾಯ ಸರಾಸರಿ ೨೦,೫೮೦ ಡಾಲರ್ ಇರುವ, ಎಚ್. ಡಿ. ಐ. ನಲ್ಲಿ ಪ್ರಥಮ ಸ್ಥಾನ ಪಡೆದಿರುವ ಕೆನಡಾದ ಜಿ. ಇ. ಎಮ್. ಸ್ಕೋರು ೬೬ ಇದ್ದು ಐದನೆ ಸ್ಥಾನದಲ್ಲಿದೆ. ಪ್ರಪಂಚದಲ್ಲಿ ಅತ್ಯಂತ ಹೆಚ್ಚು ತಲಾ ಆದಾಯ ೨೩,೭೬೦ ಡಾಲರು ಇರುವ ಅಮೆರಿಕ ಎಚ್. ಡಿ. ಐ. ರ್‍ಯಾಂಕಿಂಗ್‌ನಲ್ಲಿ ದ್ವಿತೀಯ ಸ್ಥಾನ ಗಳಿಸಿ, ಜಿ. ಇ. ಎಮ್. ರ್‍ಯಾಂಕಿಂಗ್‌ನಲ್ಲಿ ಎಂಟನೆ ಸ್ಥಾನದಲ್ಲಿದೆ. ಸಂಪತ್ತಿನ ಉತ್ಪಾದನೆಯಲ್ಲಿ ಈ ದೇಶಗಳು ಅತ್ಯುನ್ನತ ಸ್ಥಾನಗಳನ್ನು ಅಲಂಕರಿಸಿವೆಯಾದರೂ ಸ್ತ್ರೀ ಪುರುಷ ಸಮಾನತೆಯ ಸಾಧನೆಯಲ್ಲಿ ಅವು ಸಾಧಿಸಬೇಕಾದುದು ಇನ್ನೂ ಬಹಳ ಇದೆ.

ಪ್ರಪಂಚದ ಎಲ್ಲ ದೇಶಗಳಲ್ಲಿ - ಶ್ರೀಮಂತ ದೇಶಗಳು, ಬಡದೇಶಗಳು ಎಂಬ ಭೇದಭಾವ ಇಲ್ಲದೆ - ಸ್ತ್ರೀ ಪುರುಷ ಸಮಾನತೆಗಾಗಿ ಮಾಡಬೇಕಾದುದು ಬಹಳ ಇದೆ ಎಂಬುದನ್ನು ಮೇಲಿನ ಹೋಲಿಕೆಗಳು ಸ್ಪಷ್ಟಪಡಿಸುತ್ತವೆ. ಶ್ರೀಮಂತ ದೇಶಗಳು ಆರ್ಥಿಕ ಮತ್ತು ರಾಜಕೀಯ ರಂಗಗಳಲ್ಲಿ ಸ್ತ್ರೀಯರಿಗೂ ಸಹ ಅವರ ಆಸಕ್ತಿಗನುಗುಣವಾಗಿ ಭಾಗವಹಿಸಲು ಇನ್ನೂ ಅವಕಾಶ ಕಲ್ಪಿಸಿಲ್ಲ. ರಾಜಕೀಯ ಪ್ರಾತಿನಿಧ್ಯ, ಉನ್ನತ ಹುದ್ದೆಗಳಲ್ಲಿ ಸಮಾನಾವಕಾಶ ಇನ್ನೂ ದೊರೆತಿಲ್ಲ. ಈ ಕ್ಷೇತ್ರಗಳಲ್ಲಿ ಸ್ತ್ರೀಯರು ಇನ್ನೂ ಅಲ್ಪ ಸಂಖ್ಯಾತರಾಗಿಯೇ ಉಳಿದಿದ್ದಾರೆ. ಯು. ಎನ್. ಡಿ. ಪಿ. ತಜ್ಞರು ಬೆಳಕಿಗೆ ತಂದ ಮಾನದಂಡಗಳಿಂದ ಪ್ರತಿಯೊಂದು ದೇಶದಲ್ಲಿ ಸ್ತ್ರೀಯರ ಸ್ಥಾನಮಾನಗಳೇನು ಎಂಬುದನ್ನು ಯಥಾವತ್ತಾಗಿ ತಿಳಿಯಬಹುದು.

ಬಿ. ಎ. ವೀರಭದ್ರಪ್ಪ
ಬಿ - ೧೮, ವಿದ್ಯಾನಗರ, ದಾವಣಗೆರೆ-೫೭೭ ೦೦೫

**ಸ್ತ್ರೀ ಪುರುಷ ಅಭಿವೃದ್ಧಿಯಲ್ಲಿ ಅಸಮಾನತೆಯ ಸೂಚಿಗಳು (೧೯೯೪)**

| ದೇಶ | ಮಾನವಾಭಿವೃದ್ಧಿ ಸೂಚಿ (ಎಚ್. ಡಿ. ಐ.) | ಲಿಂಗ-ಸಂಬಂಧಿ ಅಭಿವೃದ್ಧಿ ಸೂಚಿ (ಜಿ. ಡಿ. ಐ.) | ಸ್ತ್ರೀ ಸಶಕ್ತೀಕರಣ ಮಾಪನ (ಜಿ. ಇ. ಎಮ್.) |
|---|---|---|---|
| ಕೆನಡಾ | ೯೬.೦ | ೯೩.೯ | ೭೦.೦ |
| ಫ್ರಾನ್ಸ್ | ೯೪.೬ | ೯೨.೬ | ೪೫.೨ |
| ನಾರ್ವೆ | ೯೪.೩ | ೯೩.೪ | ೭೯.೫ |
| ಅಮೆರಿಕಾ | ೯೪.೨ | ೯೨.೮ | ೬೭.೧ |
| ನೆದರ್ಲ್ಯಾಂಡ್ಸ್ | ೯೪.೦ | ೯೦.೧ | ೬೬.೦ |
| ಜಪಾನ್ | ೯೪.೦ | ೯೦.೧ | ೪೬.೫ |
| ಫಿನ್ಲ್ಯಾಂಡ್ | ೯೪.೦ | ೯೨.೫ | ೭೧.೯ |
| ಸ್ವೀಡನ್ | ೯೩.೬ | ೯೩.೨ | ೭೮.೪ |
| ಸ್ಪೈಯಿನ್ | ೯೩.೪ | ೮೭.೪ | ೫೪.೨ |
| ಯುನೈಟೆಡ್ ಕಿಂಗ್‌ಡಂ | ೯೩.೧ | ೮೯.೬ | ೫೪.೩ |
| ಡೆನ್ಮಾರ್ಕ್ | ೯೨.೭ | ೯೧.೬ | ೭೨.೮ |
| ಸಿಂಗಪೂರ್ | ೯೦.೦ | ೮೫.೩ | ೪೨.೩ |
| ಥಾಯ್‌ಲ್ಯಾಂಡ್ | ೮೩.೩ | ೮೧.೨ | ೪೧.೭ |
| ಮಲೇಶಿಯಾ | ೮೩.೨ | ೭೮.೨ | ೪೨.೨ |
| ಶ್ರೀಲಂಕಾ | ೭೮.೦ | ೬೯.೪ | ೩೦.೭ |
| ಕ್ಯೂಬಾ | ೭೨.೩ | ೬೯.೯ | ೫೨.೩ |
| ಸೌದಿ ಅರೇಬಿಯಾ | ೭೭.೪ | ೫೮.೧ | - |
| ಫಿಲಿಪೀನ್ಸ್ | ೬೭.೨ | ೬೫.೦ | ೪೫.೯ |
| ಚೈನಾ | ೬೨.೨ | ೬೧.೭ | ೪೮.೧ |
| ಭಾರತ | ೪೪.೬ | ೪೧.೯ | ೨೨.೮ |
| ಪಾಕಿಸ್ತಾನ | ೪೪.೫ | ೩೯.೨ | ೧೮.೯ |
| ಮಾಲಿ | ೨೨.೯ | ೨೧.೮ | ೨೩.೯ |

*-ಹ್ಯೂಮನ್ ಡೆವಲಪ್‌ಮೆಂಟ್ ರಿಪೋರ್ಟ್ - ೧೯೯೭ ರಿಂದ*

# ಕಟ್ಟುವುದು ಮತ್ತು ಕೆಡಹುವುದು

**ವ**ಚನಕಾರರಿಗೆ ದೇವಾಲಯವನ್ನು ಕಟ್ಟುವುದರ ಬಗ್ಗೆ ಯಾಗಲಿ ಅಥವಾ ಕೆಡಹುವುದರ ಬಗ್ಗೆಯಾಗಲಿ ಆಸಕ್ತಿಯಿರಲಿಲ್ಲ. ದೇವಾಲಯ ಸಂಸ್ಕೃತಿಯನ್ನೇ ವಚನಕಾರರು ತಿರಸ್ಕರಿಸಿದ್ದರು. ಪ್ರಾಚೀನ ಭಾರತದಲ್ಲಿ ಧಾರ್ಮಿಕ ಸಮರ, ಮತೀಯ ಹಿಂಸೆಗಳು ಕೂಡ ಸಾಕಷ್ಟು ವ್ಯಾಪಕವಾಗಿದ್ದವು ಎಂಬ ಹಿನ್ನೆಲೆಯಲ್ಲಿ ನಾವು ವಚನಕಾರರ ಧೋರಣೆಯನ್ನು ಅರ್ಥಮಾಡಿಕೊಳ್ಳಬೇಕು. ದೈವದ-ದೇವಾಲಯದ ಹೆಸರಿನಲ್ಲಿ ಹಿಂಸೆ ಭಾರತೀಯ ಚರಿತ್ರೆಯ ಮುಖ್ಯ ಲಕ್ಷಣಗಳಲ್ಲಿ ಒಂದು. ಈ ಬಗೆಯ ಹಿಂಸೆ, ಹತ್ಯೆ, ಶೋಷಣೆಗಳಿಗೆ ಕಾರಣವಾದ ದೇವಾಲಯ ಸಂಸ್ಕೃತಿಯನ್ನು ವಚನ ಸಂಸ್ಕೃತಿಯು ತಿರಸ್ಕರಿಸಿತು. ಈ ದಿಶೆಯಲ್ಲಿ ಅಲ್ಲಮಪ್ರಭುವಿನ ಒಂದು ವಚನವು ತುಂಬ ಮನನೀಯವಾಗಿದೆ :

*ಸೃಷ್ಟಿಯ ಮೇಲಣ ಕಣೆಯ ತಂದು*
*ಅಷ್ಟ ತನುವಿನ ಕೈಯಲ್ಲಿ ಕೊಟ್ಟು*
*ಕಟ್ಟಿ ಪೂಜೆಯ ಮಾಡಬೇಕೆಂಬರಯ್ಯಾ*
*ಅದೆಂತೆಂದಡೆ :*
*ಭೂಮಿಗೆ ಹುಟ್ಟಿ ಶಿಲೆಯಾದ,*
*ಕಲ್ಲುಕುಟಿಗನ ಕೈಯಲ್ಲಿ ರೂಪಾದ,*
*ಗುರುವಿನ ಕೈಯಲ್ಲಿ ಮೂರ್ತಿಯಾದ,*
*ಇಂತೀ ಮೂವರಿಗೆ ಹುಟ್ಟಿದ ಸೂಳೆಯ ಮಗನ*
*ನಾನೇನೆಂದು ಪೂಜೆಯ ಮಾಡಲಿ ?*
*ಅದು ಬಿದ್ದಿತೆಂದು ಸಮಾಧಿಯ ಹೊಕ್ಕಿಹನೆಂಬವನು*
*ಅಸ್ತ್ರ ಸಮಾಧಿ, ಜಲಾಂತರ ವನಾಂತರ ದಿಗಂತರದಲ್ಲಿ ಸತ್ತಡೆ*
*ಕುಂಬಿನಿ ಪಾವರ ನಾಯಕ ನರಕ ಗುಹೇಶ್ವರಾ.*

ವಚನಕಾರರು ದೈವದ ಜೊತೆ ನೇರವಾಗಿ ಅನುಸಂಧಾನ ನಡೆಸಲು ಬಯಸಿದವರು. ಅವರಿಗೆ ಮಧ್ಯವರ್ತಿಗಳ ಅಗತ್ಯವಿರಲಿಲ್ಲ. ಅಲ್ಲಮಪ್ರಭುವು ದೇವಾಲಯ ಸಂಸ್ಕೃತಿಯನ್ನು ಬಹಳ ಹತ್ತಿರದಿಂದ ಕಂಡವನು. ಒಂದು ಹಂತದವರೆಗೆ ಅವನ ಕಾಯಕ ದೇವಾಲಯದಲ್ಲೇ ಇತ್ತು.

ದೇವಾಲಯಕ್ಕೆ ಸಂಬಂಧಿಸಿದ ಆತ್ಮಹತ್ಯೆಯ ಆಚರಣೆಯೊಂದರ ಬಗ್ಗೆ ಇಲ್ಲಿ ವಚನದ ಕೊನೆಯ ಸಾಲುಗಳು ಬೆಳಕು ಚೆಲ್ಲುತ್ತವೆ. ದೇವಾಲಯವು ಬಿದ್ದಾಗ ಅಥವಾ ಅದನ್ನು ನಾಶ ಮಾಡಿದಾಗ, ಅದರ ಪೋಷಕರು, ಅನುಯಾಯಿಗಳು ಅದರ ರಕ್ಷಣೆಯಲ್ಲಿ ಹತ್ಯಾಕಾಂಡ ನಡೆಸುತ್ತಿದ್ದರು. ಈ ಸಂದರ್ಭಗಳಲ್ಲಿ ಜನರ ಪ್ರಾಣಹಾನಿಯಾಗುತ್ತಿತ್ತು. ದೇವಾಲಯ ಬಿದ್ದ ಸಂದರ್ಭದಲ್ಲಿ ಜನರು ಆತ್ಮಾಹುತಿ ಮಾಡಿಕೊಳ್ಳುತ್ತಿದ್ದರು. ಇಂತಹ ಅನಿಷ್ಟಕಾರಿ ಆಚರಣೆ ಬಗ್ಗೆ ಪ್ರಭು ತನ್ನ ವಿರೋಧವನ್ನು ವ್ಯಕ್ತಪಡಿಸುತ್ತಿದ್ದಾನೆ.

ಪ್ರಸ್ತುತ ಭಾರತದಲ್ಲಿ ದೇವಾಲಯವನ್ನು ಕಟ್ಟುವ-ಕೆಡಹುವ ಹೆಸರಿನಲ್ಲಿ ಜನರ ಭಾವನೆಯನ್ನು ಕೆರಳಿಸಲಾಗುತ್ತಿದೆ. ಸಾವಿರಾರು ಮುಗ್ಧ ಜನರ ಪ್ರಾಣಹಾನಿಯಾಗುತ್ತಿದೆ. ಹಿಂದೆ ಯಾವುದೋ ಒಂದು ಸಮುದಾಯ ಇನ್ನೊಂದು ಸಮುದಾಯಕ್ಕೆ ಸೇರಿದ ದೇವಾಲಯವನ್ನು ಕೆಡವಿ ತನಗೆ ಸಂಬಂಧಪಟ್ಟ ದೇವಾಲಯವನ್ನು ಕಟ್ಟಿಕೊಂಡಿದೆ ಎನ್ನಲಾಗಿದೆ. ಈಗ ಅದನ್ನು ಕೆಡವಿ ಅಲ್ಲಿ ಪೂರ್ವದಲ್ಲಿ ಇದ್ದ ದೇವಾಲಯವನ್ನು ಕಟ್ಟುವ ಪ್ರಯತ್ನ ನಡೆದಿದೆ. ಇಂತಹ ಭ್ರಮೆಗಳನ್ನು ಕುರಿತೇ ಅಲ್ಲಮಪ್ರಭು ಮೇಲಿನ ವಚನ ಬರೆದಿದ್ದಾನೆ. ದೇವರಿಗೆ ಆಲಯ ಕಟ್ಟಲು ಅಥವಾ ಅದನ್ನು ಕೆಡಹಲು ಇವರು ಯಾರು ? ದೇವರ ಆಲಯವು ನಾಶವಾಗುವುದು ಸಾಧ್ಯವೇ ? ಅದಕ್ಕಾಗಿ ರಕ್ತಪಾತವೆ ?

ದೇವರಿಗೆ ಆಲಯ ಕಟ್ಟುತ್ತೇವೆ ಎಂಬುದೇ ಒಂದು ಬಾಲಿಶ ಸಂಗತಿ. ಈ ಕಟ್ಟುವ ಕೆಡಹುವ ಕೆಲಸದಲ್ಲಿ ನಿರತರಾಗಿರುವವರಿಗೆ ದೇವರೂ ಗೊತ್ತಿಲ್ಲ, ದೇವಾಲಯವೂ ಗೊತ್ತಿಲ್ಲ. ನಿಜಕ್ಕೂ ನಮ್ಮ ಸಮಾಜದ ಸಂದರ್ಭದಲ್ಲಿ ಕಟ್ಟಬೇಕಾದ ಸಂಗತಿಗಳು ಬೇಕಾದಷ್ಟಿವೆ. ಕೆಡವಬೇಕಾದ ಅನಿಷ್ಟಗಳು ಸಾಕಷ್ಟಿವೆ. ಹಸಿವು, ಬಡತನ, ಅನಕ್ಷರತೆ, ಆಹಾರದ ಅಭದ್ರತೆ ಮುಂತಾದ ಸಮಸ್ಯೆಗಳಿಂದ ಕೋಟ್ಯಾವಧಿ ಜನರು ಪ್ರತಿನಿತ್ಯ ಏಗುತ್ತಿದ್ದಾರೆ. ಕೆಡಹುವ-ಕಟ್ಟುವ ಕೆಲಸದಲ್ಲಿ ಜನರ ಭಾವನೆಯನ್ನು ದುರುಪಯೋಗಪಡಿಸಿಕೊಳ್ಳುತ್ತಿರುವ ಜನರು ಅಕ್ಷರವನ್ನು ಕುರಿತು, ಆರೋಗ್ಯವನ್ನು ಕುರಿತು, ಆಶ್ರಯವನ್ನು ಕುರಿತು, ಆಹಾರವನ್ನು ಕುರಿತು ಅಭಿಯಾನ ಯಾಕೆ ನಡೆಸಬಾರದು ? ದೇಶದ ಶೇ. ೩ರಿಂದ ೧೦ರಷ್ಟಿರುವ ದ್ವಿಜ ಮಹಾಶಯರುಗಳ ತಿಂಡಿ - ತೀಟೆಗಳಿಗೆ ಶೇ. ೯೦ರಷ್ಟಿರುವ ಶೂದ್ರರು-ದಲಿತರು ಬಲಿಯಾಗಬೇಕೆ ?

ದೇವಾಲಯಗಳ ಅರ್ಥಹೀನತೆಯನ್ನು ಮನಗಂಡು ಅಂಬಿಗರ ಚೌಡಯ್ಯನು ಕೆಳಗಿನ ವಚನ ರಚಿಸಿದ್ದಾನೆ.

*ದೇಹಾರವ ಮಾಡುವ ಅಣ್ಣಗಳಿರಾ ಅಣ್ಣಗಳಿರಾ*
*ಒಂದು ತುತ್ತು ಅನ್ನವನಿಕ್ಕಿರಯ್ಯಾ*
*ದೇಹಾರಕ್ಕೆ ಆಹಾರವೇ ನಿಚ್ಚಣಿಕೆ*
*ದೇಹಾರವ ಮಾರುತ್ತ ಆಹಾರವನಿಕ್ಕದಿರ್ದಡೆ*
*ಆ ಹರನಿಲ್ಲೆಂದನಂಬಿಗರ ಚೌಡಯ್ಯ.*

ಚೌಡಯ್ಯನಿಗೆ ಆಹಾರ ಪ್ರಾಥಮಿಕ, ದೇಹಾರ ಆನುಷಂಗಿಕ. ಆಹಾರವಿಲ್ಲದೆ ದೇಹಾರ ಸಾಧ್ಯವಿಲ್ಲ. ಕಟ್ಟುವ-ಕೆಡಹುವ ಕೆಲಸದಲ್ಲಿ ನಿರತರಾಗಿರುವ, ಮುಗ್ಧ ಜನರ, ಮಕ್ಕಳ, ಮಹಿಳೆಯರ ಹತ್ಯೆಯಲ್ಲಿ ನಿರತರಾಗಿರುವ ಜನ, ಚೌಡಯ್ಯನ ಮಾತನ್ನು ಕೇಳಬೇಕು; ಅಲ್ಲಮಪ್ರಭುವಿನ ವಿಚಾರವನ್ನು ಅರ್ಥ ಮಾಡಿಕೊಳ್ಳಬೇಕು. ಇಂದು ಕಟ್ಟಬೇಕಾದ್ದು ಕೆಡವಬೇಕಾದ್ದು ದೇವಾಲಯವಲ್ಲ. ಕಟ್ಟಬೇಕು ಅಕ್ಷರದ ಗುಡಿಯನ್ನು, ಕಟ್ಟಬೇಕು ಆರೋಗ್ಯ ಭಾಗ್ಯವನ್ನು, ಕಟ್ಟಬೇಕು ಆಹಾರ ಭದ್ರತೆಯನ್ನು ! ಕೆಡವಬೇಕು ಅನಕ್ಷರತೆಯನ್ನು, ಕೆಡವಬೇಕು ಹಸಿವಿನ ಬ್ರಹ್ಮ ರಾಕ್ಷಸನನ್ನು. ಕಟ್ಟುವ - ಕೆಡಹುವ ದೇವ ಭಾಷೆಯನ್ನು ಬಿಟ್ಟು ನಾವು ಗೆಲ್ಲುವ ಭಕ್ತರ ಭಾಷೆಯನ್ನಾಡುವ ಅಗತ್ಯವಿದೆ.

ಟಿ. ಆರ್. ಚಂದ್ರಶೇಖರ
ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ - ೫೮೩ ೨೭೬




೪-೫-೨೦೦೨ ಶನಿವಾರ ಸಂಜೆ ೫ ಗಂಟೆಗೆ ಶ್ರೀ ಕೃಷ್ಣಮೂರ್ತಿ ಕಲುಮಂಗಿ, ಮಲಾಡ್ (ಪ), ಮುಂಬಯಿಯಲ್ಲಿ ನಡೆದ 'ಮನೆ ಮನೆಯಲ್ಲಿ ಸಾಹಿತ್ಯ ಸ್ಪಂದನ' ಕಾರ್ಯಕ್ರಮ. (ಚಿತ್ರದಲ್ಲಿ ಎಡದಿಂದ ಬಲಕ್ಕೆ) ಅರವಿಂದ ಮುದ್‌ಗಲ್, 'ಪ್ರಿಯತಮ', ಡಾ. ಜಿ. ಡಿ. ಜೋಶಿ, ಕೃಷ್ಣಮೂರ್ತಿ ಕಲುಮಂಗಿ, ಸೋಮನಾಥ ಎಸ್. ಎಸ್. ಕರ್ಕೇರ ಮತ್ತು ಚಂದ್ರಶೇಖರ ರಾವ್. (ಫೋಟೋ : ಕಿರಣ ಕಲುಮಂಗಿ)

# ಕಾಬೂಲಿವಾಲಾನ ಬಂಗಾಳಿ ಹೆಂಡತಿ

ಅಫಘಾನಿಸ್ತಾನ – ಕೆಲವೇ ತಿಂಗಳುಗಳ ಹಿಂದೆ ಇಡೀ ಜಗತ್ತನ್ನೇ ತನ್ನೆಡೆಗೆ ಆಕರ್ಷಿಸಿಕೊಂಡಿದ್ದ ದೇಶ. ತಣ್ಣಗೆ ಬದುಕುತ್ತಿದ್ದ ಅಫಘಾನಿಯರ ಬದುಕಿನಲ್ಲಿ ತಾಲಿಬಾನರು ಪ್ರವೇಶಿಸಿದ್ದು ಆ ದೇಶದ ಇತಿಹಾಸದಲ್ಲಿಯೇ ಒಂದು ಕಳಂಕಮಯ ಅಧ್ಯಾಯ. ೧೯೯೫ರ ಸುಮಾರಿನಲ್ಲಿ ಅಫಘಾನಿಸ್ತಾನದಲ್ಲಿ ಕಾಲಿರಿಸಿದ ತಾಲಿಬಾನರು, ಆ ದೇಶವನ್ನು ಇಸ್ಲಾಮಿ ರಾಷ್ಟ್ರವನ್ನಾಗಿಸುವ ನೆಪದಲ್ಲಿ ಅದನ್ನು ಸಾವಿರಾರು ವರ್ಷಗಳಷ್ಟು ಹಿಂದಕ್ಕೆ ಕೊಂಡೊಯ್ದಿದ್ದರು. ಅವರ ಆಡಳಿತದಲ್ಲಿ ಇಡೀ ದೇಶದಲ್ಲಿ ಜನಸಾಮಾನ್ಯರ ಬದುಕು ಎಷ್ಟೊಂದು ಹೀನಾಯಮಾನವಾಗಿತ್ತು, ಆಡಳಿತ ಎಷ್ಟೊಂದು ಬರ್ಬರವಾಗಿತ್ತು ಎನ್ನುವುದನ್ನು ಪತ್ರಿಕೆಗಳಲ್ಲಿ ನಾವು ಅಷ್ಟೋ ಇಷ್ಟೋ ಓದಿದ್ದೇವೆ.

ಹೊಟ್ಟೆಪಾಡಿಗಾಗಿ ಅನೇಕ ಅಫಘಾನಿಗಳು (ಕಾಬೂಲಿವಾಲಾಗಳು) ಜಗತ್ತಿನ ಬೇರೆ ಬೇರೆ ಕಡೆಗಳಿಗೆ ಹೋಗಿರುವಂತೆಯೇ ಭಾರತಕ್ಕೂ ಬಂದಿದ್ದಾರೆ. ಆಜಾನು ಬಾಹು ಆಳು, ಕಟ್ಟುಮಸ್ತಾದ ಮೈಕಟ್ಟು, ಆಕರ್ಷಕ ರೂಪ, ವಿನಯದ ನಡೆವಳಿಕೆಗಳಿಂದ ಅವರು ಜನರ ಮನಸ್ಸನ್ನು ಸಹಜವಾಗಿಯೇ ಗೆಲ್ಲುತ್ತಾರೆ. ಇಂತಹ ಕಾಬೂಲಿವಾಲಾಗಳಿಗೆ ಮನಸೋತ ಎಷ್ಟೋ ಹೆಣ್ಣುಮಕ್ಕಳು ಅವರನ್ನು ಮದುವೆಯಾಗಿ, ಅವರ ನಾಡಿಗೆ ಹೋಗಿರುವುದೂ ಉಂಟು. ಹೀಗೆ ಹೋಗುವ ಹೆಣ್ಣುಮಕ್ಕಳಿಗೆ ''ಅಫಘಾನಿಸ್ತಾನದಲ್ಲಿ ಪ್ರವೇಶಿಸಲು ಬಾಗಿಲುಗಳಿವೆ; ಆದರೆ, ಅಲ್ಲಿಂದ ಹೊರ ಬರಲು ಬಾಗಿಲುಗಳಿಲ್ಲ.'' ಒಮ್ಮೆ ಹೋದರೆ ಮುಗಿಯಿತು, ಆ ದೇಶದ ಕೋಟ್ಯಂತರ ಹೆಣ್ಣು ಮಕ್ಕಳಂತೆ, ಪ್ರಾಣಿಗಳ ರೀತಿಯಲ್ಲಿ ಜೀವನ ಕಳೆಯಬೇಕಾಗುತ್ತದೆ.

ಕಾಬೂಲಿವಾಲಾನನ್ನು ಪ್ರೀತಿಸಿ ತನ್ನವರಾರ ಮಾತನ್ನೂ ಕೇಳದೆ, ಅವರೆಲ್ಲರನ್ನೂ ಕಡೆಗಣಿಸಿ, ಅವನನ್ನೇ ಮದುವೆಯಾಗಿ, ಅಫಘಾನಿಸ್ತಾನಕ್ಕೆ ಹೋದ ಹೆಣ್ಣೊಬ್ಬಳು ಕೈ ಹಿಡಿದ ಗಂಡನಿಂದ ಮೋಸಕ್ಕೆ ಒಳಗಾಗಿ, ಅಲ್ಲಿನ ನರಕ ಯಾತನೆಯನ್ನು ಸಹಿಸದೆ, ಹೆಜ್ಜೆ ಹೆಜ್ಜೆಗೂ ಕಟ್ಟೆಚ್ಚರದಲ್ಲಿ ಕಾವಲು ಕಾಯುತ್ತಿದ್ದ ತಾಲಿಬಾನರನ್ನೂ, ತನ್ನ ಸಂಬಂಧಿಕರನ್ನೂ ಧಿಕ್ಕರಿಸಿ, ತಾಯ್ನಾಡಿಗೆ ವಾಪಾಸು ಬರಲು ನಡೆಸುವ ಅದಮ್ಯ ಹೋರಾಟದ ನೈಜ ಚಿತ್ರಣವೇ – 'ಕಾಬೂಲಿವಾಲಾನ ಬಂಗಾಳಿ ಹೆಂಡತಿ.' ಇದು ಬಂಗಾಳಿ ಭಾಷೆಯಲ್ಲಿದೆ.

ಈ ಪುಸ್ತಕದ ಲೇಖಕಿ ಸುಸ್ಮಿತಾ ಬಂದ್ಯೋಪಾಧ್ಯಾಯ. ಕಾಬೂಲಿವಾಲಾನ ಹೆಂಡತಿಯಾಗಲು ಸೂಕ್ತ ಎನ್ನುವಂತೆಯೇ ಇದ್ದಾರೆ. ಆರಡಿಗೆ ಕಡಿಮೆ ಇರದ ಎತ್ತರ, ಎತ್ತರಕ್ಕೆ ತಕ್ಕಂತಹ ಮೈಕಟ್ಟು, ಎಂತಹ ತೊಂದರೆಯನ್ನಾದರೂ ಎದುರಿಸಬಲ್ಲೆ ಎನ್ನುವಂತಹ ಮುಖಭಾವದ ಸುಸ್ಮಿತಾ ಮತ್ತು ಕಾಬೂಲಿವಾಲಾ ಜಾಂಬಾಜ್‌ರ ಪರಿಚಯವಾದದ್ದು ಸಾಮಾನ್ಯ ರೀತಿಯಲ್ಲಿ. ಆದರೆ ಪರಿಚಯ ಪ್ರೀತಿಗೆ ತಿರುಗಲು ಬಹಳ ದಿನಗಳು ಬೇಕಾಗಲಿಲ್ಲ. ಮದುವೆಗೆ ಮೊದಲು ಪರಸ್ಪರರನ್ನು ಅರ್ಥ ಮಾಡಿಕೊಳ್ಳಲು ಹೆಚ್ಚಿನ ಅವಕಾಶಗಳೂ ದೊರೆತಿರಲಿಲ್ಲ.




**ಈ ಕೃತಿಯನ್ನು ಆಧರಿಸಿ ಇಂಗ್ಲಿಷ್ ಮತ್ತು ಹಿಂದಿಯಲ್ಲಿ ಸಿನಿಮಾ ತಯಾರಿಸಲಾಗುತ್ತಿದೆ. ಮನೀಷಾ ಕೊಯಿರಾಲಾ ಈ ಸಿನಿಮಾಗಳ ನಾಯಕಿ. ಈ ಕೃತಿ ಈಗಾಗಲೇ ಹಿಂದಿ, ಇಂಗ್ಲಿಷ್ ಭಾಷೆಗಳಿಗೆ ಅನುವಾದವಾಗಿದೆ. ಮರಾಠಿ, ಒಡಿಯಾ ಮತ್ತಿತರ ಭಾಷೆಗಳಲ್ಲಿ ಅನುವಾದಗೊಳ್ಳುತ್ತಿದೆ.**

ವಾರಕ್ಕೊಮ್ಮೆ ಭೇಟಿ - ಅದೂ ಒಂದು, ಒಂದೂವರೆ ಗಂಟೆಗಳ ಕಾಲ. ಇಷ್ಟೇ ಪರಿಚಯದಿಂದ ಮದುವೆ. ಮುಂದೆ ಗಂಡನ ದೇಶವನ್ನೂ, ಅಲ್ಲಿನ ತನ್ನ ಹೊಸ ಸಂಬಂಧಿಕರನ್ನೂ ನೋಡುವ ಕುತೂಹಲದಿಂದ ಸುಸ್ಮಿತಾ ಜಾಂಬಾಜ್‌ನೊಂದಿಗೆ ಅಫಘಾನಿಸ್ತಾನಕ್ಕೆ ಬರುತ್ತಾರೆ. ಇಲ್ಲಿಂದ ಪುಸ್ತಕ ಆರಂಭವಾಗುತ್ತದೆ. ಹೊಸ ನಾಡು, ಹೊಸ ಜನ, ಹೊಸ ಭಾಷೆ, ಹೊಸ ಸಂಸ್ಕೃತಿ, ಎಲ್ಲವೂ ಹೊಸತು. ಎಲ್ಲವನ್ನೂ ಕುತೂಹಲದಿಂದ, ಆಸಕ್ತಿಯಿಂದ ನೋಡುತ್ತಿರುವಷ್ಟರಲ್ಲಿ ಎರಡೂವರೆ ವರ್ಷ ಕಳೆಯುತ್ತದೆ.

ಒಂದು ದಿನ ಜಾಂಬಾಜ್ ಆಕೆಗೆ ತಿಳಿಸದೆ ಇದ್ದಕ್ಕಿದ್ದಂತೆ ನಾಪತ್ತೆಯಾಗುತ್ತಾನೆ. ಕಾಣದ ದೇಶದಲ್ಲಿ ಬರ್ಬರ ಜನ, ಕಟುಕ ಸಂಬಂಧಿಕರು, ದೈತ್ಯ ತಾಲಿಬಾನರ ಕೈಯಲ್ಲಿ ಆಕೆಯನ್ನಿಟ್ಟು ಜಾಂಬಾಜ್ ಭಾರತಕ್ಕೆ ಪಲಾಯನ ಮಾಡಿರುತ್ತಾನೆ. ಇಲ್ಲಿಂದ ಆಕೆಯ ನರಕಯಾತನೆ ಆರಂಭವಾಗುತ್ತದೆ. ತನ್ನ ಮೂಲಕ ಅಫಘಾನಿಸ್ತಾನದ ಜನರನ್ನು, ಮುಖ್ಯವಾಗಿ ಮಹಿಳೆಯರನ್ನು ಆಕೆ ನೋಡುತ್ತಾಳೆ. ''ಇಡೀ ಅಫಘಾನಿಸ್ತಾನವೇ ಒಂದು ಬಂದಿಖಾನೆ. ಇಡೀ ದೇಶ ಐನೂರು-ಆರುನೂರು ವರ್ಷಗಳಷ್ಟು ಹಿಂದಕ್ಕೆ ತಳ್ಳಲ್ಪಟ್ಟಿದೆ. ಕಾಬೂಲ್ ಬಿಟ್ಟು ಬೇರೆಲ್ಲೂ ವಿದ್ಯುತ್ ಇಲ್ಲ. ಆಸ್ಪತ್ರೆಗಳಿಲ್ಲ, ಶಾಲೆಗಳಿಲ್ಲ, ರಸ್ತೆಗಳಿಲ್ಲ, ವೃತ್ತ ಪತ್ರಿಕೆಗಳಿಲ್ಲ, ಟಿ.ವಿ. ಇಲ್ಲ - ಏನೊಂದೂ ಇಲ್ಲ. ಭಾರತಕ್ಕೆ ಟೆಲಿಫೋನ್ ಮಾಡಬೇಕಾದರೆ ಎರಡು ದಿನಗಳ ಪ್ರಯಾಣ ಮಾಡಿ ಪಾಕಿಸ್ತಾನಕ್ಕೆ ಬರಬೇಕು.''

ಜನರು ಅಜ್ಞಾನ, ಮೌಢ್ಯ, ಮತಾಂಧತೆ, ಮೂಢ ನಂಬಿಕೆಗಳಿಂದ ಬಳಲುತ್ತಿದ್ದಾರೆ. ಇಡೀ ಅಫಘಾನಿಸ್ತಾನದಲ್ಲಿ ಆಗ (ಬಹುಶಃ ಈಗಲೂ ಸಹ) ಲೇಡಿ ಡಾಕ್ಟರುಗಳೇ ಇಲ್ಲ. ಹಳ್ಳಿಗಳಲ್ಲಂತೂ ಡಾಕ್ಟರುಗಳೇ ಇಲ್ಲ. ಇರುವವರೂ ಸ್ಟೆಥಾಸ್ಕೋಪನ್ನು ಒಂದು ತಂತ್ರವನ್ನಾಗಿ ಬಳಸುವವರೇ! ಇದನ್ನು ಕಂಡು ''ಅಬ್ಬಬ್ಬ, ಡಾಕ್ಟರರು ಎಷ್ಟೊಂದು ಬುದ್ಧಿವಂತರು, ಹೊಟ್ಟೆಯ ಮೇಲೆ ದುರ್ಬೀನು ಇರಿಸಿ, ಎಷ್ಟು ಬೇಗ ರೋಗ ಕಂಡುಹಿಡಿದರು'' ಎಂದು ಅಚ್ಚರಿಪಡುವ ಪೆದ್ದ ಹಳ್ಳಿಗರು.– ಇವರೆಲ್ಲ ಅಫಘಾನಿಸ್ತಾನ ಎನ್ನುವ ದುರಂತ ನಾಟಕದ ಜೀವಂತ ಪಾತ್ರಗಳು.

ಅಫಘಾನಿಸ್ತಾನದಲ್ಲಿ ಮಹಿಳೆಯರ ಶೋಚನೀಯ ಸ್ಥಿತಿಯನ್ನು ಲೇಖಕಿ ವಿವರವಾಗಿ ಹಿಡಿದಿಟ್ಟಿದ್ದಾರೆ. ಇಲ್ಲಿ ಹೆಣ್ಣಿನ ಪರಿಚಯ ಇಷ್ಟೆ: ''ಶಯ್ಯಾ ಸಂಗಿನಿ, ಅಡುಗೆಯವಳು ಮತ್ತು ಸಂತಾನ ಉತ್ಪತ್ತಿ ಮಾಡುವ ಮಷೀನು.'' ವರ್ಷಕ್ಕೊಂದು ಮಗುವನ್ನು ಹೆರುತ್ತಿರಬೇಕು. ಇಲ್ಲವಾದಲ್ಲಿ ಮನೆಗೆ ಸವತಿ ಬಂದಳು ಎಂದೇ ಲೆಕ್ಕ. ಹೀಗಾಗಿ ಒಬ್ಬೊಬ್ಬರಿಗೂ ೧೦-೧೫ ಜನ ಮಕ್ಕಳು. ಆದರೆ ಅವರನ್ನು ಸಾಕಬೇಕೆನ್ನುವ ಚಿಂತೆ ಯಾರಿಗೂ ಇಲ್ಲ. ಮೊದಲ ೪-೫ ವರ್ಷ ಸಾಕಿದರೆ ಸಾಕು, ಮುಂದೆ ದನ ಕಾಯುತ್ತಾ, ಹೇಗೋ ಹಾಗೆ ಅವೇ ಬೆಳೆಯುತ್ತವೆ. ಮದುವೆಯಾದ ಹೆಣ್ಣು ಒಂದಿಷ್ಟು ದೈಹಿಕ ಸುಖದ ವಿನಿಮಯಕ್ಕಾಗಿ ಇಡೀ ಜೀವನ ಬಾಯಿ ಮುಚ್ಚಿಕೊಂಡು ಎಲ್ಲ ಹಿಂಸೆ ಕ್ರೌರ್ಯಗಳನ್ನು ಸಹಿಸಿಕೊಳ್ಳಬೇಕಾಗುತ್ತದೆ. ಆಕೆಗೆ ಒಂದು ಕವಡೆಯ ಬೆಲೆಯೂ ಇಲ್ಲ. ಯಾವಾಗಲೂ ಪುರುಷನ ಅಧೀನದಲ್ಲಿಯೇ ಇರಬೇಕು. ಗಂಡಸಿನ (ಗಂಡ ಅಥವಾ ಅತಿ ಹತ್ತಿರದ ಸಂಬಂಧಿಕ ಮಾತ್ರ) ಜೊತೆ ಇಲ್ಲದೆ ಆಕೆ ತನ್ನ ಹಳ್ಳಿಯಲ್ಲೂ ಸಹ ಹತ್ತು ಹೆಜ್ಜೆ ಇರಿಸುವಂತಿಲ್ಲ. ಪಕ್ಕದ ಮನೆಗೆ ಹೋಗಲೂ ಸಹ ಪುರುಷನ ಜೊತೆ ಬೇಕೇಬೇಕು. ಒಂಟಿ ಹೆಣ್ಣು ಓಡಾಡುವುದು ಕಂಡರೆ, ಹಳ್ಳಿ ಹಳ್ಳಿಗಳಲ್ಲು ಕಾವಲು ಕಾಯುವ ತಾಲಿಬಾನರು ಆಕೆಯನ್ನು ಹಿಡಿದು ಚಾಟಿ ಏಟಿನ ಶಿಕ್ಷೆ ನೀಡಿದರು ಎಂದೇ ಅರ್ಥ. ಆಕೆಯನ್ನು ಗುಂಡುಹಾರಿಸಿ ಕೊಲ್ಲಲೂ ಅವರು ಹೇಸುವವರಲ್ಲ.

ಹತ್ತಿ ಉರಿಯುತ್ತಿರುವ ಈ ನಾಡಿಗೆ ತಾವು ಮೆಚ್ಚಿದವನನ್ನು ಮದುವೆಯಾಗಿ ಬಂದಿರುವ ಎಷ್ಟೋ

ಜಿ. ಕುಮಾರಪ್ಪ

ಭಾರತೀಯ, ಮುಖ್ಯವಾಗಿ ಬಂಗಾಳಿ, ಹುಡುಗಿಯರನ್ನು ಸುಸ್ಮಿತಾ ನೋಡಿದ್ದಾರೆ. ಅವರ ದಾರುಣ ಸ್ಥಿತಿಯನ್ನು ಕಂಡು ಮರುಗಿದ್ದಾರೆ. ಕಾಕೋಲಿ, ಜುಬೇದಾ, ನೂರ್ ಜಹಾನ್, ಕಮಲ, ಯಶೋದಾ, ಹರಿಣಿ, ಸವಿತಾ, ಮಾನಸಿ – ಹೀಗೆ ಪಟ್ಟಿ ಬೆಳೆಯುತ್ತದೆ. ಇಲ್ಲಿ ಉಲ್ಲಾಸವೇ ಮೈವೆತ್ತಂತೆ ಇದ್ದ ಈ ಹುಡುಗಿಯರು ಅಫಘಾನಿಸ್ತಾನದ ಬದುಕಿನ ದಳ್ಳುರಿಯಲ್ಲಿ ಸುಟ್ಟು, ಜೀವಂತ ಶವವಾಗಿದ್ದಾರೆ. ಗಂಡನ ಹಿಂಸೆ, ಅತ್ತೆ-ಮಾವ, ಭಾವ-ಮೈದುನ, ಅತ್ತಿಗೆ-ನಾದಿನಿಯರಿಂದ ಬಯ್ಗುಳ, ಹೊಡೆತ ತಿಂದೂ ತಿಂದೂ ತಾವು ಜೀವಂತವಾಗಿದ್ದೇವೆ ಎನ್ನುವುದನ್ನೇ ಅವರು ಮರೆತು ಬಿಟ್ಟಿದ್ದಾರೆ. ''ಇವರಾರೂ ಕನಸು ಕಾಣುತ್ತಿಲ್ಲ, ಹಗಲು-ರಾತ್ರಿಗಳ ಲೆಕ್ಕವನ್ನೂ ಇಡುತ್ತಿಲ್ಲ.''

ಲೇಖಕಿಯ ಪರಿಸ್ಥಿತಿ ಈ ಹುಡುಗಿಯರದಕ್ಕಿಂತಲೂ ಉತ್ತಮವಾಗಿಯೇನೂ ಇರಲಿಲ್ಲ. ಗಂಡ ಜಾಂಬಾಜ್ ಹತ್ತಿರದಲ್ಲಿ ಇಲ್ಲ. ಮೂವರು ಮೈದುನರೂ ಅನಾಗರಿಕರು. ತಾನು ವಿದೇಶಿ ಮಹಿಳೆ, ಮುಸ್ಲಿಂ ಅಲ್ಲ, ಮೇಲಾಗಿ ಹಿಂದೂ. ಹೀಗಾಗಿ ಹೊಡೆತ, ಹಿಂಸೆ, 'ಕಾಫೀರ್' ಎಂದು ಅವಹೇಳನ, ಅಪ್ಪ-ಅಮ್ಮಂದಿರ ಹೆಸರು ಹೇಳಿ ನಿಂದನೆ, ಚಳಿಗಾಲದಲ್ಲಿ ರಾತ್ರಿ ಬೆಂಕಿ ಕಾಯಿಸಿಕೊಳ್ಳಲು ಎಣಿಸಿ ಕಟ್ಟಿಗೆಯ ತುಂಡುಗಳನ್ನು ಕೊಡುತ್ತಿದ್ದುದು, ತಿನ್ನಲು ತಾನೇ ಬೆಳೆದ ದ್ರಾಕ್ಷಿಯನ್ನು ತೂಗಿಸಿಕೊಂಡು ಪಡೆಯುತ್ತಿದ್ದುದು – ಅಪಮಾನ ಅವಹೇಳನಗಳು ಒಂದೇ ಎರಡೇ. ''ಮನೆಯಲ್ಲಿ ಎಲ್ಲರೂ ನನ್ನನ್ನು ನಾಯಿಯಂತೆ ಕಾಣುತ್ತಿದ್ದರು.'' ಅವರಿಗೆ ಹೆದರಿ, ತನ್ನದೇ ಮನೆಯಲ್ಲಿ ''ಇಲಿ ತನ್ನ ಬಿಲದೊಳಕ್ಕೆ ಸೇರಿಕೊಳ್ಳುವಂತೆ ತನ್ನ ಕೊಠಡಿ ಸೇರಿಕೊಳ್ಳುತ್ತಿದ್ದರು.''

ಹಿಂಸೆ, ಕ್ರೌರ್ಯಗಳನ್ನು ಸಹಿಸಿಕೊಳ್ಳಲು ಅಸಾಧ್ಯವೆನ್ನಿಸಿದಾಗ ಭಾರತಕ್ಕೆ ಪಲಾಯನ ಮಾಡಲು ಯೋಚಿಸಿ ದರು. ಆದರೆ, ವೀಸಾ, ಪಾಸ್‌ಪೋರ್ಟ್, ವಿಮಾನ ಪ್ರಯಾಣ – ''ಹಿಮಾಲಯವನ್ನು ಸುಲಭವಾಗಿ ದಾಟಬಿಡಬಹುದು. ಆದರೆ ತನ್ನ ಊರಿನಿಂದ ನಾಲ್ಕು ಗಂಟೆಗಳ ದೂರದ ಕಾಬೂಲನ್ನು ತಲುಪುವುದು ಅಸಾಧ್ಯ'' ಎಂದು ಅವರಿಗೆ ತಿಳಿದಿತ್ತು. ಆದರೂ ತಪ್ಪಿಸಿಕೊಳ್ಳಲೇಬೇಕು. ಆದರೆ ಹೇಗೆ ?

ತನ್ನಿಂದ ಬಹಳಷ್ಟು ಸಹಾಯ ಪಡೆದಿದ್ದ ಒಬ್ಬ ವ್ಯಕ್ತಿಯ ಸಹಾಯದಿಂದ ಪಾಕಿಸ್ತಾನ ತಲುಪುತ್ತಾರೆ. ದಾರಿಯ ತೊಂದರೆಗಳನ್ನು ನೋಡಿದರೆ, ತೇನ್‌ಸಿಂಗ್ ಅವರು ಹಿಮಾಲಯ ಹತ್ತಲು ಲೇಖಕಿಯಷ್ಟು ಕಷ್ಟ ಅನುಭವಿಸಿರಲಿಲ್ಲ ಅನ್ನಿಸುತ್ತದೆ. ಆದರೆ ಪಾಕಿಸ್ತಾನದಲ್ಲಿ ದುರಂತದ ಅಧ್ಯಾಯವೊಂದು ತೆರೆದುಕೊಳ್ಳುತ್ತದೆ. ಲೇಖಕಿಗೆ ತೊಂದರೆ ಬಂದದ್ದು ಪಾಕಿಸ್ತಾನಿಗಳಿಂದಲ್ಲ, ಇಸ್ಲಾಮಾಬಾದ್‌ನ ಭಾರತ ದೂತಾವಾಸದ ಹಿರಿಯ ಭಾರತೀಯ ಅಧಿಕಾರಿ ಒಬ್ಬನಿಂದ ! ವೀಸಾ, ಪಾಸ್‌ಪೋರ್ಟ್ ಇಲ್ಲದ ಲೇಖಕಿಯ ಅಸಹಾಯಕತೆಯ ಲಾಭ ಪಡೆಯಲು ಆ ಅಧಿಕಾರಿ ಹೇಳಿದ್ದು ''ನಿಮ್ಮ ಕೇಸ್ ಬಾಳಾ ಕಾಂಪ್ಲಿಕೇಟೆಡ್. ಆ ಬಗ್ಗೆ ಇಲ್ಲಿ ಚರ್ಚೆ ಮಾಡುವುದು ಬೇಡ. ನನ್ನ ಕ್ವಾರ್ಟರ್ಸ್‌ಗೆ ಹೋಗೋಣ ಬನ್ನಿ. ಅಲ್ಲಿ ಡ್ರಿಂಕ್ಸ್ ತೆಗೆದುಕೊಳ್ಳುತ್ತಾ ಮಾತಾಡೋಣ. ನೀವು ಡ್ರಿಂಕ್ಸ್ ತಗೋತೀರಿ ತಾನೆ ?'' ಈ ಆಹ್ವಾನಕ್ಕೆ ಒಪ್ಪದ ಲೇಖಕಿಯನ್ನು ಯಾವುದೇ ಸಹಾಯಹಸ್ತ ನೀಡದೆ, ಆ ಅಧಿಕಾರಿ ದೂತಾವಾಸದಿಂದ ಹೊರಗೆ ಹಾಕುತ್ತಾನೆ. ಆಗ ಆಕೆಗೆ ಅನ್ನ ಹಾಕಿ ಆಶ್ರಯ ನೀಡಿದುದು ಪಾಕಿಸ್ತಾನ. ''ಭಾರತೀಯರನ್ನು ಕಂಡರೆ ಹಿಡಿದು ಹಿಂಸಿಸಿ, ಅತ್ಯಾಚಾರ ಮಾಡಿಬಿಡುತ್ತಾರೆ'' ಎಂದುಕೊಂಡಿದ್ದ ಪಾಕಿಸ್ತಾನಿ ಅಧಿಕಾರಿಗಳು, ಯಾವ ಪ್ರತಿಫಲದ ಅಪೇಕ್ಷೆ ಇಲ್ಲದೆ, ಸಾಮಾನ್ಯ ಪೊಲೀಸ್ ಅಧಿಕಾರಿಯೊಬ್ಬ ಆಕೆಗೆ ಇರಲು ವ್ಯವಸ್ಥೆ ಕಲ್ಪಿಸಿಕೊಡುತ್ತಾನೆ. ತನ್ನ ಮನೆಯಲ್ಲಿ ಉಳಿದುಕೊಂಡ ಆಕೆಗೆ ಒಬ್ಬ ಪೊಲೀಸ್ ಪೇದೆ ವಿಶೇಷ ಔತಣ ಮಾಡಿ ಬಡಿಸುತ್ತಾನೆ. ಅಷ್ಟೇ ಏಕೆ, ಆಕೆಯನ್ನು ಹೊತ್ತೊಯ್ಯಲು ಬಂದಿದ್ದ ಆಕೆಯ ಸಂಬಂಧಿಕರಿಂದ ಪಾರು ಮಾಡುವುದೂ ಆ ಪೊಲೀಸ್ ಅಧಿಕಾರಿಯೇ. ಪಾಸ್‌ಪೋರ್ಟ್ ಇಲ್ಲದೆ ಪಾಕಿಸ್ತಾನದಲ್ಲಿ ಆಕೆ ಇರುವುದನ್ನು ತಿಳಿದೂ ಆಕೆಯನ್ನು ಬಂಧಿಸದೆ ಸಲಹೆ-ಸಹಕಾರ ನೀಡುತ್ತಾರೆ.

ಆದರೇನು, ತನ್ನನ್ನು ಹುಡುಕಿಕೊಂಡು ಬಂದಿದ್ದ ಸಂಬಂಧಿಕರೊಂದಿಗೆ ಆಕೆ ಮತ್ತೆ ಆಫಘಾನಿಸ್ತಾನಕ್ಕೆ ವಾಪಾಸು ಹೋಗಬೇಕಾಗುತ್ತದೆ. ಏಕೆಂದರೆ ಹೀಗೆ ಓಡಿಹೋದರೆ, ಜಾಂಬಾಜ್‌ಗೂ, ಅವನ ಮನೆಯವರಿಗೂ ಕೆಟ್ಟ ಹೆಸರು. ಆದುದರಿಂದ ಆಕೆಯ ತಮ್ಮ ಕಲ್ಕತ್ತಾದಲ್ಲಿ ಜಾಂಬಾಜ್‌ನೊಂದಿಗೆ ಮಾತನಾಡಿ ಜಾಂಬಾಜ್ ಒಂದು ತಿಂಗಳ ಒಳಗಾಗಿ ಆಕೆಯನ್ನು ಕಲ್ಕತ್ತೆಗೆ ವಾಪಾಸು ಕರೆಸಿಕೊಳ್ಳುವುದಾಗಿ ಮಾತುಕೊಟ್ಟಿದ್ದಾನೆ ಎಂದು ತಿಳಿಸುತ್ತಾನೆ. ಹೀಗಾಗಿ, ಆಕೆ ಮತ್ತೆ ತನ್ನ 'ಪಾರಿವಾರಿಕ ಜೈಲಿಗೆ' ಹಿಂತಿರುಗುತ್ತಾಳೆ.

ಆದರೆ ಜಾಂಬಾಜ್ ಹೇಳಿದ್ದ ತಿಂಗಳ ಗಡವು ಮುಗಿಯಿತು. ಮುಂದೆ ಆರು ತಿಂಗಳುಗಳಾದರೂ ಸಹ ಭಾರತಕ್ಕೆ ಕರೆಸಿಕೊಳ್ಳುವ ಸುದ್ದಿಯೇ ಇಲ್ಲ. ಇನ್ನು ಕಾಯುತ್ತಾ ಕುಳಿತುಕೊಳ್ಳುವುದರಲ್ಲಿ ಅರ್ಥವಿಲ್ಲ. ಪಲಾಯನ ಒಂದೇ ದಾರಿ.

ಮತ್ತೊಂದು ನಿರರ್ಥಕ ಪ್ರಯತ್ನ. ಮೊದಲ ಪಲಾಯನದ ನಂತರ ಮನೆಯವರು ಆಕೆಯ ಮೇಲೆ ಕಟ್ಟೆಚ್ಚರದಿಂದ ಕಾವಲು ಕಾಯುತ್ತಿದ್ದಾರೆ. ರಾತ್ರಿ ಮಲಗಿದಾಗಲೂ ಕಾವಲು ಸಡಿಲಗೊಳ್ಳುವುದಿಲ್ಲ. ಆದರೂ ತಪ್ಪಿಸಿಕೊಳ್ಳಬೇಕು. ಆದರೆ ಹೇಗೆ ? ಅಂತಹ ಅವಕಾಶವೂ ದೊರೆಯಿತು. ಮನೆಯ ಒಳಗಿದ್ದ ಬಾವಿಯಿಂದ ಕಾಂಪೌಂಡಿನಲ್ಲಿ ಬೆಳೆದ ತರಕಾರಿಗೆ ನೀರು ಹಾಯಿಸಲು ಆಕೆಯ ಒಬ್ಬ ಮೈದುನ ಮನೆಯ ಗೋಡೆಯಲ್ಲಿ ತೂತು ಕೊರೆದಿದ್ದ. ಐದು ಅಡಿ ಅಗಲದ ಗೋಡೆಯಲ್ಲಿ ಒಬ್ಬ ವ್ಯಕ್ತಿ ತೆವಳಿ ಹೋಗಬಹುದಾದಷ್ಟು ದೊಡ್ಡ ರಂಧ್ರ. ಸಂಜೆ ನೀರು ಹಾಯಿಸಿದ ಮೇಲೆ ಹಸಿ ಮಣ್ಣಿನಿಂದ ಆ ರಂಧ್ರವನ್ನು ಮುಚ್ಚಿದ್ದರು. ಇದೇ ಅವಕಾಶ ಎಂದುಕೊಂಡ ಲೇಖಕಿ, ರಾತ್ರಿಯ ಕತ್ತಲೆಯಲ್ಲಿ ಬರಿಯ ಕೈಗಳಲ್ಲಿ ಗೋಡೆಯ ಹಸಿ ಮಣ್ಣನ್ನು ಕೀಳುತ್ತಾರೆ. ಮಣ್ಣು ಕೀಳುತ್ತಾ, ಕೀಳುತ್ತಾ ಮುಂದೆ ತೆವಳಬೇಕು. ಮಣ್ಣಿನಲ್ಲಿ ಸೇರಿಸಿದ್ದ ಮುಳ್ಳುಗಳು ಕೈಯನ್ನೆಲ್ಲ ಚುಚ್ಚಿ ಕೈಯಲ್ಲಿ ರಕ್ತ ಬರುತ್ತಿದೆ. ಆದರೂ ನಿಲ್ಲಿಸುವಂತಿಲ್ಲ.

*ಇಲ್ಲಿ ಹೆಣ್ಣುಮಕ್ಕಳೆಂದರೆ ಆಕೆಯ ಅಪ್ಪ ಅಮ್ಮಂದಿರಿಗೆ ಬ್ಯಾಂಕ್‌ನ ಡಿಪಾಜಿಟ್ ಸರ್ಟಿಫಿಕೇಟ್ ಇದ್ದಂತೆ. ತೆರ/(ಕನ್ಯಾಶುಲ್ಕ) ತೆಗೆದುಕೊಂಡು ಮಗಳ ಮದುವೆ ಮಾಡುತ್ತಾರೆ. ಮದುವೆ ನಿರ್ಧಾರವಾದ ಮೇಲೆ ಒಂದು ವರ್ಷ ಹುಡುಗಿ ಅಪ್ಪನ ಮನೆಯಲ್ಲಿಯೇ ಇರುತ್ತಾಳೆ. ಆಗ ಮಗಳನ್ನು ತನ್ನ ಮನೆಯಲ್ಲಿ ಇರಿಸಿಕೊಳ್ಳಲು ಅಪ್ಪ ಹುಡುಗನಿಂದ ಹಣ ವಸೂಲಿ ಮಾಡಿಕೊಳ್ಳುತ್ತಾನೆ. ಹುಡುಗ ಆಗಾಗ್ಗೆ ಹುಡುಗಿಯ ಮನೆಗೆ ಬರುತ್ತಿರುತ್ತಾನೆ. ಆಗೆಲ್ಲ ಹುಡುಗಿಯೊಂದಿಗೆ ರಾತ್ರಿಯನ್ನು ಏಕಾಂತವಾಗಿ ಕಳೆಯುತ್ತಾನೆ. ಮದುವೆಗೆ ಮುನ್ನ ಹುಡುಗಿ ಗರ್ಭವತಿಯಾದರೆ, ಹುಡುಗಿಯ ಅಪ್ಪನಿಗೆ ಖುಷಿಯೋ ಖುಷಿ. ಏಕೆಂದರೆ ಕನ್ಯಾಶುಲ್ಕ ಡಬಲ್ ಆಗುತ್ತದೆ.*

*ಇಡೀ ಅಫಘಾನಿಸ್ತಾನವೇ ಒಂದು ಬಂದಿಖಾನೆ.*

* * *

*ಇಡೀ ಅಫಘಾನಿಸ್ತಾನದಲ್ಲಿ ಒಬ್ಬ ಮಹಿಳಾ ಡಾಕ್ಟರರಿಲ್ಲ. ಎಸ್. ಎನ್. ಪಾಂಡೆಯವರ ಪ್ರಾಕ್ಟೀಸ್ ಆಫ್ ಮೆಡಿಸಿನ್ ಮತ್ತು ಸಿ. ಎಸ್. ದಾ ಅವರ ಟೆಕ್ಸ್ಟ್ ಬುಕ್ ಆಫ್ ಗೈನಕೊಲಜಿಗಳನ್ನಷ್ಟೇ ಓದಿ, ನಾನು ಇಲ್ಲಿ 'ಡಾಕ್ಟರ್' ಆಗಿಬಿಟ್ಟಿದ್ದೆ. ಪ್ರತಿದಿನ ೫೦ರಿಂದ ೧೦೦ ರೋಗಿಗಳನ್ನು ನೋಡುತ್ತಿದ್ದೆ. ಇದರಿಂದ ಎಷ್ಟೋ ಮಹಿಳೆಯರಿಗೆ ಉಪಕಾರವಾಗಿದೆ. ಸುತ್ತಲ ಹಳ್ಳಿಗಳಲ್ಲಿ ದೊಡ್ಡ ಡಾಕ್ಟರ್ ಎಂದು ಹೆಸರು ಪಡೆದಿದ್ದೆ.*

* * *

*ಇಲ್ಲಿ ಪಟಾಕಿಗಿಂತಲೂ ಮದ್ದು ಗುಂಡುಗಳು ಸುಲಭವಾಗಿ ಸಿಗುತ್ತವೆ. ಆದುದರಿಂದಲೇ ಮಕ್ಕಳಾದಾಗ ಅಥವಾ ವಿವಾಹದ ಸಂದರ್ಭಗಳಲ್ಲಿ ಪಟಾಕಿ ಸಿಡಿಸದೆ ಗುಂಡು ಹಾರಿಸುತ್ತಾರೆ.*

* * *

*ಅಫಘಾನಿಸ್ತಾನದಲ್ಲಿ ಹೆಣ್ಣುಮಕ್ಕಳು ಯಾವುದೇ ಕನಸು ಕಾಣುವುದಿಲ್ಲ. ಮಹತ್ತರವಾದ ಏನನ್ನಾದರೂ ಸಾಧಿಸುವ ಕನಸು ಕಾಣುವ ಆಸೆ ಇರಿಸಿಕೊಂಡವರಲ್ಲ. ಹಾಗೆ ಕನಸು ಕಾಣಬೇಕೆನ್ನುವುದೂ ಅವರಿಗೆ ತಿಳಿಯದು.*

* * *

*ತಾಲಿಬಾನರು ಪ್ರಗತಿ ವಿರೋಧಿಗಳು. ಚರಮ ಮೂಲಭೂತವಾದಿಗಳು. ಅಂತರರಾಷ್ಟ್ರೀಯ ಸಂಬಂಧ, ಆರ್ಥಿಕ ಮತ್ತು ಸಾಮಾಜಿಕ ಉನ್ನತಿ ಮತ್ತು ವಿಕಾಸಗಳಿಂದ ಸಾವಿರಾರು ಮೈಲು ದೂರ ಇರುವರು.*

* * *

*ಅಫಘಾನಿಸ್ತಾನದಲ್ಲಿ ಕೋಳಿಗಿರುವಷ್ಟೇ ಬೆಲೆ ಮನುಷ್ಯರದ್ದು.*

* * *

*ಬದುಕೇ ಇಲ್ಲವೆಂದ ಮೇಲೆ ಸಾವಿಗೆ ಭಯಪಡುವುದೇಕೆ ?*

ಇದ್ದಕ್ಕಿದ್ದಂತೆ ರಂಧ್ರದಲ್ಲಿ ತಣ್ಣನೆ ಗಾಳಿ ಬೀಸುತ್ತದೆ. ಕ್ಷೀಣವಾಗಿ ಬೆಳಕು ಬೀಳುತ್ತದೆ. ಬೆಳಕು, ಕತ್ತಲೆ ತುಂಬಿದ ಬೇಟಿಕಾಣು ಬದುಕಿನಲ್ಲಿ ಬೆಳಕು. ಹೊರಬಂದ ಲೇಖಕಿ ಬಟ್ಟೆ ಬದಲಾಯಿಸಿ, ತನ್ನಲ್ಲಿದ್ದ ದಾಖಲೆ ಪತ್ರಗಳು, ದುಡ್ಡು, ಒಂದು ಸ್ಟೆಥಾಸ್ಕೋಪ್ ಹಿಡಿದು ಹೊರಬೀಳುತ್ತಾರೆ. ನೇರ ದಾರಿ ಹಿಡಿಯದೆ ಕಾಡಿನ ಹಾದಿ ಹಿಡಿದು ಗಜನಿನೆಡೆಗೆ ಸಾಗುತ್ತಾರೆ. ಬೆಳಕು ಹರಿಯುವ ಸುಮಾರಿಗೆ ಹೊಲ ಕಾಯುತ್ತಿದ್ದ ವ್ಯಕ್ತಿಯ ಸಹಾಯದಿಂದ ಹತ್ತಿರದ ಹಳ್ಳಿಯ ಮೌಲ್ವಿಯ ಮನೆಯಲ್ಲಿ ಆಶ್ರಯ ಪಡೆಯುತ್ತಾರೆ.

ಗಜನಿಗೆ ತಲುಪಿದ ನಂತರ ಅದೃಷ್ಟ ಮತ್ತೆ ಕೈಕೊಟ್ಟಿತು. ಅಲ್ಲಿನ ಬಸ್ ನಿಲ್ದಾಣದಲ್ಲಿ ತನ್ನ ಗಂಡನ ಕಡೆಯ ಸಂಬಂಧಿಯೊಬ್ಬನೊಂದಿಗೆ ಭೇಟಿಯಾಗುತ್ತದೆ. ಅವನು - ರಫೀಕ್ - ಆಕೆಯನ್ನು ತನ್ನ ಮನೆಗೆ ಕರೆತಂದು, ಊರಿಗೆ ಸುದ್ದಿ ಮುಟ್ಟಿಸುತ್ತಾನೆ. ಒಬ್ಬಂಟಿ ಹೆಣ್ಣು ಬಂದಿರುವುದನ್ನು ತಿಳಿದು ೫-೬ ಜನ ತಾಲಿಬಾನರೂ ಆ ಮನೆಗೆ ಬರುತ್ತಾರೆ. ರಫೀಕನ ಮನೆಯಲ್ಲಿ ಆಕೆಯ ಸಂಬಂಧಿಕರು, ತಾಲಿಬಾನರು ಚರ್ಚೆ ನಡೆಸಲಾರಂಭಿಸುತ್ತಾರೆ. ಚರ್ಚೆಯ ಮುಖ್ಯ ವಿಷಯ ಆಕೆಗೆ ಛಡಿ ಏಟಿನ ಶಿಕ್ಷೆ ಕೊಡುವುದೋ ಅಥವಾ ಗುಂಡು ಹಾರಿಸಿ ಕೊಲ್ಲುವುದೋ ಎನ್ನುವುದಾಗಿತ್ತು. ಮರೆಯಲ್ಲಿ ನಿಂತು ಈ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದ ಲೇಖಕಿಗೆ ಗುಂಡು ಹೊಡೆದು ಸಾಯಿಸುವ ಬಗ್ಗೆ ಕೇಳಿದ ಕೂಡಲೇ ಮೈಯೆಲ್ಲ ಉರಿಯಿತು. ತಾನು ಈ ಮೊದಲು ಕುಳಿತಿದ್ದ ಕೊಠಡಿಯಲ್ಲಿ ನೇತುಹಾಕಿದ್ದ ಕಲಷ್ನಿಕೋವ್‌ನ್ನು ಹಿಡಿದು, ನೇರವಾಗಿ ತಾಲಿಬಾನರು ಕುಳಿತಿದ್ದ ಕೊಠಡಿಗೆ ನುಗ್ಗುತ್ತಾರೆ. ಬಂದೂಕು ಹಿಡಿದು ನಿಂತ ಲೇಖಕಿಯನ್ನು ನೋಡಿ ಎಲ್ಲರೂ ಸ್ತಬ್ಧರಾಗುತ್ತಾರೆ. ದ್ರಾನಾಯಿ ಎನ್ನುವ ಆಕೆಯ ಚಿಕ್ಕಪ್ಪ ಆಕೆಯನ್ನು ಶಾಂತಗೊಳಿಸುತ್ತಾನೆ. ಅಲ್ಲಿದ್ದವರಿಗೆಲ್ಲ ತಿಳಿಹೇಳಿ, ಭಾರತಕ್ಕೆ ಹಿಂತಿರುಗಿದ ಮೇಲೆ ಜಾಂಬಾಜ್‌ನಿಗೆ ಯಾವುದೇ ತೊಂದರೆ ಕೊಡಬಾರದೆನ್ನುವ ಷರತ್ತಿನ ಮೇಲೆ ಆಕೆಯನ್ನು ಕಾಬೂಲಿಗೆ ಕಳುಹಿಸುವ, ಖರ್ಚಿಗೆ ದುಡ್ಡು ಜೋಡಿಸಿ ಕೊಡುವ ವ್ಯವಸ್ಥೆ ಮಾಡುತ್ತಾನೆ. ಕಾಬೂಲ್‌ನಲ್ಲಿ ಪಾಸ್‌ಪೋರ್ಟ್ (ನಕಲಿ), ವೀಸಾ, ವಿಮಾನದ ಟಿಕೆಟ್ ಪಡೆದು ಅಫಘಾನಿಸ್ತಾನದ ವಿಮಾನ ಹತ್ತಿ ಕುಳಿತುಕೊಳ್ಳುತ್ತಾರೆ. ಲೇಖಕಿಯ ಪಾಸ್‌ಪೋರ್ಟ್ ನಕಲಿ ಎಂದು ತಿಳಿದೂ, ಕಾಬೂಲ್‌ನ ಭಾರತ ದೂತಾವಾಸದ ಅಧಿಕಾರಿಗಳು ಈಗ ಆಕೆಗೆ ವೀಸಾ ನೀಡುತ್ತಾರೆ. ''ಒಬ್ಬ ಭಾರತೀಯಳಾದರೂ ತನ್ನ ತಾಯ್ನಾಡಿಗೆ ಹಿಂತಿರುಗಲಿ'' ಎನ್ನುವುದೇ ಅವರ ಆಸೆ.

ವಿಮಾನ ಕಾಬೂಲ್ ವಿಮಾನ ನಿಲ್ದಾಣದ ರನ್‌ವೇಯಲ್ಲಿ ಜೋರಾಗಿ ಸಾಗಿ, ಆಕಾಶದತ್ತ ಮುಖ ಮಾಡಿ ಮೇಲಕ್ಕೆ ಚಿಮ್ಮಿದಾಗ ಲೇಖಕಿ ನೆಮ್ಮದಿಯ ಉಸಿರು ಬಿಡುತ್ತಾರೆ. ಕಳೆದ ಎಂಟು ವರ್ಷಗಳಿಂದ ಅದುಮಿಟ್ಟಿದ್ದ ಉಸಿರು ದೊಡ್ಡ ನಿಶ್ವಾಸವಾಗಿ ಹೊರಬೀಳುತ್ತದೆ.

- ಈ ಕೃತಿ ಅಫಘಾನಿಸ್ತಾನದಲ್ಲಿನ ಲೇಖಕಿಯ ವೈಯಕ್ತಿಕ ಹೋರಾಟವನ್ನಷ್ಟೇ ಚಿತ್ರಿಸುವುದಿಲ್ಲ, ಅಲ್ಲಿನ ಜನಸಾಮಾನ್ಯರ, ಮುಖ್ಯವಾಗಿ ನಾರಿಯರ, ದಯನೀಯ ಸ್ಥಿತಿ, ಹಗಲೂ ರಾತ್ರಿ ಚಿಮ್ಮಿ ಬರುತ್ತಿರುವ ಗುಂಡುಗಳ ನಡುವೆಯೇ ನಡೆಸಬೇಕಾದ ಹಳ್ಳಿಗರ ದೈನಂದಿನ ಬದುಕು, ಹುಟ್ಟು ಸಾವುಗಳು, ಮದುವೆ-ದಿಬ್ಬಣಗಳು, ಅವರ ನಂಬಿಕೆ, ನಡೆವಳಿಕೆ, ಆಚರಣೆ, ದೇಶದ ರಾಜಕೀಯ ಪರಿಸ್ಥಿತಿ, ತಾಲಿಬಾನರ ಅಟ್ಟಹಾಸ – ಹೀಗೆ ಈ ಕೃತಿ ಅಫಘಾನಿಸ್ತಾನದ ವಿವಿಧ ಮುಖಗಳ ದಾಖಲೆಯಾಗಿದೆ.

ಈ ಕೃತಿಯನ್ನು ಓದುತ್ತಿರುವಾಗ, ಬೆಟ್ಟ ಗುಡ್ಡಗಳ, ಬಿರು ಬೇಸಿಗೆಯ, ಅಫಘಾನಿಸ್ತಾನದ ಯಾವುದೋ ಹಳ್ಳಿಯಲ್ಲಿನ ಜನರಲ್ಲಿ ನಾವೂ ಒಬ್ಬರಾಗಿ, ಅಲ್ಲಿನ ಘಟನೆಗಳಿಗೆ ಸಾಕ್ಷಿಗಳೋ, ಪಾಲುದಾರರೋ ಆಗಿದ್ದೇವೆ ಅನ್ನಿಸುತ್ತಿರುತ್ತದೆ. ಓದು ನಿಲ್ಲಿಸಿ, ಒಮ್ಮೆ ತಲೆ ಮೇಲಕ್ಕೆ ಎತ್ತಿದರೆ, ಅಬ್ಬ ಎಂತಹ ಶಾಂತ, ನೆಮ್ಮದಿಯ ಪರಿವೇಶದಲ್ಲಿ ಪುಸ್ತಕ ಓದುತ್ತಿದ್ದೇವೆ ಎಂದು ವಿಸ್ಮಿತರಾಗುತ್ತೇವೆ.


ಜಿ. ಕುಮಾರಪ್ಪ
೧೪೧, ಆಫೀಸರ್ಸ್ ಕ್ವಾರ್ಟರ್ಸ್, ಬೆಲ್ವೆಡಿಯರ್, ಎಸ್ಟೇಟ್,
ಬೆಲ್ವೆಡಿಯರ್, ಕಲ್ಕತ್ತಾ - ೭೦೦ ೦೨೭


# ಯುದ್ಧ ಕಾಲದ ಹನಿಗಳು



೧

ಜಗತ್ತಿನ ನಕಾಶೆಯಲ್ಲಿ
ಗಡಿರೇಖೆಗಳು
ರಕ್ತದ ಕಾಲುವೆಗಳಂತೆ
ಕೆಂಪಗಿವೆ
ಎಂದಾದರೊಂದು ದಿನ
ಅವುಗಳನ್ನು
ಬಿಳಿಯ ಬಣ್ಣದಲ್ಲಿ
ಬಿಡಿಸುತ್ತೇನೆ.

೨

ಅಲ್ಲಿ ಗಡಿಯಲ್ಲಿ ಸೇನೆ ಜಮಾವಣೆಗೊಂಡಿದೆ
ಇಲ್ಲಿ ಊರಲ್ಲಿ ಸೈನಿಕನ ತಾಯಿ
ಪೋಸ್ಟಮನ್‌ನನ್ನು ಕಂಡರೆ ತಲ್ಲಣಗೊಳ್ಳುತ್ತಾಳೆ
ತನ್ನ ಮನೆ ದಾಟಿದರೆ ಖುಷಿಯಿಂದ ಬಿಕ್ಕುತ್ತಾಳೆ.

ನಿತ್ಯವೂ ಕಾಯುತ್ತಾಳೆ ಉಸಿರು ಬಿಗಿ ಹಿಡಿದು
ಪೋಸ್ಟ್‌ಮನ್ ಬರುವುದಕ್ಕೆ
ಕನಸುತ್ತಾಳೆ ಕಣ್ಣಲ್ಲಿ ದೀಪಾಹಚ್ಚಿಕೊಂಡು
ಆತ ದಾಟಿ ಹೋಗುವುದಕ್ಕೆ.

೩

ಕೈಯಲ್ಲಿ ಪಿಸ್ತೂಲ್ ಹಿಡಿದು
ತಿಗರಿಯೊತ್ತುವಾಗ
ಪ್ರತಿಯೊಬ್ಬ ಯೋಧನ ಆತ್ಮ ಉಸುರುತ್ತದೆ
''ನೀನು ನನ್ನ ವೈರಿಯಲ್ಲ.''
ಅಷ್ಟರಲ್ಲೇ ಗುಂಡು ಹೊರದಾಟಿರುತ್ತದೆ
ಗುಂಡಿಗೆ ಬಲಿಯಾಗಿ ನೆಲಕುರುಳುವಾಗ
ಪ್ರತಿಯೊಬ್ಬ ಯೋಧನ ಆತ್ಮ ಚೀರುತ್ತದೆ
'ನೀನು ನನ್ನ ವೈರಿಯಲ್ಲ'
ಅಷ್ಟರಲ್ಲೇ ಪ್ರಾಣ ಹೊರದಾಟಿರುತ್ತದೆ.
ಗಡಿಗಳು ಈ ಆತ್ಮ ಸಂವಾದವನ್ನು
ಬಚ್ಚಿಟ್ಟುಕೊಳ್ಳುತ್ತವೆ.


ಎಂ. ಡಿ. ಒಕ್ಕುಂದ
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸವಣೂರು, ಹಾವೇರಿ ಜಿ||


# ನಿಟ್ಟುಸಿರು

ಮರ್ಯಾದಾ ಪುರುಷೋತ್ತಮ ರಾಮ
ಅಯೋಧ್ಯೆಯಲ್ಲಿ ಮೌನವಾಗಿದ್ದಾನೆ
ಹಳ್ಳಿಯ ನಿರುದ್ಯೋಗಿ ರಾಮ
ಹಸಿವಿನಿಂದ ಸಾಯುತ್ತಿದ್ದಾನೆ
ಬೀದಿ ಬದಿಯ ಅನಾಥ ರಾಮ
ವಸತಿಗಾಗಿ ಕಣ್ಣೀರಿಡುತ್ತಿದ್ದಾನೆ
ಗುಜರಾತಿನ ಭಕ್ತ ಮೋದಿ ರಾಮ
ಅಧಿಕಾರಕ್ಕಾಗಿ ರಕ್ತ ಕುಡಿಯುತ್ತಿದ್ದಾನೆ
ಹಾಡು ಕಟ್ಟುವ ಕವಿ ರಾಮ
ಸಾಲು ಕೆಂಪಾದುದಕ್ಕೆ ನಿಟ್ಟುಸಿರಿಡುತ್ತಿದ್ದಾನೆ.





ಡಾ|| ರಂಗಾರೆಡ್ಡಿ ಕೋಡಿರಾಂಪುರ
೩, ೧೯೪೩, ಇರುವಂತೆ, ವಿ. ವಿ. ಪುರ ಬಡಾವಣೆ
ಗೌರಿಬಿದನೂರು-೫೬೧ ೨೦೮

# ಪ್ರಾಚೀನ ವೀರ ಮತ್ತು ತ್ಯಾಗದ ತವರು ಹರಿಹರ ಗ್ರಾಮ



**ಬೆಂ**ಗಳೂರು ಗ್ರಾಮಾಂತರ ಜಿಲ್ಲೆಯ ಸಾತನೂರು ಹೋಬಳಿಯ ಹರಿಹರ ಗ್ರಾಮಕ್ಕೆ ಪ್ರಾಗೈತಿಹಾಸಿಕ ಕಾಲದ ಇತಿಹಾಸದ ನಂಟು ಇದ್ದು ನಿರಂತರವಾಗಿ ಅದು ತನ್ನ ವೀರ ಮತ್ತು ಬಲಿದಾನದ ಪರಂಪರೆಯನ್ನು ಉಳಿಸಿಕೊಂಡು ಬಂದಿದೆ. ಇಲ್ಲಿಯ ಕುಪ್ಪೆದೊಡ್ಡಿ ಎಂಬಲ್ಲಿ ಪ್ರಾಗೈತಿಹಾಸಿಕ ಕಾಲಕ್ಕೆ ಸೇರುವ ಬೃಹತ್ ಶಿಲಾಯುಗದ (ಕಾಲ : ಕ್ರಿ.ಪೂ. ಸುಮಾರು ೮೦೦) ಶಿಲಾ ಸಮಾಧಿಗಳು ಹೇರಳವಾಗಿದ್ದು ಅವುಗಳಲ್ಲಿ ಎರಡು ಶಿಲಾವೃತ್ತ ಸಮಾಧಿ ಸ್ಮಾರಕಗಳು ವಿಶಿಷ್ಟವಾಗಿವೆ. ಇಲ್ಲಿಯೇ ನಾಲ್ಕು ಪ್ರಾಚೀನ ವೀರಗಲ್ಲುಗಳು ಸಹ ಇದ್ದು ಅವು ಕ್ರಿ. ಶ. ಸುಮಾರು ಹತ್ತನೆಯ ಶತಮಾನಕ್ಕೆ ಸೇರಿವೆ.

ಈ ಹರಿಹರ ಗ್ರಾಮದ ಬಸವೇಶ್ವರ ದೇವಾಲಯದ ಆಸುಪಾಸಿನಲ್ಲಿ ಏಳು ವೀರ ಮತ್ತು ಮೂರು ಮಾಸ್ತಿ ಕಲ್ಲುಗಳು ಉಳಿದಿವೆ. ಇವುಗಳಲ್ಲಿ ಯುದ್ಧದ ಚಿತ್ರಣ ನೀಡುವ ನಾಲ್ಕು ಹಂತಗಳ ವೀರಗಲ್ಲೊಂದು ಪ್ರಮುಖವಾಗಿದ್ದು ಅದು ಏಳೂವರೆ ಅಡಿ ಎತ್ತರ ಹಾಗೂ ಆರೂವರೆ ಅಡಿ ಅಗಲವಾಗಿದ್ದು ಪ್ರಥಮ ಹಂತದಲ್ಲಿ ಯುದ್ಧಕ್ಕೆ ವೀರನನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಮೆರವಣಿಗೆ ಮಾಡುತ್ತಾ ಸಂಗೀತ ನೃತ್ಯಗಳೊಡನೆ ಕರೆದೊಯ್ಯುವ ದೃಶ್ಯವಿದ್ದು ಎರಡನೇ ಹಂತದಲ್ಲಿ ವೀರ ತನ್ನ ಅಶ್ವದಳದ ಸಹಾಯದಿಂದ ಶತ್ರುಗಳನ್ನು ಎದುರಿಸುತ್ತಿದ್ದಾನೆ. ಮೂರನೇ ಹಂತದಲ್ಲಿ ಮಡಿದ ಯೋಧರನ್ನು ಅಪ್ಸರೆಯರು ಕೈಲಾಸಕ್ಕೆ ಕರೆದೊಯ್ಯುವ ಚಿತ್ರಣವಿದ್ದು ನಾಲ್ಕನೆಯ ಹಂತದಲ್ಲಿ ಕೈಲಾಸದಲ್ಲಿ ವೀರರು ದೇವರನ್ನು ಭಜಿಸುವ ಚಿತ್ರಣವಿದೆ. ಕಾಲದ ದೃಷ್ಟಿಯಿಂದ ಈ ವೀರಗಲ್ಲು ೧೨ನೇ ಶತಮಾನಕ್ಕೆ ಸೇರಿದೆ. ಒಟ್ಟಾರೆ ಈ ಎಲ್ಲಾ ವೀರಗಲ್ಲು, ಮಾಸ್ತಿ ಕಲ್ಲುಗಳನ್ನು ಸ್ಥಳೀಯ ಗ್ರಾನೈಟ್ ಶಿಲೆಗಳಿಂದ ರಚಿಸಿದ್ದು ಇವೆಲ್ಲಾ ಕ್ರಿ. ಶ. ಹತ್ತನೇ ಶತಮಾನದಿಂದ ಹದಿನಾರನೇ ಶತಮಾನಕ್ಕೆ ಸೇರಿವೆ.



ಈ ಗ್ರಾಮವು ಮಾಸ್ತಿ ಪದ್ಧತಿ ಅನುಸರಿಸುತ್ತಿದ್ದ ಸ್ಥಳ ಎಂಬುದಕ್ಕೆ ಕುರುಹಾಗಿ ಮೂರು ಮಾಸ್ತಿ ಕಲ್ಲುಗಳ ಸ್ಮಾರಕಗಳಿವೆ. ಎರಡು ಸ್ಮಾರಕಗಳಲ್ಲಿ ಕಂಬದಿಂದ ಹೊರಟ ಒಂದು ಕೈಯಿರುವ ಪ್ರಧಾನ ಚಿತ್ರವನ್ನು ಹೊಂದಿದ್ದು ಮೇಲಿನ ಹಂತದಲ್ಲಿ ವೀರನ ಹೋರಾಟ ಮತ್ತೊಂದರಲ್ಲಿ ವೀರ ಮತ್ತು ಸತಿಯರ ಚಿತ್ರಣವಿದ್ದರೆ ಮೂರನೆಯದರಲ್ಲಿ ಸತಿಪದ್ಧತಿ ಅನುಸರಿಸಿದ ಹೆಣ್ಣಿನ ಚಿತ್ರಣ ಮಾತ್ರವಿದೆ. ಇಲ್ಲಿನ ಮಾಸ್ತಿ ತೋಪಿನ ಬೋರೆ ಎಂಬಲ್ಲಿ ಎತ್ತರವಾದ ಮಣ್ಣಿನ ವೇದಿಕೆ ಬೂದಿ ವಿಶ್ರಿತವಾಗಿದ್ದು, ಇಲ್ಲಿ ಮಾಸ್ತಿ ಪದ್ಧತಿ ಅನುಸರಿಸುತ್ತಿದ್ದ ಕುರುಹು ಉಳಿದುಬಂದಿದೆ. ಈಗಿನ ಲಿಂಗಯ್ಯ ಎಂಬ ಪೂರ್ವಜರ ಹಿರಿಯ ಮಹಿಳೆಯೊಬ್ಬಳು ಸತಿಪದ್ಧತಿಯ ಚಿತೆ ಏರುವಾಗ ಸಾಕಿದ ನಾಯಿಯು ಸಹ ಆಕೆಯೊಡನೆ ಚಿತೆಗೆ ಪ್ರವೇಶಿಸಿ ಪ್ರಾಣಾರ್ಪಣೆ ಮಾಡಿದ ಪ್ರತೀತಿ ಇದೆ. ಈ ಗ್ರಾಮದಲ್ಲಿ ಜೈನರೂ ಸಹ ನೆಲೆಸಿದ್ದರು ಎಂಬುದಕ್ಕೆ ಕುರುಹಾಗಿ ಇಲ್ಲಿನ ಶ್ರವಣನ ಒಡ್ಡು ಎಂಬಲ್ಲಿ ಜೈನ ತೀರ್ಥಂಕರನ ಮೂರ್ತಿ ಲಭಿಸಿದೆ. ಪ್ರಾಯಶಃ ಜೈನ ಬಸದಿಯೊಂದು ಈ ಸ್ಥಳದಲ್ಲಿ ಇದ್ದಿರಬೇಕು.

ಪ್ರಾಚೀನ ವೀರ ಮತ್ತು ತ್ಯಾಗದ ಅವಶೇಷಗಳ ತವರಾಗಿರುವ ಈ ಸ್ಮಾರಕಗಳಿಗೆ ರಕ್ಷಣೆಯ ಅವಶ್ಯಕತೆ ಇದೆ.

ಮುತ್ತುರಾಜು
ನಂ. ೩೩೩೩, ೪೦ ಅಡಿ ಮುಖ್ಯರಸ್ತೆ
ಕುಮಾರಸ್ವಾಮಿ ಬಡಾವಣೆ
೨ನೇ ಹಂತ, ಬೆಂಗಳೂರು - ೫೬೦ ೦೭೮



# ಉಲ್ಲಂಘನೆ

**ಉ**ಲ್ಲಂಘನೆ ಉದ್ಧಟತನವಲ್ಲ; ಮೌಲ್ಯವೂ ಹೌದು. ಉಲ್ಲಂಘನೆಗೆ ವೈಯಕ್ತಿಕ ಹಿತಾಸಕ್ತಿಯೇ ಪ್ರಧಾನವಾದಾಗ ಉದ್ಧಟತನವೆನಿಸುತ್ತದೆ: ಸಮಷ್ಟಿ ಕಾಳಜಿಯೇ ಪ್ರಧಾನವಾದಾಗ ಮೌಲ್ಯವೆನಿಸುತ್ತದೆ. ವ್ಯಷ್ಟಿ ಕಾಳಜಿ ಸ್ವಾರ್ಥವಾದರೆ, ಸಮಷ್ಟಿ ಕಾಳಜಿ ನಿಸ್ವಾರ್ಥ. ಅಂತೆಯೇ ನಿಸ್ವಾರ್ಥ ಮೂಲದ ಹಾಗೂ ಸಮಷ್ಟಿ ಕಾಳಜಿಯನ್ನೇ ಪ್ರಧಾನ ಆಶಯವನ್ನಾಗಿಸಿ ಕೊಂಡ ಉಲ್ಲಂಘನೆ ಶ್ರೇಷ್ಠವೂ ಮಾದರಿಯೂ ಆದ ಆದರ್ಶವಾಗುತ್ತದೆ.

ಶರಣರು ಮಾಡಿದ್ದು ಇದನ್ನೇ. ಸಂಬೋಳಿ ನಾಗಿದೇವ ಪ್ರಪ್ರಥಮ ಬಾರಿಗೆ ಯಜಮಾನ ಸಂಸ್ಕೃತಿಯನ್ನು ಉಲ್ಲಂಘಿಸಿದ. ಸವರ್ಣೀಯರ ಓಣಿಯಲ್ಲಿ ಹೆಜ್ಜೆ ಇಡುತ್ತಲೇ 'ಸಂಬೋಳಿ' ಅನ್ನುವುದನ್ನು ನಿಲ್ಲಿಸಿದ. ಇದು ವೈಯಕ್ತಿಕ ಪ್ರತಿಷ್ಠೆಯಿಂದ ಪ್ರಾದುರ್ಭವಿಸಿದ್ದಲ್ಲ. 'ಸಮಷ್ಟಿ ಸ್ವಾರ್ಥ'ದಿಂದ ಸ್ವಾಭಿಮಾನದಿಂದ ಆದದ್ದು. 'ಸಂಬೋಳಿ' ಉವಾಚವನ್ನು ನಾಗಿದೇವ ನಿಲ್ಲಿಸಿದ್ದು ಕೇವಲ ಸ್ವಾಭಿಮಾನವಷ್ಟೇ ಅಲ್ಲ; ಮೇಲ್ವರ್ಗದವರ ಮೇಲರಿಮೆಯನ್ನು ಪ್ರಶ್ನಿಸಿದ ಪರಿಯೂ ಹೌದು; ಹಾಗೂ ಕೆಳವರ್ಗದವರ 'ಕೀಳರಿಮೆ'ಯನ್ನು ಹೋಗಲಾಡಿಸುವ ದಿಟ್ಟ ಪ್ರಯತ್ನವೂ ಹೌದು.

ಮಹಾದೇವಿಯಕ್ಕ ಕೌಶಿಕರಾಜನ ಲಕ್ಷ್ಮಣರೇಖೆಗಳನ್ನು ಉಲ್ಲಂಘಿಸಿದಳು. ಆಕೆ ಪ್ರಶ್ನಿಸಿದ್ದು, ಪ್ರತಿಭಟಿಸಿದ್ದು ಕೇವಲ ಕೌಶಿಕನನ್ನಲ್ಲ; ಕೌಶಿಕತನವನ್ನು. ಕೌಶಿಕತನವನ್ನು ಪ್ರಶ್ನಿಸುವುದು ಹಾಗೂ ಆತನ ಆಶಯಗಳನ್ನು ಉಲ್ಲಂಘಿಸುವುದೆಂದರೆ ವೈಯಕ್ತಿಕ ಸ್ವಾತಂತ್ರ್ಯವನ್ನು ಸಮಾನತೆಯನ್ನು ರಕ್ಷಿಸಿಕೊಳ್ಳುವುದು ಎಂದರ್ಥ. ಇಲ್ಲಿ ಕೌಶಿಕ ಕೇವಲ ವ್ಯಕ್ತಿಯಲ್ಲ; ರಾಜ್ಯವೊಂದರ ಅರಸ. ಅರಸನ ಕಟ್ಟಾಜ್ಞೆಯನ್ನು ಮೀರುವುದೆಂದರೆ ರಾಜಶಾಂತಿಯ ದಬ್ಬಾಳಿಕೆ, ಕ್ರೌರ್ಯ, ಸರ್ವಾಧಿಕಾರಿ ಮನೋಭಾವ ಇತ್ಯಾದಿಯೆಲ್ಲವನ್ನೂ ನಿರಾಕರಿಸುವುದೆಂದರ್ಥ. ಇಂಥ ಸಮಷ್ಟಿ ಅನ್ಯಾಯಗಳಿಗಾಗಿ ಹೋರಾಡುವುದು ಹಾಗೂ ಅಂಥ ವ್ಯವಸ್ಥೆಯ ನಿಯಮಗಳನ್ನು ಮೀರುವುದು ಶ್ರೇಷ್ಠವಾದುದು. ಅಂತೆಯೇ ಅದರ ಉಲ್ಲಂಘನೆ ಶ್ರೇಷ್ಠ ಆದರ್ಶವೂ ಆಗಿದೆ.

ಗಾಂಧೀಜಿಯವರು ಬ್ರಿಟಿಷ್ ಸರ್ಕಾರದ ಕಟ್ಟಪ್ಪಣೆಗಳನ್ನು ಉಲ್ಲಂಘಿಸಿದರು. ಬ್ರಿಟಿಷ್ ಸರಕಾರ ಹೊರಡಿಸುವ ಫರ್ಮಾನುಗಳಿಗೆ ಕ್ಯಾರೆ ಎನ್ನಲಿಲ್ಲ; ಅವನ್ನು ಕಾಲಕಸವೆಂದು ಬಗೆದರು. ಹಾಗಾದರೆ ಗಾಂಧೀಜಿ ಮಾಡಿದ್ದು ಉದ್ಧಟತನದ ವರ್ತನೆಯೆ ? ಖಂಡಿತ ಅಲ್ಲ. ಪ್ರತಿಷ್ಠೆ ಹಾಗೂ ನನ್ನದೇ ಸ್ಥಾಪನೆಯಾಗಬೇಕೆಂಬ ಅಹಂ ಮೂಲದ ಯಾವುದೇ ನಿರಾಕರಣೆಯೂ ಉದ್ಧಟತನವಾಗುತ್ತದೆ. ಆದರೆ, ಗಮನಿಸಬೇಕಾದುದೆಂದರೆ ಗಾಂಧೀಜಿಯವರಿಗೆ ಇಂಥ ಯಾವ ತೆವಲುಗಳಿರಲಿಲ್ಲ ಎಂಬುದನ್ನು.

ಮಹಾತ್ಮಾಜೀಯವರಿಗೆ ಸಮಾಜವೊಂದರ ಸರ್ವಾಂಗೀಣ ಅಭಿವೃದ್ಧಿಯ ಕನಸುಗಳಿದ್ದವು; ಸರ್ವರ ಉದ್ಧಾರದ ಅನನ್ಯ ಅಭೀಪ್ಸೆಗಳಿದ್ದವು. ಅಂತೆಯೇ ಅವರು ಬ್ರಿಟಿಷ್ ಸರ್ಕಾರದ ಕಾನೂನು - ಕಟ್ಟಪ್ಪಣೆಗಳನ್ನು ತಿರಸ್ಕರಿಸಿದ್ದು ಉದ್ಧಟ ತನದಿಂದಲ್ಲ; ಶ್ರೇಷ್ಠ ಉದ್ದೇಶ, ಆದರ್ಶ ಇತ್ಯಾದಿಯಾದ ಮಹತ್ಕಾರಣಗಳಿಂದ. ಆದ್ದರಿಂದ ಸಾಮಾಜಿಕ ಸಂಚಲನೆಯನ್ನೇ ಮಹೋದ್ದೇಶವಾಗಿಸಿಕೊಂಡಿದ್ದ 'ಉಲ್ಲಂಘನೆ' ಶ್ರೇಷ್ಠ ಆದರ್ಶವೂ, ಮಾದರಿಯ ಮೌಲ್ಯವೂ ಆಗಿದೆ.

ಬಿ. ಶರಣಪ್ಪ ಸತ್ಯಂಪೇಟೆ
ಕಲಬುರ್ಗಿ

# ರಕ್ತ ಸಂಬಂಧ

**ನಾ**ವು ಕೆಲವು ನಿರ್ದಿಷ್ಟ ನಿಕಟ ಸಂಬಂಧಗಳನ್ನು ರಕ್ತ ಸಂಬಂಧವೆಂದು ಕರೆಯುತ್ತೇವೆ. ವಾಸ್ತವವಾಗಿ ಇದು ರಕ್ತ ಸಂಬಂಧದ ಪರಂಪರಾಗತವಾದ ಮತ್ತು ಪರಿಮಿತವಾದ ಪರಿಕಲ್ಪನೆ. ಈ ಹೊತ್ತು ಈ ಕಲ್ಪನೆ ಬದಲಾಗಬೇಕಾದ, ಅರ್ಥಾತ್ ವ್ಯಾಪಕವಾಗಬೇಕಾದ ಅಗತ್ಯವಿದೆ. ವೈಜ್ಞಾನಿಕ, ತಾತ್ವಿಕ ಎರಡು ನಿಟ್ಟುಗಳಲ್ಲೂ ನಾವು ಆಲೋಚಿಸಿ ರಕ್ತಸಂಬಂಧದ ಲಕ್ಷಣೀಕರಣವನ್ನು ಪರಿಷ್ಕರಿಸಬೇಕಾಗಿದೆ.

ಮಾನವ ರಕ್ತವನ್ನು ವೈದ್ಯಕೀಯ ವಿಜ್ಞಾನ ಅನೇಕ ಗುಂಪುಗಳನ್ನಾಗಿ ವರ್ಗೀಕರಿಸಿದೆ– ಎ,ಬಿ,ಒ ಇತ್ಯಾದಿ. ಈ ದೃಷ್ಟಿಯಿಂದ ರಕ್ತ ಸಂಬಂಧಿಗಳೆನ್ನಲಾದ ತಂದೆ-ಮಕ್ಕಳ, ತಾಯಿ-ಮಕ್ಕಳ ಅಥವಾ ಸೋದರ-ಸೋದರಿಯರ ರಕ್ತದ ಗುಂಪುಗಳು ಬೇರೆ ಬೇರೆಯಾಗಿರಬಹುದು; ಮಾತ್ರವಲ್ಲ, ಪರಸ್ಪರ ವಿರುದ್ಧವಾಗಿರುವುದೂ ಸಾಧ್ಯ ! ತಂದೆಯ ಅಥವಾ ತಾಯಿಯ ರಕ್ತ ಮಗನಿಗೆ ಒಗ್ಗದಿರಬಹುದು, ಅಣ್ಣನ ರಕ್ತ ತಮ್ಮನ ರಕ್ತಕ್ಕೆ ಹೊಂದಿಕೆಯಾಗದಿರಬಹುದು; ಪ್ರತಿಯಾಗಿ ಯಾವನೋ ಅಪರಿಚಿತ ಅಜ್ಞಾತ (ಜ್ಞಾತಿಯಲ್ಲ!) ವ್ಯಕ್ತಿಯ ರಕ್ತ ನಮ್ಮ ರಕ್ತದ ಗುಂಪಿಗೆ ಸೇರಿರಬಹುದು !

ನೀರಿಗಿಂತ ರಕ್ತದ ಸಾಂದ್ರತೆ ಹೆಚ್ಚು ಎಂಬ ಉಕ್ತಿ ಪೂರ್ಣ ಸತ್ಯವಲ್ಲ. ತಂದೆ ತಾಯಿಗಳನ್ನು ಕೊಲ್ಲುವ ಮಕ್ಕಳು, ಒಡಹುಟ್ಟಿದವರನ್ನು ಕೊಲ್ಲುವ ಸಹೋದರರು ಎಲ್ಲ ಕಾಲ ದೇಶಗಳಲ್ಲೂ ಬಹಳ ಮಂದಿ ಉಂಟಲ್ಲವೆ ? ನಂಟಿನ ಪರಿಧಿಯಾಚೆಗಿರುವವರು ಎಷ್ಟೋ ಸಲ ಉಪಕರಿಸುವುದಿಲ್ಲವೆ ? ಹತ್ತಿರದ ನೆತ್ತರು ಎನ್ನುವುದು ಹಲವು ಸಂದರ್ಭಗಳಲ್ಲಿ ಬರಿಯ ಭ್ರಮೆಯಷ್ಟೆ!

ಆದ್ದರಿಂದ, ವಿಶಾಲತರ ರಕ್ತಸಂಬಂಧದ ಬಗ್ಗೆ ನಾವು ಚಿಂತಿಸುವುದು ಲೇಸು. ಮನುಷ್ಯ ರಕ್ತವೆಲ್ಲ ಒಂದು. ಅದರ ಬಣ್ಣ ಒಂದೇ. ಕೆಂಪು. ಅಂತೆಯೇ ಅದರ ಗುಣ ಮತ್ತು ಕಾರ್ಯ ಒಂದೇ. ಈ ಅರಿವು ನಮ್ಮನ್ನು ವಿಶ್ವಕುಟುಂಬದ ಪರಿಕಲ್ಪನೆಗೆ ಕರೆದೊಯ್ಯುತ್ತದೆ, ''ಮನುಷ್ಯ ಜಾತಿ ತಾನೊಂದೆ ವಲಂ !'' ಎಂಬ ಸತ್ಯವನ್ನು ಸಂಸ್ಥಾಪಿಸುತ್ತದೆ. ಲೋಕದ ಜನರೆಲ್ಲ ಒಂದೇ ಕುಟುಂಬದವರು; ರಕ್ತಸಂಬಂಧಿಗಳು (ಜೀವರಾಶಿಯೆಲ್ಲ ಒಂದು ಎಂದು ತಿಳಿಯುವ ಹಂತ ಇನ್ನೂ ಮುಂದಿನದು). Under Heaven one Family'' (ವ್ಯೋಮದಡಿ ಏಕ ಕುಟುಂಬ) ಎಂಬ ಧ್ಯೇಯ ವಾಕ್ಯವನ್ನುಳ್ಳ ಒಂದು ಅಂತರರಾಷ್ಟ್ರೀಯ ಸಂಘ (International Fellowship) ಹಿಂದೆ ಇದ್ದಿತಂತೆ; ಈಗ ಇದೆಯೋ ಇಲ್ಲವೋ ತಿಳಿಯದು.

ಈ ದಿಶೆಯಲ್ಲಿ ಪ್ರಾಚೀನ ಕಾಲದಲ್ಲೇ ಯೋಚಿಸಿದವರಿದ್ದರು ಎಂಬುದಕ್ಕೆ ಸಾಕ್ಷಿ ಭವಭೂತಿಯ ಈ ಸುಭಾಷಿತ:

*ಅಯಂ ನಿಜಃ ಪರೋ ವೇತಿ ಗಣನಾ*
*ಲಘುಚೇತಸಾಮ್*
*ಉದಾರಚರಿತಾನಾಂ ತು ವಸುಧೈವ ಕುಟುಂಬಕಮ್.*

''ಇವನು ನನ್ನವನು, ಇವನು ಬೇರೆಯವನು ಎಂಬ ಪರಿಗಣನೆ ಲಘು ಮನಸ್ಕರದು; ಉದಾರ ಚರಿತರ ಪಾಲಿಗೆ ಪ್ರಪಂಚವೇ ಒಂದು ಕುಟುಂಬ !''

ಇದಕ್ಕೆ ಪೂರಕವಾಗಿ ಶ್ರೀ ಹರ್ಷ ಕವಿಯ 'ನಾಗಾನಂದ' ನಾಟಕದ ಈ ಉಕ್ತಿಯೂ ಪರಿಭಾವನೀಯ:

*ಆತ್ಮೀಯಃ ಪರ ಇತ್ಯಯಂ ಖಲು ಕೃತಮ್*
*ಸತ್ಯಂ ಕೃಪಾಯಾಃ ಕ್ರಮಃ ॥*

''ಇವನು ನನ್ನವನು, ಇವನು ಅನ್ಯ ಎಂದು ಕರುಣೆಗೆ ಭೇದವೆಲ್ಲಿದೆ ?''

ಎಲ್ಲರೂ ನಮ್ಮವರೇ, ನಾವೆಲ್ಲ ಒಂದು ಎಂಬ ತಿಳಿವಳಿಕೆ ಮೂಡುವುದು, ನಂಬಿಕೆಯಾಗಿ ನಿಲ್ಲುವುದು ಸುಲಭವಲ್ಲ; ಹಾಗಾಗದೆ ಮನುಕುಲದ ಶ್ರೇಯ ಮತ್ತು ಸರ್ವೋದಯ ಸಾಧ್ಯವಿಲ್ಲ.

ಡಾ॥ ಸಿ. ಪಿ. ಕೃಷ್ಣಕುಮಾರ್
೨೭೬೫/೧೯, 'ಭಾರತಿ', ೬ನೆಯ ಅಡ್ಡರಸ್ತೆ, ೪ನೆಯ ಮುಖ್ಯರಸ್ತೆ
ವಿನಾಯಕನಗರ, ಮೈಸೂರು-೧೨

### ಹನಿಗವನಗಳಿಗೆ ಆಹ್ವಾನ

**'ಹೆಣ್ಣು'** ಎಂಬ ಹಾಸ್ಯಹನಿಗವನ ಸಂಕಲನವನ್ನು ಹೊರತರಲು ಉದ್ದೇಶಿಸಿದೆ. ಆಸಕ್ತಿಯುಳ್ಳವರು ''ಹೆಣ್ಣು'' ವಿಷಯಕ್ಕೆ ಸಂಬಂಧಪಟ್ಟಂತಹ ಆರು ಹಾಸ್ಯ ಹನಿಗವನಗಳನ್ನು–

**ಕೋ. ಲ. ರಂಗನಾಥ ರಾವ್, ಸಿ-೨, ಸಿ.ಪಿ.ಡಬ್ಲ್ಯೂ.ಡಿ. ಕಾಲೋನಿ, ಗೇಟ್ ನಂ. - ೨, ವಿಜಯನಗರ, ಬೆಂಗಳೂರು-೪೦,** ವಿಳಾಸಕ್ಕೆ ೩೦-೧೧-೨೦೦೨ ರೊಳಗೆ ಕಳುಹಿಸಲು ಕೋರಿದೆ. ಹನಿಗವನಗಳು ಆರು ಸಾಲು ಮೀರಬಾರದು.

HOSATHU Kannada Monthly / June 2002 Rs. 10
RNI Regn. No. KARKAN/1999/614 REGD. CPMG / KA / BGE – 7 / 2002 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published ... (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna